ಭಾವನಾ



ಚಿತ್ರ: ಸಂದೀಪ್ ಶಂಕರ್

ಆಕರ: ಕೈ ಸ್ಮರಣಿಕೆ



ಮಣ್ಣನ್ನು ಸುಟ್ಟು ಮಾಡಿದ ಇಟ್ಟಿಗೆಯ ಗೋಡೆಗಳೂ ಎರಡು ಮಳೆ ಬಿದ್ದರೆ ಹಸಿರಾಗಿ ಕೊನರುತ್ತವೆ. ಬಿದ್ದು ಪೆಟ್ಟಾಗಿ ಅಳುತ್ತಿರುವ ಮಗುವೂ ಹೊಸ ಆಟದ ಕರೆ ಬಂದಿದ್ದೆ, ಕಂಬನಿಗಣ್ಣಲ್ಲೇ ನಕ್ಕು, ನೋವು ಮರೆತು ಓಡತ್ತದೆ.

ಸಿಗ್ನಲ್ಲುಗಳ ಸಾಮ್ರಾಜ್ಯದಲ್ಲಿ ಬರೆ ಕೆಂಪು ಸಿಗ್ನಲ್ಲುಗಳನ್ನೇ ನಾವು ಹುಡುಕಿ ನೋಡಿ ನಿಲ್ಲಬೇಕಾಗಿಲ್ಲ. ಹಸಿರು ಸಿಗ್ನಲ್ಲುಗಳು ಪ್ರಕೃತಿಯಲ್ಲೇ ಇವೆ. ನೋಡ ಬಯಸಿದ್ದನ್ನೇ ನಾವು ಕಾಣಬಲ್ಲೆವು.

ಪ್ರತಿ ಮುಂಗಾರು, ನಿಸರ್ಗಕ್ಕೊಂದು ಪುನರುಜ್ಜೀವನ ಕಾಲ. ಎಂಥ ಸಂತೆಯಲ್ಲೂ ತನ್ನ ಏಕಾಂತವನ್ನು ಕಾಪಾಡಿಕೊಳ್ಳಬಲ್ಲ ಮನುಷ್ಯನಿಗೆ, ಪ್ರತಿ ಹೊಸ ದಿನವೂ ಒಂದು ಹೊಸ ಪುನಶ್ಚೇತನದ ಅವಕಾಶ.

'ಭಾವನೆ' ಅಂದಾಕ್ಷಣ ಅದು ಬರೇ ಪಿಟೀಲು ವಾದನದ ಹಿನ್ನಲೆಯ 'ಗೋಳೋ' ಅಲ್ಲ. ಖುಷಿ ಲವಲವಿಕೆ, ಹೊಸ ಹುರುಪುಗಳು ನಮ್ಮನ್ನು ಥಕ್ಕನೆ ಇದ್ದಲ್ಲೆ ಹೊಸಬರನ್ನಾಗಿಸಬಲ್ಲವು. ಪ್ರತಿ ಕ್ಷಣವನ್ನೂ ತಾಜಾ ಆಗಿ ನೋಡುವತ್ತ, ಪ್ರತಿ ಹೊಸ ಮುಖವನ್ನೂ ತೆರೆದ ಮನಸ್ಸಿನಿಂದ ನೋಡುವತ್ತ ಜೀವಸಂಕುಲದ ಮೂಲ ತುಡಿತವಿದೆ.

ನಮ್ಮ ನಡುವೆ ಹಸಿರು ಸಿಗ್ನಲ್‌ಗಳಂತಿರುವ ಕಲಾವಿದ ಚಂದ್ರನಾಥ ಆಚಾರ್ಯ, 'ಸಾಹಿತ್ಯ ಬಂಧು' ಚಿ. ಶ್ರೀನಿವಾಸರಾಜು ಅವರು ಈ ಸಂಚಿಕೆಯಲ್ಲಿರುವುದು ನಮಗೊಂದು ಅಭಿಮಾನದ ಸಂಗತಿ.

ಬರುತಿರುವ ಮಳೆಗಾಲ ಎಲ್ಲರಿಗೂ ಎಂದಿಲ್ಲದ ಹಸಿರು ತರಲಿ.

ಸಂಪಾದಕ



ಸೃಜನ್

# ಭಾವ ಲೋಕ

## ಕತೆಗಳು



## ಶತಮಾನದ ಮೆಲುಕು



## ವಿಶ್ವ ಭಾರತಿ





# ಭಾವನಾ

ಸಂಪುಟ -1 ಸಂಚಿಕೆ - 3

ಜೂನ್ 2000



ಪ್ರಕಾಶಕರು, ಮುದ್ರಕರು, ಮಾಲಿಕರು

**ವಿಜಯ ಸಂಕೇಶ್ವರ**

ಆನಂದ್ ಪ್ರಿಂಟರ್ಸ್ ಅಂಡ್ ಪಬ್ಲಿಷರ್ಸ್

ಪ್ರಧಾನ ಸಂಪಾದಕರು

**ಸಂತೋಷಕುಮಾರ ಗುಲ್ವಾಡಿ**

ಸಂಪಾದಕ

**ಜಯಂತ ಕಾಯ್ಕಿಣಿ**

ಮುಖಪುಟ ಜಲವರ್ಣ ಚಿತ್ರ: ಚಂದ್ರನಾಥ ಆಚಾರ್ಯ

ಸಂಚಿಕೆಯ ಕಲಾವಿದರು: ಇಕ್ಬಾಲ್ ಅಹ್ಮದ್, ಸೃಜನ್, ಶಂಕರ ಪಾಟೀಲ, ಸ್ಮಿತಾ, ಬಸವರಾಜು, ಶ್ರೀಪಾದ್, ಸಂಗು.

**ಸಂಪಾದಕೀಯ ಕಾರ್ಯಾಲಯ**

ನಂ. 32, 2ನೆಯ ಮುಖ್ಯರಸ್ತೆ, ವೈಯಾಳಿಕಾವಲ್

ಬೆಂಗಳೂರು - 560 003

ದೂರವಾಣಿ : 3365312, 3365313

ಫ್ಯಾಕ್ಸ್: 080-3340311

**ಪ್ರಧಾನ ಕಛೇರಿ**

ಗಿರಿರಾಜ ಅನೆಕ್ಸ್

ಸರ್ಕ್ಯೂಟ್ ಹೌಸ್ ರಸ್ತೆ, ಹುಬ್ಬಳ್ಳಿ

ದೂರವಾಣಿ: 0836-253656, 253657

ಫ್ಯಾಕ್ಸ್: 0836-253630



## ಗೋಪಾಲಕೃಷ್ಣ ಪೈ

# ಮೆಟ್ಟಲೇರುವ ಗಡಿಬಿಡಿಯಲ್ಲಿ ಕೊಡೆ ಮರೆತವನು



ಮೂವತ್ತಾರು ವರ್ಷಗಳ ಉಲ್ಲಾಸ ದೇಶಪಾಂಡೆ ಇನ್ನೂ ಮದುವೆಯಾಗದೇ ಇದ್ದರೂ ಅದಕ್ಕಾಗಿ ಖೇದಪಟ್ಟಿರಲಿಲ್ಲ. ಈ ದೇಶದ ಸಾಮಾನ್ಯ ಸಮಸ್ಯೆಗಳಾದ ಜಾತೀಯತೆ, ಹೊಲಸು ರಾಜಕೀಯ, ಕ್ಷುಲ್ಲಕ ಕಾರಣಗಳಿಗಾಗಿ ದೊಂಬಿ, ವರ್ಷಾನುಗಟ್ಟಲೆ ನ್ಯಾಯ ಅರಸುತ್ತಾ ಕೋರ್ಟು, ಕಛೇರಿಗಳ ಸುತ್ತ ಅಲೆದಾಡುವುದು, ಹಕ್ಕಿನಿಂದ ಸಿಗಬೇಕಾದ ನಾಗರಿಕ ಸವಲತ್ತುಗಳಿಗಾಗಿ ಕೂಡಾ ಲಂಚ ಕೊಡಬೇಕಾಗಿರುವುದು, ಕನಿಷ್ಠ ನೀರು, ಹಾಲು, ವಿದ್ಯುತ್ ಸರಬರಾಜು ಮಾಡಲೂ ಅಸಮರ್ಥವಾದ ಸರಕಾರ ಇಂಟರ್‌ನ್ಯಾಷನಲ್ ಮಾರುಕಟ್ಟೆಯಲ್ಲಿ ಸ್ಪರ್ಧಿಸುವ ಮಾತುಗಳ ನ್ನಾಡುವುದು, ಇವುಗಳ ಮಧ್ಯೆ ಯಾವುದೇ ಫಿಕರ್ ಇಲ್ಲದೇ ಫ್ಯಾಶನ್ ಶೋ, ಕಳಪೆ ಸಿನಿಮಾ ಮಾಡುತ್ತಾ, ನೋಡುತ್ತಾ ಕೆಟ್ಟ ಕನಸಿನ ಸ್ವರ್ಗದಲ್ಲಿ ಸಂಚರಿಸುವ ಜನರು-ಇವನ್ನೆಲ್ಲ ಕಂಡರೆ ಅವನಿಗೆ ಮೈ ಪರಚಿಕೊಳ್ಳುವಂತಾಗುತ್ತಿತ್ತು. ಈ ದೇಶವನ್ನು ಖಾಯಂ ಆಗಿ ತೊರೆದು ದೂರದ ದೇಶದಲ್ಲಿ ವಾಸಿಸಬೇಕು ಎಂಬ ನಿರ್ಧಾರಕ್ಕೆ ಅವನು ಬಂದಿದ್ದ.

ಉಲ್ಲಾಸ ದೇಶಪಾಂಡೆಯ ಬೆನ್ನಹಿಂದೆ ಎಂಬಿಎ ಡಿಗ್ರಿ ಇತ್ತು. ಹದಿಮೂರು ವರ್ಷ ಮುಂಬೈಯ ಅತಿ ದೊಡ್ಡ ಕಾರ್ಪೊರೇಟ್ ಕಂಪೆನಿಯಲ್ಲಿ

ಶ್ರೀಪಾದ್

ಫೈನಾನ್ಸ್ ಖಾತೆಯನ್ನು ನೋಡಿಕೊಂಡ ಅನುಭವ ಪಡೆದಿದ್ದ. ಎಳೆಯ ವಯಸಿನಲ್ಲಿ ಇಷ್ಟು ಸಾಧನೆಗೈದ ಇವನಿಗೆ ಇಂಡಿಯಾದಲ್ಲಿಯೇ ಉಜ್ವಲ ಭವಿಷ್ಯವಿದೆ ಎಂದು ಎಲ್ಲರೂ ಮಾತನಾಡಿಕೊಳ್ಳುವ ಹೊತ್ತಿಗೇ ಅವನು ಹಾಕಿದ ಮೊದಲ ಅರ್ಜಿಗೇ ಜರ್ಮನಿಯ ಮಲ್ಟಿನ್ಯಾಷನಲ್ ಕಂಪೆನಿ ಯೊಂದು ಅವನನ್ನು ಆರಿಸಿ, ಕೈ ತುಂಬ ಸಂಬಳ ಕೊಡುವ ಆಮಿಷ ತೋರಿಸಿ, ಸೆಳೆದುಕೊಂಡಿತು. ಸ್ಟಟ್‌ಗಾರ್ಟ್‌ನಲ್ಲಿ ಹೆಡ್‌ಕ್ವಾರ್ಟರ್ಸ್. ಸೆಂಟ್ರಲ್ ಏಶಿಯಾಕ್ಕೆ ಚೀಫ್. ತೆಳ್ಳಗಿನ ಸೌಷ್ಠವದ, ನಸುಗಪ್ಪಾದರೂ ಲಕ್ಷಣವಾಗಿರುವ, ವಿಷಾದದ ಕುತ್ತಿಗೆ ಹಿಚುಕುವಂತೆ ಕಟ್ಟಿದ ಟಾಯ್‌ನಿಂದ ಹೊರಸೂಸುವ ಪಕ್ಕಾ ಕಾರ್ಪೊರೇಟ್ ಎಕ್ಸಿಕ್ಯೂಟಿವ್ ಮುಗುಳ್ನಗೆ, ಮೂವತ್ತಾರಾದರೂ ಇನ್ನೂ ಇಪ್ಪತ್ನಾಲ್ಕರಂತೆ ಕಾಣುವ ಮುಖಭಾವ ಸಹೋದ್ಯೋಗಿಗಳಲ್ಲಿ ಅಸೂಯೆ ಹುಟ್ಟಿಸಿದರೂ ನಿಧಾನವಾಗಿ ಮೆಚ್ಚುಗೆ ಮೂಡಿಸಿತ್ತು. ಅದರ ಫಲವಾಗಿ ವೀಸಾ, ಪಾಸ್‌ಪೋರ್ಟ್‌ಗಳ ಮಧ್ಯದ ಬಿಡುವಿನಲ್ಲಿ ಅವನನ್ನು ಲಂಚ್‌ಗೆ,



ಡಿನ್ನರ್‌ಗೆ ಕರೆಯಲು ಅವರಲ್ಲಿ ಪೈಪೋಟಿ. ಕಂಪೆನಿಯ ಒಂದಿಬ್ಬರು ಹಿರಿಯ ಸಹೋದ್ಯೋಗಿಗಳು ಬಿಯರ್‌ನ ಗುಟುಕು ಸವಿಯುತ್ತಾ, ''ಹೋಗೋ ಮುನ್ನ ಮದುವೆಯಾಗೇ ಹೋಗಲ್ಲ? ನನ್ನ ಭಾಂಜಿಯೊಬ್ಬಳಿದ್ದಾಳೆ. ವೈ ನಾಟ್ ಸೀ ಹರ್ ವನ್ಸ್?'' ಎಂದು ಆರಂಭಿಸಿದ್ದರು. ಉಲ್ಲಾಸ ದೇಶಪಾಂಡೆ ಭುಜ ಹಾರಿಸಿ, ಮಾತು ತಳ್ಳಿದ್ದ.

ಮೂರು ನಾಲ್ಕು ದಿನಗಳಿಂದ ಹೀಗೆ ಸತತವಾಗಿ ಲಂಚ್, ಡಿನ್ನರ್ ಮಾಡಿ, ಮಾಡಿ ಹೊಟ್ಟೆ ಡುಬ್ಬೆನಿಸಿ, ಅಂದು ಪರೇಲ್‌ನ ತನ್ನ ಅತಿಥಿಯ ಮನೆಯಿಂದ ಹೊರಬಿದ್ದಾಗ ಟ್ಯಾಕ್ಸಿ ಹಿಡಿಯುವುದಕ್ಕಿಂತ, ಲೋಕಲ್ ಟ್ರೈನ್ ಹಿಡಿದೇ ಹೋಗುವುದು ಒಳ್ಳೆಯದು ಎಂದು ಉಲ್ಲಾಸ ದೇಶಪಾಂಡೆ ನಿರ್ಧರಿಸಿದ್ದ. ಟ್ರೈನ್‌ನ ಧಕ್ಕಾಮುಕ್ಕಿಯಲ್ಲಿ ಒಂದಷ್ಟು ವ್ಯಾಯಾಮ ನಡೆದು ಹೊಟ್ಟೆ ಸರಿಹೋದೀತು ಎಂದು ಪರೇಲ್‌ನಲ್ಲಿ ಟ್ರೈನ್ ಹಿಡಿದು ಅಂಧೇರಿಗೆ ಬಂದ. ಅಲ್ಲೂ ಬಸ್ ಹಿಡಿದು ವರ್ಸೊವಾಕ್ಕೆ. ಬಸ್‌ಸ್ಟಾಪಿನಿಂದ ಅವನ ಫ್ಲ್ಯಾಟಿಗೆ ಎರಡು ನಿಮಿಷಗಳ ಹಾದಿ. ರಾತ್ರಿ ಹತ್ತೂವರೆ ಘಂಟೆಯ ಕತ್ತಲಲ್ಲಿ, ಕಾಲು ಮಡಚಿ, ತೊಡೆಸಂದಿಯಲ್ಲಿ ಕೈಯಿಟ್ಟು ಮಲಗಿದಂತೆ ಬಿದ್ದ ರಸ್ತೆಯ ತಿರುವಿನಲ್ಲಿ ನಡೆದು, ತನ್ನ ಫ್ಲ್ಯಾಟಿಗೆ ಬಂದ. ತಾನು ಕೆಲಸ ಮಾಡುತ್ತಿರುವ ಕಂಪೆನಿ ಹಿಡಿದ ಮನೆ. ಇನ್ನು ಕೆಲವು ದಿನಗಳಲ್ಲೇ ಇದನ್ನು ಬಿಟ್ಟು ಹೋಗಬೇಕಾಗಿದೆ ಎಂದು ಕೀಲಿ ತೆಗೆದು, ಲೈಟ್ ಹಾಕಿದಾಗ ಎದುರಿಗೆ ಕಂಡದ್ದು ನೆಲದ ಮೇಲೆ ಬಿದ್ದ ಬಿಳಿಯ ಕವರ್ ಒಂದು. ಕವರ್‌ನ ಮೇಲೆ ಬರಿಯ ಹೆಸರು ಮಾತ್ರ. ಅಂಚೆಯಲ್ಲಿ ಬಂದರೆ ಇರುವ ಅಂಚೆ ಚೀಟಿ ಇರಲಿಲ್ಲ. ಓದುವ ಅಂಥ ಕುತೂಹಲವಿಲ್ಲದ ಕಾರಣ ಪಕ್ಕದ ಟೇಬಲ್ ಮೇಲೆ ಒಗೆದು, ಬೆಳಗಿನಿಂದ ಬಂಧನದಲ್ಲಿಡಲು ಕಾರಣವಾದ ಡ್ರೆಸ್ ತೆಗೆದ. ತಣ್ಣನೆಯ ನೀರಿನಿಂದ ಮುಖ ತೊಳೆದು, ತನ್ನ ಮನೆಯೊಳಗೆ ಧರಿಸುವ ಉಡುಪು ಧರಿಸಿ, ಸೋಫಾದ ಮೇಲೆ ಅಡ್ಡಾಗಿ, ಕವರ್ ಬಿಡಿಸುವಾಗ ರಾತ್ರಿಯ ಹನ್ನೊಂದು!

ಮಜಕೂರು-''ಮೊದಲೇ ತಿಳಿಸದೇ ಭೆಟ್ಟಿಯಾಗಲು ಬಂದುದಕ್ಕೆ ಕ್ಷಮಿಸಿ. ಸುಮಾರು ಎರಡು ತಾಸು ಕಾದೆ. ಅರ್ಜಂಟ್ ಮಾತನಾಡಲಿದೆ. ನನ್ನ ಟೆಲಿಫೋನ್ ನಂಬರ್ ಕೊಟ್ಟಿರುತ್ತೇನೆ. ನಾಳೆ ಎಷ್ಟು ಹೊತ್ತಿಗೆ ಬಂದರೆ ಖುದ್ದು ಭೆಟ್ಟಿ ಮಾಡುವ ಸಾಧ್ಯತೆಯಿದೆ ಎಂದು ತಿಳಿಸುವ ಕಷ್ಟ ಕೈಗೊಳ್ಳಬೇಕು-ಚಿದಂಬರ ದಾಮ್ಲೆ.'' ಉಲ್ಲಾಸ ದೇಶಪಾಂಡೆಗೆ ಇಂಥ ಹೆಸರಿರುವ ವ್ಯಕ್ತಿಯ ಪರಿಚಯ ಇರುವುದು ನೆನಪಾಗಲಿಲ್ಲ. ಆದರೂ ಯಾಕೋ ಚಿದಂಬರ ದಾಮ್ಲೆ ಎಂಬ ವ್ಯಕ್ತಿ ಪ್ರಾಯ ಸಂದವರಿರಬಹುದು ಎನ್ನಿಸಿತು. ಬಹುಶಃ ಮದುವೆಯ ವಯಸ್ಸಿಗೆ ಬಂದ ಮಗಳಿರಬಹುದು; ಅದಕ್ಕಾಗಿ ಈ ಫಾರಿನ್ನಿಗೆ ಹೊರಟವನನ್ನು ಹುಡುಕಿ ಬಂದಿರಬಹುದು ಎಂದು ಅಚಾನಕ್ಕಾಗಿ ಹೊಳೆದು ಮನಸ್ಸಿನ ಎಲ್ಲ ಕ್ರಿಯೆಗಳೂ ಸ್ಥಗಿತಗೊಂಡುವು.

ಉಲ್ಲಾಸ ದೇಶಪಾಂಡೆಗೆ ಚಿದಂಬರ ದಾಮ್ಲೆಯನ್ನು ಮಾತನಾಡಿಸುವ ಇರಾದೆ ಎಳ್ಳಷ್ಟೂ ಇರಲಿಲ್ಲ. ಆದರೆ ಮರುದಿನ ಬೆಳಿಗ್ಗೆ, ಆಫೀಸಿಗೆ ಹೊರಡುವ ಹೊತ್ತಿಗೆ, ಹಗಲಿನಲ್ಲಿ ಕಟ್ಟಡ ಕಾಯುವ ಗೂರ್ಖಾ, ''ಸಾಬ್, ನಿನ್ನೆ ತಮ್ಮನ್ನು ಹುಡುಕಿ ಕೊಂಡು ಬಂದ ಹಿರಿಯರು ಭೆಟ್ಟಿಯಾಗದೇ ಬಹಳ ಅಲವತ್ತುಕೊಂಡರು. ಅಗತ್ಯವಾಗಿ ತಮ್ಮನ್ನು ಭೆಟ್ಟಿಯಾಗಬೇಕೆಂದು ಕೈ ಕೈ ಹಿಸುಕಿಕೊಳ್ಳುತ್ತಿದ್ದರು'' ಎಂದಾಗಲೇ ಆ ಬಗ್ಗೆ ನೆನಪಾದದ್ದು. ನಿರಾಳವಾಗಿ ''ಏನಂತೆ?'' ಎಂದು ಕೇಳಿದ. ಗೂರ್ಖಾ ''ಏನೂಂತ ಹೇಳಲಿಲ್ಲ. ಆದರೆ ಸಾಹೇಬರು ವಿದೇಶಕ್ಕೆ ಹೆಂಡತಿ-ಮಕ್ಕಳನ್ನೂ ಕರೆದುಕೊಂಡು ಹೋಗುತ್ತಾರಾ ಅಥವಾ ಒಬ್ರೇನಾ ಎಂದು ಕೇಳಿದರು. ಸಾಹೇಬರಿಗೆ ಮದುವೆಯಾಗಿಲ್ಲ ಅನ್ನೋದು ಅವರಿಗೆ ತಿಳಿದ ಹಾಗಿಲ್ಲ'' ಎಂದು ಹೇಳಿದ್ದು

ಮಾತ್ರ ಅವನನ್ನು ವಿಚಾರಕ್ಕೆ ಹಚ್ಚಿತು. ಹಾಗಾ ವರೆ ಸಂಬಂಧ ಕುದುರಿಸುವ ಇಚ್ಛೆ ಈ ಉದ್ದೇಶಿತ ಭೇಟಿಯ ಗುರಿಯಲ್ಲ ಎಂದನ್ನಿಸಿತು. ಅನ್ನಿದ್ದೇ, ಅವನ ಕಾರ್ಪೊರೇಟ್ ಬುದ್ಧಿ ಕೆಲಸ ಮಾಡಿತು. ಆಫೀಸಿನಲ್ಲಿ ತಾನಿಲ್ಲದ ಹೊತ್ತಿನಲ್ಲಿ ಇಂಥ ಕರೆಗಳು ಬಂದಲ್ಲಿ, ಸೆಕ್ರೆಟರಿ ಟೇಬಲ್ ಮೇಲೆ ಇಟ್ಟ ಮೆಸೇಜ್ ನೋಡಿ, ತಾನೇ ಟೆಲಿಫೋನ್ ಮಾಡುತ್ತಿದ್ದ. ಅದು ಅವನ ಕರ್ತವ್ಯ. ಇದು ಅಂತಹದೇ ಉದ್ದೇಶವಾಗಿದ್ದಲ್ಲಿ, ಕರೆ ಮರಳಿಸದಿದ್ದರೆ ತಪ್ಪಾಗುತ್ತದೆ ಎಂದು ಹೊರಟುನಿಂತ ಆಫೀಸಿನ ಕಾರ್ ಡ್ರೈವರ್‌ಗೆ ಕಾಯಲು ಹೇಳಿ, ಮತ್ತೆ ಫ್ಲ್ಯಾಟಿಗೆ ಬಂದ.

ಟೇಬಲ್ ಮೇಲೆ ಚಿದಂಬರ ದಾಮ್ಲೆಯ ಪತ್ರವಿದ್ದ ಕವರು ಹಾಗೇ ಬಿದ್ದಿತ್ತು. ಪತ್ರ ತೆಗೆದು ಅದರಲ್ಲಿದ್ದ ನಂಬರ್‌ಗೆ ಡಯಲ್ ಮಾಡಿದ. ಆ ಕಡೆಯಿಂದ ಹುಡುಗಿಯ ಸ್ವರ ಬಂತು. ಚಿದಂಬರ ದಾಮ್ಲೆಯ ಹೆಸರು ಹೇಳುತ್ತಲೇ ''ಒಂದು ನಿಮಿಷ, ಕರೀತೇನೆ, ಪ್ಲೀಸ್ ಹೋಲ್ಡಾನ್'' ಅಂತ ಸಿಹಿಯಾಗಿ ಆಕೆ ಹೇಳಿದರೂ ಮತ್ತೆ ಸ್ವರ ಬರಲು ತುಸು ಹೊತ್ತೇ ಹಿಡಿಯಿತು. ''ಸಾರಿ ಅಂಕಲ್, ಅವರು ಮನೇಲಿಲ್ಲ, ಏನಾದರೂ ಮೆಸೇಜ್ ಇದ್ದರೆ ತಲಪಿಸುತ್ತೇನೆ'', ಎಂದಳು. ಉಲ್ಲಾಸ ದೇಶಪಾಂಡೆ ತಾನು ಸಂಪರ್ಕಿಸಿದ ಉದ್ದೇಶ ಹೇಳಿದ. ''ಓ.ಕೆ. ಹೇಳ್ತೀನಿ. ಆದರೆ ಅವರು ಸದ್ಯದಲ್ಲಿ ಬರಲಾರರು ಎಂದು ಆಂಟಿ ಹೇಳಿದ್ದರು.'' ಉಲ್ಲಾಸ ದೇಶಪಾಂಡೆಗೆ ಸಿಟ್ಟು ಬಂದು ಶಿಟ್ ಎಂದು ರಿಸೀವರ್ ಕೆಳಗಿಟ್ಟು, ಮನೆಗೆ ಕೀಲಿ ಜಡಿದು ಹೊರಬಿದ್ದ. ಕಾರು ಹೊರಟದ್ದೇ, ದಿನ ಪತ್ರಿಕೆ ಬಿಡಿಸಿದಾಗ ಅವನು ಚಿದಂಬರ ದಾಮ್ಲೆಯನ್ನು ಮರೆತೇ ಬಿಟ್ಟಿದ್ದ.

ಸದ್ಯದಲ್ಲಿಯೇ ಅವನು ಕೆಲಸ ಬಿಟ್ಟು ಹೋಗಲಿರುವುದರಿಂದ ಉಲ್ಲಾಸ ದೇಶಪಾಂಡೆಗೆ ಈಗ ಆಫೀಸಿನಲ್ಲಿ ಹೆಚ್ಚು ಕೆಲಸ ವಿರಲಿಲ್ಲ. ಬಂದ ಒಂದೆರಡು ಪತ್ರಗಳ ಮೇಲೆ ಅಗತ್ಯವಿದ್ದ ಕಡೆ ಸಹಿ ಹಾಕಿ ಮರಳಿಸಿದಾಗ, ಸೆಕ್ರೆಟರಿ, ಇಂಟರ್‌ಕಾಮ್ ಮೂಲಕ, ''ಸರ್, ಚಿದಂಬರ ದಾಮ್ಲೆ. ಒಳಗೆ ಕಳುಹಿಸಲೇ?'' ಎಂದು ಕೇಳಿದಳು. ಅವನಿಗೆ ಆಶ್ಚರ್ಯವೆನಿಸಿತು.

''ನಿನ್ನೆ ತಮ್ಮ ಫ್ಲ್ಯಾಟಿನ ಬಾಗಿಲ ಮೂಲಕ ತೂರಿಸಿದ ಪತ್ರ ಸಿಕ್ಕಿರಬಹುದು'', ಬಾಗಿಲು ಸರಿಸಿ ಒಳಬಂದ ವಯಸ್ಸಾದ ವ್ಯಕ್ತಿ ಆಶ್ಚರ್ಯ ಹುಟ್ಟಿಸುವಷ್ಟು ಕುಳ್ಳಗಿದ್ದ. ಮಹಾರಾಷ್ಟ್ರಿಯನ್ ಟ್ರೇಡ್ ಮಾರ್ಕಾದ ಕಪ್ಪು ರಟ್ಟಿನ ಟೊಪ್ಪಿಗೆಯ ಕೆಳಗೆ ಥಳಥಳ ಹೊಳೆಯುವ ಅಚ್ಚುಕಟ್ಟಾಗಿ ಶೇವ್ ಮಾಡಿದ ಮುಖ, ಕಪ್ಪು ಫ್ರೇಮಿನ ಚಾಳೀಸು. ಶುಭ್ರ ಪಂಚೆಯ ಮೇಲೆ ಮಡಿ ಮಾಡಿ ಇಸ್ತ್ರಿ ಹಾಕಿದ ಸಿಲ್ಕಿನ ಶರಟು, ವಾಚಿಲ್ಲದ ಕೈಗೆ ಚಾಳಿನ ಹೆಣ್ಣು ಮಕ್ಕಳು ವಿಜಯ ದಶಮಿಯ ದಿನ ಕಟ್ಟಿದ ಈಗ ಮಾಸಿದ ರಾಖಿ, ಕೊಲ್ಹಾಪುರಿ ಚಪ್ಪಲ್. ಚಿದಂಬರ ದಾಮ್ಲೆ.

ಉಲ್ಲಾಸ ದೇಶಪಾಂಡೆ ಈ ಹಿರಿಯರ ಎದುರು ತನಗೆ ಸಹಜವಾದ ನಮ್ರತೆಯಿಂದ ಎದ್ದುನಿಂತು ''ಕೂತುಕೊಳ್ಳಿ'' ಎಂದು ಆಸನ ತೋರಿಸಿದ. ದಾಮ್ಲೆ, ತುಸು ಹಿಂಜರಿದು, ತನ್ನ ಶಿಥಿಲ ದೇಹವನ್ನು ಕುರ್ಚಿಯ ಮೂಲೆಯಲ್ಲಿ ಮೂಟೆ ಇಟ್ಟಂತೆ ಕೂರಿಸಿ, ಎದುರಿನ ಸಾಹೇಬರಿಗೆ ತನ್ನೊಡನೆ, ಅದೂ ಅಪಾಯಿಂಟ್‌ಮೆಂಟ್ ತೆಗೆದುಕೊಳ್ಳದೇ ಬಂದವನಕೂಡ ಮಾತನಾಡಲು ಸಮಯ ವಿರಲಾರದು ಎಂಬ ಅನುಮಾನದಿಂದ ಗಡಬಡಿಸಿ, ನೇರ ವಿಷಯಕ್ಕೇ ಬಂದರು. ''ನನ್ನ ಮಗ ಸ್ಟುಟ್‌ಗಾರ್ಟ್‌ನಲ್ಲಿದ್ದಾನೆ.''

''ಓಹ್'', ಉಲ್ಲಾಸ ದೇಶಪಾಂಡೆ ತನ್ನ ಊಹೆಗಳೆಲ್ಲ ಬುಡಮೇಲಾದುದಕ್ಕೆ ತನಗೇ ಅರಿವಿಲ್ಲದೆ ಉದ್ಗಾರ ತೆಗೆದ. ಚಿದಂಬರ ದಾಮ್ಲೆ ಮತ್ತಷ್ಟು ಶಾಕ್‌ಕೊಟ್ಟರು- ''ನೀವು ಹೋಗಿ ಸೇರುವ ಕಂಪೆನಿಯಲ್ಲಿಯೇ ಸೀನಿಯರ್ ಇಂಜಿನೀಯರ್ ಆಗಿದ್ದಾನೆ!''.

ಉಲ್ಲಾಸ ದೇಶಪಾಂಡೆ ಅವರಿಗೆ ಆರಾಮ ಕೂರಲು ಸೂಚಿಸಿದ. ಬೆಲ್ ಮಾಡಿ ಬಾಯ್‌ಗೆ ಚಹ ತರಲು ಹೇಳಿದ. ತನ್ನ ಮಾತಿನಲ್ಲಿ ಸಾಕಷ್ಟು ವಿಧೇಯತೆ ತರಿಸಿ, ''ನನಗೆ ನಿಮ್ಮ ಪರಿಚಯ ವಿಲ್ಲವೆಂದು ನನ್ನ ಭಾವನೆ'' ಎಂದು ಹೇಳಿದ. ಅವನ ಮಾತಿನಿಂದ ಉತ್ತೇಜಿತರಾದ ಅವರು, ತನ್ನ ಆಸನದಲ್ಲಿ ಒರಗಿ ಕೂತರು. ಜೇಬಿನಿಂದ ಕರವಸ್ತ್ರ ತೆಗೆದು, ಕನ್ನಡಕದ ಗಾಜನ್ನು ಒರೆಸಿಕೊಂಡು ಮತ್ತೆ ಏರಿಸಿಕೊಂಡು,''ಹೌದು, ಕ್ಷಮಿಸಿ. ನನ್ನ ಪರಿಚಯ ಕೊಡಬೇಕಿತ್ತು ಸರ್.



ನಾನು ರಿಟಾಯರ್ಡ್ ಸ್ಕೂಲ ಮಾಸ್ತರನಿದ್ದೇನೆ. ಮಾಹೀಂ ಸರಕಾರೀ ಶಾಲೆಯಲ್ಲಿ ಮೂವತ್ತಾರು ವರ್ಷ ಕಲಿಸಿದ್ದಕ್ಕಾಗಿ ಎಯ್ಟಿನೈನ್‌ನಲ್ಲಿ ನಿವೃತ್ತಿಗೊಳಿಸಿದರು'' ಎಂದು ಅನುಮಾನಿತ ಹೆಮ್ಮೆಯಲ್ಲಿ ಹೇಳಿದರು. ಬಂದ ಚಹ ಹೀರುತ್ತಾ ''ನನ್ನ ಮಗ-ಯಶವಂತ ಅಂತ ಅವನ ಹೆಸರು, ವಾಯ್.ಸಿ.ದಾಮ್ಲೆ-ಸ್ಟುಟ್‌ಗಾರ್ಟ್‌ಗೆ ಹೋಗುವಾಗ ನಾನಿನ್ನೂ ರಿಟೈರ್ ಆಗಿರಲಿಲ್ಲ. ಅಂದರೆ, ಈಗ ಅವನು ಹೋಗಿ ಹದಿಮೂರು ವರ್ಷಗಳಾದವು. ಹೋಗೋ ಮುನ್ನ ಅವನಿಗೆ ಮದುವೆ ಮಾಡಿಸಿದ್ದೆವು''

''ಹೌದೇನು? ಈಗ ಮಗ ಸೊಸೆ ಎಲ್ಲ ಅಲ್ಲೇ ಇದ್ದಾರೇನು? ಎಷ್ಟು ಜನ ಮಕ್ಕಳು?'' ಎಂದು ಕೇಳುತ್ತಾ ಹೋದ ಉಲ್ಲಾಸ ದೇಶಪಾಂಡೆಯ ಮುಖವನ್ನು ನೋಡದೇನೇ ಅವರು ಮುಂದುವರೆಸಿದರು. ''ಇಲ್ಲ, ಯಶವಂತ ಹೆಂಡತಿಯನ್ನು ಜರ್ಮನಿಗೆ ಕರೆದುಕೊಂಡು ಹೋಗೇ ಇಲ್ಲ. ಪೂನಾದ ಹುಡುಗಿ. ನಿಜ ಹೇಳಬೇಕೆಂದರೆ ನಮಗೆ ಆಕೆ ದೂರದ ಸಂಬಂಧವೂ ಆಗಬೇಕು. ಅತ್ತೆ ಮಾವಂದಿರ ಜೊತೆ ಇರುವುದಕ್ಕಿಂತ ತಂದೆ ತಾಯಿಯರ ಬಳಿ ಇರುವುದನ್ನೇ ಆಕೆ ಇಷ್ಟಪಟ್ಟಳು. ಒಬ್ಬಂಟಿಯಾಗಿ ಇರಬೇಕಲ್ಲ ಎಂದು ಕೆಲಸಕ್ಕೆ ಸೇರಿದ್ದಾಳೆ'' ಹೇಳುತ್ತಾ, ಹೇಳುತ್ತಾ ಅವರು ಉಗುಳು ನುಂಗಿಕೊಂಡರು.

ಉಲ್ಲಾಸ ದೇಶಪಾಂಡೆ ಮಾತನಾಡಲಿಲ್ಲ. ಬಹುಶಃ, ಈ ವಾಯ್.ಸಿ.ದಾಮ್ಲೆ, ಜರ್ಮನಿಗೆ ಹೋದಮೇಲೆ ಅಲ್ಲಿಯೇ ಒಂದು ಹೆಣ್ಣನ್ನು ಮದುವೆಯಾಗಿರಬಹುದು. ಇತ್ತ ಬರಲೊಲ್ಲ. ಅದಕ್ಕಾಗಿ ಅವನ ಮನಸ್ಸನ್ನು ತಿರುಗಿಸಿ, ಭಾರತಕ್ಕೆ ಬರುವಂತೆ ಮಾಡಬೇಕು ಎಂದು ಹೇಳಲು ಈ ಮುದುಕ ಬಂದಿರಬಹುದು ಎಂದುಕೊಂಡ. ಅವರು ಮಾತು ಮುಂದುವರಿಸಿದರು,

''ಯಶವಂತ ಬುದ್ಧಿವಂತ ಹುಡುಗ, ಐಐಟಿಯಲ್ಲಿ ಮೆಕ್ಯಾನಿಕಲ್ ಇಂಜಿನಿಯರಿಂಗ್ ಪಾಸಾಗಿದ್ದಾನೆ. ಮೆರಿಟ್‌ನಿಂದಲೇ ಐಐಟಿ ಸೇರಿದ್ದ. ಅಲ್ಲೂ ಪ್ರತೀ ವರ್ಷ ಡಿಸ್ಟಿಂಕ್ಷನ್‌ನಲ್ಲೇ ಪಾಸಾದ. ಶಾಲಾ ಮಾಸ್ತರನ ಮಗನಲ್ಲವೇ? ಶಿಸ್ತಿನಲ್ಲಿ ಬೆಳೆದವನು. ತನ್ನ ಜವಾಬ್ದಾರಿಗಳನ್ನು ತಿಳಿದವನು. ನಾವೇನೂ ಅವನನ್ನು ಕಟ್ಟುನಿಟ್ಟಾಗಿ ಬೆಳೆಸಿ ಅವನ ಆಸೆಗಳಿಗೆ ಅಡ್ಡ ಬಂದವರಲ್ಲ. ವಾರಕ್ಕೊಮ್ಮೆ ತನ್ನ ಗೆಳೆಯರ ಸಂಗಡ ಸಿನೆಮಾ

ನೋಡಲು ಹೋಗುತ್ತಿದ್ದ. ಶಾಲೆ ಮುಗಿಸಿ ಬಂದವನು, ಸಂಜೆ ಶಿವಾಜಿ ಪಾರ್ಕಿನ ಮೈದಾನದಲ್ಲಿ ಕ್ರಿಕೆಟ್ ಆಡುತ್ತಿದ್ದ. ತನ್ನ ತಾಯಿಗೆ ಅಚ್ಚುಕಟ್ಟಾಗಿ ಅಡಿಗೆಗೆ, ತರಕಾರಿ ತರಲು ಸಹಾಯ ಮಾಡುತ್ತಿದ್ದ''.

''ಗುಡ್‌ಗುಡ್'', ಚಿದಂಬರ ದಾಮ್ಲೆಯ ಮಾತಿನಲ್ಲಿ ಹೆಮ್ಮೆಯ ತಂದೆಯಲ್ಲಿರಬೇಕಾದ ಸ್ವರ ಇಲ್ಲದಿದ್ದರೂ ಉಲ್ಲಾಸ ದೇಶಪಾಂಡೆ ಉದ್ಗರಿಸಿದ. ಆದರೂ ಆತ ಯಾಕೆ ತನ್ನ ಹೆಂಡತಿಯನ್ನು ಜರ್ಮನಿಗೆ ಕೊಂಡೊಯ್ಯಲಿಲ್ಲ ಎಂಬ ಪ್ರಶ್ನೆ ಮನಸ್ಸಿನಲ್ಲಿ ಮೂಡಿದರೂ ಹೊರಗೆ ತೋರಿಸಿಕೊಳ್ಳಲಿಲ್ಲ. ''ಆಗಲಿ, ಮಿ.ದಾಮ್ಲೆ, ನಾನು ಅಲ್ಲಿ ಅವರನ್ನು ಭೇಟಿಯಾಗಲು ಪ್ರಯತ್ನಿಸುತ್ತೇನೆ ಎಂದು ಮಾತು ಕೊಡುತ್ತೇನೆ. ನೀವು ಭೇಟಿಯಾದ ಬಗ್ಗೆ ಖಂಡಿತ ಹೇಳುತ್ತೇನೆ'' ಎಂದಿಷ್ಟೇ ಹೇಳಿದ.

ಚಿದಂಬರ ದಾಮ್ಲೆಯ ಮುಖ ಬಿದ್ದು ಹೋಯಿತು. ಮೈ ಸಂಕೋಚದಿಂದ ಮತ್ತಷ್ಟು ಮುದುಡಿಕೊಂಡಿತು. ಈ ಮಾತು ಕೊನೆ, ಇನ್ನು ನೀವು ಹೋಗಬಹುದು ಎಂದು ಇಷಾರೆ ಕೊಟ್ಟಂತೆ ಭಾಸವಾಗಿರಬೇಕು. ''ಸರ್, ತಮಗೆ ತುಂಬ ಕೆಲಸಗಳಿರಬಹುದು. ನಾನು ನಿಮ್ಮ ವೇಳೆಯನ್ನು ಬಳಸಿಕೊಳ್ಳುತ್ತಿದ್ದೇನೆ, ಕ್ಷಮಿಸಿ. ಆದರೆ ನನಗಾಗಿ ತಮ್ಮಿಂದ ಐದೇ ಐದು ನಿಮಿಷಗಳನ್ನು ಕೊಟ್ಟರೆ ಸಾಕು, ದಯವಿಟ್ಟು'' ತೀರ ಬೇಡಿಕೊಳ್ಳುವ ರೀತಿಯಲ್ಲಿ ಚಿದಂಬರ ದಾಮ್ಲೆ ವಿನೀತರಾದರು. ಉಲ್ಲಾಸ ದೇಶಪಾಂಡೆ ''ಹೇಳಿ, ನನ್ನಿಂದೇನಾಗಬೇಕು?'' ಎಂದು ವಿಚಿತ್ರ ನಿರಾಳತೆಯಲ್ಲಿ ಕುರ್ಚಿಯ ಬೆನ್ನಿಗೆ ಒರಗಿ ಕೂತ.

''ಯಶವಂತ ಈಗ ಬಹಳ ದೂರದ ದೇಶದಲ್ಲಿ ಒಬ್ಬನೇ ಇದ್ದಾನೆ. ಅವನಿಗಾಗಿ ಏನಾದರೂ ಕಳುಹಿಸಿಕೊಡಬೇಕೆಂದು ಅವನ ತಾಯಿಯ ಆಸೆ. ಆಸೆ ಅಂದರೆ ಬೇರೆನಲ್ಲ. ಎಲ್ಲ ತಾಯಂದಿರಿಗೂ ತಮ್ಮ ಮಗ ತನ್ನ ಕೈ ತುತ್ತು ತಿನ್ನಬೇಕೆಂದು ಆಸೆ ಇರುವುದಿಲ್ಲವೇ? ಒಂದಷ್ಟು ಚಟ್ನಿಪುಡಿ, ಉಪ್ಪಿನಕಾಯಿ ಅಷ್ಟೇ. ಆದರೆ ಒಯ್ಯುವವರು ಯಾರು? ಬಹಳ ಹಿಂದೆ ಎರಡು ಬಾರಿ ಅಂಚೆಯಲ್ಲಿ ಕಳುಹಿಸಿದ್ದೆವು. ಆದರೆ ಅದು ಮಧ್ಯದಲ್ಲಿಯೇ ಗಾಯಬ್ ಆಗುತ್ತದೆ ಸರ್.''

''ವೆಲ್ ಮಿ. ದಾಮ್ಲೆ, ನಾನು ಸ್ಟಟ್‌ಗಾರ್ಟಿಗೆ ಹೋಗುತ್ತೇನೆಂದು ನಿಮಗೆ ತಿಳಿಸಿದವರು ಯಾರು?'', ಆಶ್ಚರ್ಯದಿಂದ ಕೇಳಿದ, ಉಲ್ಲಾಸ ದೇಶಪಾಂಡೆ. ''ಸ್ಟಟ್‌ಗಾರ್ಟಿಗೆ ಇಂಡಿಯಾದಿಂದ, ಮುಂಬೈಯಿಂದ ತುಂಬ ಜನರು ಹೋಗುತ್ತಾರೆ. ಆದರೆ ನಮ್ಮ ಕೆಲಸ ಮಾಡುವವರು ಸಿಕ್ಕಬೇಕಲ್ಲ, ಸರ್. ಜರ್ಮನ್ ಎಂಬೆಸಿಯಲ್ಲಿ ಕೆಲಸ ಮಾಡುವ ಹೆಣ್ಣು ಮಗಳೊಬ್ಬಳನ್ನು ಕೇಳಿಟ್ಟಿದ್ದೆ-ಯಾರಾದ್ರೂ, ಅಕೇಲಾ ಸ್ಟಟ್‌ಗಾರ್ಟಿಗೆ ಹೋಗುವವರಿದ್ದರೆ ಹೇಳಬೇಕು ಎಂದು. ಮುದುಕ ಮುದುಕಿಯರನ್ನು ಆಕೆ ಕಡೆಗಣಿಸಲಿಲ್ಲ. ಆಗಾಗ ಯಾರದಾದರೂ ವಿಳಾಸ ಕೊಡುತ್ತಿದ್ದಳು. ಆದರೆ ಸರ್, ಮನುಷ್ಯ ಮನುಷ್ಯನನ್ನು ನಂಬದ ಕಾಲ ಇದು. ಕೆಟ್ಟ ಗುಣದ ಮಂದಿ, ಗೊತ್ತಿಲ್ಲದವರಿಗೆ ಮೋಸಮಾಡಿ, ಏನೇನೋ ಕಳುಹಿಸಿ ತೊಂದರೆಗೆ ಸಿಲುಕಿಸಿದ್ದಾರೆ. ಕಸ್ಟಮ್ಸ್ ಕೌಂಟರಿನಲ್ಲಿ ದೊಡ್ಡ ಬೋರ್ಡನ್ನೇ ಹಾಕಿದ್ದಾರೆ-'ಅಪರಿಚಿತ ವ್ಯಕ್ತಿಗಳಿಂದ ಯಾವುದೇ ಪಾರ್ಸೆಲ್ ಪಡೆಯಬೇಡಿ, ಖತರಾಗೆ ದಾರಿ ಕೊಡುತ್ತೀರಿ' ಎಂದು. ಆದರೆ ಈ ಮುದುಕನನ್ನು ತಾವು ನಂಬಬೇಕು, ಸರ್. ಒಬ್ಬ ತಾಯಿಯ ಎದೆಯ ಪ್ರೀತಿಯನ್ನು ತಾವು ಅರ್ಥ ಮಾಡಿಕೊಳ್ಳಬೇಕು ಸರ್'', ಚಿದಂಬರ ದಾಮ್ಲೆಯ ಸ್ವರ, ಹೇಳುತ್ತಾ, ಹೇಳುತ್ತಾ ಈ ಸಾಹೇಬ ಆಗುವುದಿಲ್ಲ ಎಂದೇನಾದರೂ ಹೇಳಿದರೆ ಏನು ಮಾಡಲಿ ಎಂಬ ಅನುಮಾನದಿಂದ ಗದ್ಗದವಾಯಿತು. ಒಂದು ನಿಮಿಷದ ದೀರ್ಘ ಮೌನದ ಬಳಿಕ ಚೌಂಕ ಧ್ವನಿಯಿಂದ ಅವರು ಹೇಳಿದರು, ''ಪಾರ್ಸೆಲ್ ದೊಡ್ಡದಿಲ್ಲ ಸರ್. ಒಂದು ಉಪ್ಪಿನ

ಕಾಯಿಯ ಬಾಟಲಿ ಮತ್ತು ಚಟ್ನಿಪುಡಿಗಳ ಎರಡು ಪೊಟ್ಟಣಗಳು. ನಿಮ್ಮ ಎದುರಿನಲ್ಲೇ ಪ್ಯಾಕ್ ಮಾಡಿಕೊಡುತ್ತೇವೆ. ನಿಮ್ಮ ಹ್ಯಾಂಡ್ ಬ್ಯಾಗಿನಲ್ಲಿ ಇಟ್ಟುಕೊಂಡೊಯ್ಯಬಹುದು. ದಯವಿಟ್ಟು ಬಿಡುವು ಮಾಡಿಕೊಂಡು, ನೀವು ಹೋಗುವ ಮುನ್ನ ಯಶವಂತನ ತಾಯಿಯನ್ನು ನೋಡಲು ಒಮ್ಮೆ ಮನೆಗೆ ಬರಬೇಕು. ಆಕೆಗೆ ಒಂದಷ್ಟು ಆರಾಮಿಲ್ಲ, ಓಡಾಡಲು ಆಗುವುದಿಲ್ಲ. ಆದರೂ ಉಪ್ಪಿನಕಾಯಿ ಮಾಡುವ ಯೋಚನೆ ಮಾಡಿದ್ದಾಳೆ. ಚಟ್ನಿಪುಡಿಗಾಗಿ ಕುಟ್ಟುವ ಸಿದ್ಧತೆ ಮಾಡಿದ್ದಾಳೆ. ನೀವು ಮನೆಗೆ ಬಂದರೆ ನಿಮ್ಮ ಎದುರಲ್ಲಿಯೇ ಪ್ಯಾಕ್ ಮಾಡಿಕೊಡಬಹುದು. ದಯವಿಟ್ಟು ಸರ್, ಇಲ್ಲ ಅನ್ನದೇ ಬರಬೇಕು. ಮನೆ ಹುಡುಕುವುದೂ ಏನೇನೂ ಕಷ್ಟವಿಲ್ಲ. ಶಿವಾಜಿ ಪಾರ್ಕಿನ ಪಶ್ಚಿಮಕ್ಕಿರುವ ಕ್ಯಾಡಲ್ ರೋಡ್‌ಗೆ ಬಂದು, ದಾಮ್ಲೆ ಮಾಸ್ತರರ ಮನೆ ಯಾವುದು ಎಂದು ಕೇಳಿದರೆ ಯಾರೂ ಹೇಳುತ್ತಾರೆ. ನೂರಾರು ಹುಡುಗರಿಗೆ ಅದೇ ಮನೆಯಲ್ಲಿ ಟ್ಯೂಶನ್ ಹೇಳಿದ್ದೇನೆ.''

ಆ ಸ್ವರದಲ್ಲಿದ್ದ ಹೇಳಲಾಗದ ಪ್ರೀತಿಯೊಂದು, ಉಲ್ಲಾಸ ದೇಶಪಾಂಡೆಯನ್ನು ತಟ್ಟಿದಂತಾಗಿ ಅವನು 'ಖಂಡಿತ', 'ಖಂಡಿತ' ಎಂದು ಭರವಸೆಯಿತ್ತ. ''ಆದರೆ ನಾನು ಹೋಗಲು ಇನ್ನೂ ಹದಿನೈದು ದಿನಗಳಿವೆ. ಅದರ ಮೊದಲು ಖಂಡಿತ ನಿಮ್ಮ ಮನೆಗೆ ಬಂದು ಹೋಗುವೆ'' ಎಂದ.

ಚಿದಂಬರ ದಾಮ್ಲೆ ತೃಪ್ತಿಯಿಂದ ಎದ್ದು ನಿಂತು ಎರಡೂ ಕೈಗಳನ್ನು ಜೋಡಿಸಿ 'ಥ್ಯಾಂಕ್ಸ್, ಥ್ಯಾಂಕ್ಸ್ ಸರ್' ಎಂದು ಹಲವು ಸಲ ಹೇಳಿದರು. 'ಬರುವ ಸಮಯ ಮೊದಲೇ ತಿಳಿಸಿದರೆ ಎಲ್ಲವನ್ನೂ ಸಿದ್ಧ ಮಾಡಿಡುತ್ತೇವೆ. ನಿಮ್ಮ ವೇಳೆ ಹಾಳಾಗದಂತೆ ನೋಡಿಕೊಳ್ಳುತ್ತೇವೆ. ಪಕ್ಕದ ಮನೆಯವರು ಟೆಲಿಫೋನ್ ಬಳಸಲು ಈ ಮುದುಕ ದಂಪತಿಗಳಿಗೆ ಸಾಕಷ್ಟು ಸ್ವಾತಂತ್ರ್ಯ ಕೊಟ್ಟಿದ್ದಾರೆ'' ಎಂದರು. ಬಾಗಿಲತನಕ ಹೋದವರು, ಹೊರಬೀಳುವ ಮುನ್ನ ಮರಳಿ, ದೇಹವನ್ನು ಸಾಕಷ್ಟು ಹೆಚ್ಚೇ ಬಗ್ಗಿಸಿ, ಅತ್ಯಂತ ದೀನರಾಗಿ, ''ಸರ್, ಮನೆಯಲ್ಲಿ ಯಶವಂತನ ತಾಯಿಯ ಪರಿಸ್ಥಿತಿ ಸ್ವಲ್ಪ ನಾಜೂಕು. ಆಕೆ ಹದಿಮೂರು ವರ್ಷಗಳಿಂದ ಮಗನ ಮುಖ ನೋಡಿಲ್ಲ. ಎದ್ದು. ಪಕ್ಕದ ಮನೆಗೆ ಹೋಗಿ ಟೆಲಿಫೋನ್‌ನಲ್ಲಿ ಮಾತನಾಡಲೂ ಆಕೆಯ ನಿಶ್ಶಕ್ತಿ ಬಿಡುವುದಿಲ್ಲ. ನಮ್ಮಂಥ ಮಿಡಲ್ ಕ್ಲಾಸ್ ಮಂದಿಗೆ ಸಹಜವೆನ್ನಿಸುವ ಆಸೆಯಿಂದ ಯಶವಂತನನ್ನು ಜರ್ಮನಿಗೆ ಕಳಿಸಿದೆವು. ನಾಲ್ಕಾರು ವರುಷ ದುಡಿದು, ಒಂದಷ್ಟು ರೊಕ್ಕ ಗಳಿಸಿ ಬಂದರೆ, ನಮ್ಮ ನಿವೃತ್ತಿಯ ದಿನಗಳನ್ನು ಆರಾಮದಿಂದ ಕಳೆಯಬಹುದೆಂದುಕೊಂಡು ಸಂತೋಷದಿಂದ ಕಳುಹಿಸಿಕೊಟ್ಟೆವು. ಯಶವಂತ ಹಿಂದೆತಿರುಗಿ ಬರಲು ಒಪ್ಪುತ್ತಿಲ್ಲ. ಅವನ ತಾಯಿಗೆ ಕಾಯಿಲೆ ಎಂದು ತಿಳಿಸಿದರೂ ಅವನು ವಿಚಲಿತನಾಗುವುದಿಲ್ಲ. ಆಕೆ ಹೆಚ್ಚು ದಿನ ಬದುಕಲಿಕ್ಕಿಲ್ಲ ಎಂದು ನನಗೆ ಅನ್ನಿಸುತ್ತಿದೆ. ಆದುದರಿಂದ ಆಕೆಯ ಕೊನೆಯ ಆಸೆಯನ್ನು ಏನಾದರೂ ಮಾಡಿ ಪೂರೈಸಬೇಕೆಂದು ನನ್ನ ಮನಸ್ಸು. ಆದುದರಿಂದ ದಯವಿಟ್ಟು ತಪ್ಪಿಸಿಕೊಳ್ಳಬಾರದು. ಹಾಗಾದಲ್ಲಿ ಒಬ್ಬ ತಾಯಿಯ ಎದೆ ಒಡೆದು ಹೋದೀತು'' ಎಂದು ಹೇಳಿ, ತನ್ನ ಮಾತನ್ನು ಎದುರಿಸುವುದು ತನಗೇ ಸಾಧ್ಯವಾಗದಂತೆ ಸರಕ್ಕನೆ ಹೊರಬಿದ್ದರು.

ಚಿದಂಬರ ದಾಮ್ಲೆ ಕೊನೆಯ ಮಾತಾಡುವಾಗ ಅವರ ಕಣ್ಣಿನಿಂದ ನೀರು ಜಿನುಗಿತ್ತೇ ಎಂದು ಆಮೇಲೆ ಉಲ್ಲಾಸ ದೇಶಪಾಂಡೆ ಬಹಳ ಸಲ ಅನುಮಾನಪಟ್ಟಿದ್ದ. ಅವನಿಗೆ ಅವನದೇ ಬಾಲ್ಯದ ನೆನಪಾಗಿತ್ತು. ತಂದೆ ತಾಯಿಗಳ ನೆನಪಾಗಿತ್ತು. ನಾಗಪೂರದ ಬಳಿಯ ಒಂದು ಹಳ್ಳಿ. ವಿಶಾಲವಾದ ಕಪ್ಪು ನೆಲ. ಈಗಲೂ ಅವನ ತಂದೆ, ಅಲ್ಲಿ ಜಮೀನು ನೋಡಿಕೊಳ್ಳುತ್ತಿದ್ದರು.

ಸಂಜೆಯ ಹೊತ್ತು ಹಳ್ಳಿಯ ಕಟ್ಟೆಯ ಮೇಲೆ ಕೂತು ಮರಾಠೀ ಪತ್ರಿಕೆಯನ್ನು ಓದುತ್ತಾ ರಾಜಕೀಯ ಚರ್ಚೆ ಮಾಡುತ್ತಿದ್ದರು. ಉಲ್ಲಾಸನಿಗೆ 24 ರ ವಯಸ್ಸಾದಾಗ ನಾಗಪೂರದ ಎಂಎಲ್ಎ ಯವರ ಮಗಳ ಜೊತೆ ಅವನ ಮದುವೆ ನಿಶ್ಚಯವಾಗಿತ್ತು. ಅವನೇ ತಂದೆ ತಾಯಿಯರ ಜೊತೆ ಹೋಗಿ, ನೋಡಿ, ಮಾತನಾಡಿ ಬಂದಿದ್ದ. ಆದರೆ ಮದುವೆ ಇನ್ನೊಂದು ತಿಂಗಳಿದೆ ಎನ್ನುವಾಗ ತಾನು ಇನ್ನೊಬ್ಬನನ್ನು ಪ್ರೀತಿಸುತ್ತೇನೆ, ಈ ಮದುವೆಯಲ್ಲಿ ತನಗೆ ಇಚ್ಛೆಯಿಲ್ಲ ಎಂದು ಆಕೆ ಪತ್ರ ಬರೆದಿದ್ದಳು. ಮನಸ್ಸು ಮುರಿದಿತ್ತು. ಉಲ್ಲಾಸ ದೇಶಪಾಂಡೆ ಮುಂಬೈ ಸೇರಿದ. ತನ್ನ ಕೆರಿಯರ್ ಮೇಲೆ ಒತ್ತು ಕೊಟ್ಟ. ವ್ಯಕ್ತಿತ್ವ ಬೆಳೆಸಿಕೊಂಡ. ಇಂಡಿಯನ್ ಇನ್ಸ್‌ಟಿಟ್ಯೂಟ್ ಆಫ್ ಮ್ಯಾನೇಜ್‌ಮೆಂಟ್ ನಿಂದ ಡಿಸ್ಟಿಂಕ್ಷನ್‌ನಲ್ಲಿ ಎಂಬಿಎ ಡಿಗ್ರಿ ಪಡೆದಾಗ, ಅನೇಕ ಕಂಪೆನಿಗಳು ಅವನನ್ನು ತಮ್ಮತ್ತ ಸೆಳೆಯಲು ಪ್ರಯತ್ನಿಸಿದರು. ಕೈ ತುಂಬ ಸಂಬಳ. ಉಳಕೊಳ್ಳಲು ಫ್ಲ್ಯಾಟ್. ಚಾಫಿಯರ್ ಡ್ರಿವನ್ ಕಾರ್. ಎಟ್‌ಸೆಟ್ರಾ, ಎಟ್‌ಸೆಟ್ರಾ.

ಮದುವೆ ಮುರಿದು ಅವನು ಮುಂಬೈಗೆ ಮರಳಿದ ಮೇಲೆ, ಮತ್ತೆ ಊರಿಗೆ ಹೋಗಲಿಲ್ಲ. ಅವನ ತಂದೆ ತಾಯಿಯರೇ ಅನೇಕ ಸಲ ಬಂದು, ಅವನ ಫ್ಲ್ಯಾಟಿನಲ್ಲಿ ಉಳಿದು, ಅನೇಕ ಸಂಬಂಧಗಳ ಪ್ರಸ್ತಾಪ ಮಾಡಿದ್ದರು. ಅವನು ಅಲ್ಲಗಳೆದಿದ್ದ. ಮಗುವಿನ ಮನಸ್ಸು ಕೆಟ್ಟು ಹೋಗಿದೆ, ಒತ್ತಾಯಿಸುವುದರಲ್ಲಿ ಅರ್ಥವಿಲ್ಲ ಎಂದು ಅವರು ಹಳ್ಳಿಗೆ ಹೋದರು. ಈಗಲೂ ಅವನ ಅಪ್ಪ, ಕಟ್ಟೆಯ ಮೇಲೆ ಕುಳಿತು ದೇಶದ ಸಮಸ್ಯೆಗಳನ್ನು ಓದುತ್ತಾನೆ. ಈ ಸಂಬಂಧಗಳ ಸಹಜತೆ ಅವನನ್ನು ಪುಲಕಿತಗೊಳಿಸುತ್ತದೆ. ಅಂಥ ಸಂಬಂಧ ತನ್ನ ಸುತ್ತಮುತ್ತಣ ನಖರಾ ಮಾಡುವ ಹುಡುಗಿಯರ ಜೊತೆ ಬೆಳೆಯುವುದು ಸಾಧ್ಯವಿಲ್ಲ ಎಂದು ಅವನು ಮದುವೆಯನ್ನು ತಳ್ಳಿಹಾಕಿದ್ದ. ಕ್ರಮೇಣ ಮದುವೆಯಾಗದೇ ಇದ್ದುದೇ ಒಳ್ಳೆಯದಾಯಿತು ಎಂದು ಪ್ರಮೋಶನ್ ಪಡೆಯುತ್ತಾ ಹೋದ. ಅವನಿಗೆ ಜರ್ಮನಿಯಲ್ಲಿ ಕೆಲಸ ಸಿಕ್ಕಿದೆ ಎಂದಾಗ, ಅವನ ಅಪ್ಪ ಅಟ್ಲಾಸ್ ತರಿಸಿ, ಸ್ಟುಟ್‌ಗಾರ್ಟ್ ಎಲ್ಲಿದೆ ಎಂದು ಹುಡುಕಿದ್ದ. ಅವನ ತಾಯಿ ಅಲ್ಲೂ ಹಾಲು ಹೈನು ಸಿಗುತ್ತದಲ್ಲವೇ ಎಂದು ವಿಚಾರಿಸಿದ್ದಳು.

ಉಲ್ಲಾಸ ದೇಶಪಾಂಡೆ ಮೊದಮೊದಲು ಚಿದಂಬರ ದಾಮ್ಲೆಯ ಭೇಟಿಯನ್ನು ಹಗುರವಾಗಿ ತೆಗೆದುಕೊಂಡಿದ್ದರೂ, ಮರೆಯಲು ಸಾಧ್ಯವಾಗಿರಲಿಲ್ಲ. ಅವನನ್ನು ಮೀರಿದ ಒಂದು ಯೋಚನೆಯಿಂದಾಗಿ, ಅವರು ಕೊಡಲಿರುವ ಒಡವೆಯನ್ನು, ಅವರ ಮಗನ ಕೈಗೆ ಕೊಡುವುದು ತನ್ನ ವಿಧೇಯ ಕರ್ತವ್ಯ ಎಂಬ ಭಾವನೆಯನ್ನು ಬೆಳೆಸಿಕೊಳ್ಳುತ್ತಾಹೋದ. ಆ ವಾರದಲ್ಲಿ ಅವನಿಗೆ ಎರಡು-ಮೂರು ಬಾರಿ, ಚಿದಂಬರ ದಾಮ್ಲೆಯ ಟೆಲಿಫೋನ್ ನೆನಪು ಮಾಡಿಕೊಟ್ಟಿತ್ತು. ಆದುದರಿಂದ ಭಾನುವಾರ ಮಧ್ಯಾಹ್ನ ಅವನು ಅವರ ಮನೆಯ ಕಡೆ ಹೊರಟ.

ಮಧ್ಯಾಹ್ನದ ನಾಲ್ಕು ಘಂಟೆಯ ಹೊತ್ತು. ಮಕ್ಕಳಿಲ್ಲದೇ ಬೋಳಾದ ಶಿವಾಜಿ ಪಾರ್ಕಿನ ಆಟದ ಮೈದಾನ, ಬಿಸಿಲಿಗೆ ಆಡಿ ದಣಿದಿತ್ತು. ಕ್ಯಾಡಲ್ ರಸ್ತೆಯಲ್ಲಿದ್ದ ದಾಮ್ಲೆಯ ಮನೆ ಸಿಗುವುದೇನೂ ಕಷ್ಟವಾಗಲಿಲ್ಲ. ಮೊದಲ ಮಹಡಿಯಾದುದರಿಂದ ಮೆಟ್ಟಲು ಹತ್ತಿಕೊಂಡೇ ಹೋದ. ಎರಡು ರೂಮಿನ ಖೋಲಿ. ಮುಂದಣ ಬಾಗಿಲು ತೆರೆದೇ ಇತ್ತು. ವಿಶಾಲವಾದ ಡ್ರಾಯಿಂಗ್ ರೂಮಿನಲ್ಲಿ, ಮಡಚಲು ಸಾಧ್ಯವಾಗುವ ಎರಡು ಕಬ್ಬಿಣದ ಕುರ್ಚಿಗಳು ಬಿಟ್ಟರೆ ಬೇರೆ ಯಾವುದೇ ಫರ್ನಿಚರ್ ಇರಲಿಲ್ಲ. ಒಳಗಿನ ಕೋಣೆಯಲ್ಲಿ, ಮಂಚದ ಮೇಲೆ ಡುಬ್ಬೆಂದು ಹೊದ್ದುಕೊಂಡು ಮಲಗಿದ ಒಂದು ಜೀವ ಕಾಣುತ್ತಿತ್ತು. ಮಂಚದ ಬದಿಯ ಕಿಟಕಿಯ ಮೇಲೆ, ಔಷಧ ಬಾಟಲಿಯ ಸಾಲುಗಳು, ಬಾಗಿಲು ತೆರೆದಿದ್ದರೂ, ಬೆಲ್ ಒತ್ತಿ

ಉಲ್ಲಾಸ ದೇಶಪಾಂಡೆ, ಚೌಕಟ್ಟಿನ ಎದುರೇ ನಿಂತ. ಮಂಚದ ಮೇಲೆ ಮಲಗಿದ ಜೀವ ಭೂಮಿಯಂತೆ ಹೊರಳಿ, ''ಯಾರು?'' ಎಂದಿತು. ಉಲ್ಲಾಸ ದೇಶಪಾಂಡೆ ಪ್ರವರ ಹೇಳಿದ. ಅಷ್ಟರಲ್ಲಿ ಅಡಿಗೆ ಕೋಣೆಯಿಂದ ದಾಮ್ಲೆಯವರೇ ಹೊರಗೆ ಬಂದರು.

ಕಚ್ಚೆಯ ಮೇಲೆ ಬಟ್ಟೆಯಿಂದ ಹೊಲಿದ ಅರೆ ತೋಳಿನ ಬನೀನು. ಕೈಯಲ್ಲಿ ಕುಟ್ಟುವ ಕಬ್ಬಿಣದ ಸನಿಕೆ. ಮಾಗಿದ ಹಗಲಿನ ಬಿವರು ಹನಿಗಳು. ''ಬನ್ನಿ, ಬನ್ನಿ ಸರ್'' ಎಂದು ಆದರದಿಂದ ಸ್ವಾಗತಿಸಿ, ಅವನನ್ನು ಕೂರಿಸಿಕೊಂಡರು. ''ಮನೆ ಹುಡುಕುವುದು ಕಷ್ಟವಾಗಲಿಲ್ಲ ಅಲ್ಲವೇ? ಇದು ಯಶವಂತನ ತಾಯಿ. ಆಕೆಗೆ ಹೆಚ್ಚು ಅಲ್ಲಾಡುವುದು ಸಾಧ್ಯವಾಗುವುದಿಲ್ಲ. ಹಾಗಾಗಿ ಕೆಲಸಗಳ ಜವಾಬ್ದಾರಿ ಎಲ್ಲ ನನ್ನದೇ.'' ಉಲ್ಲಾಸ ದೇಶಪಾಂಡೆ ಸುತ್ತ ನೋಡಿದ. ಮನೆ ನೀಟಾಗಿತ್ತು. ಅಡಿಗೆ ಕೋಣೆಯ ಸಂದಿಯಲ್ಲಿ ಕಾಣುವ ಕೆಲವು ಪಾತ್ರೆಗಳು, ಚಪಾತಿಯ ಹಂಚು ಥಳಥಳ ಹೊಳೆಯುತ್ತಿದ್ದುವು. ಕಿಟಕಿಗಳಿಗೆ ಪರದೆ ಇರಲಿಲ್ಲ. ಎದುರಿನ ಗೋಡೆಯ ಮೇಲೆ ಸೂಟು, ಟಾಯ್ ಧರಿಸಿದ ವ್ಯಕ್ತಿಯೊಬ್ಬನ ಫೋಟೋ, ಬಹುಶಃ ಯಶವಂತನದ್ದೇ ಇರಬೇಕು. ಆದರೆ ಪಾಸ್‌ಪೋರ್ಟ್ ಸೈಜಿನ ನೆಗೆಟಿವ್ ಇಟ್ಟುಕೊಂಡು ಇಷ್ಟು ದೊಡ್ಡ ಪ್ರಿಂಟ್ ತೆಗೆದ ಕಾರಣವೋ ಏನೋ, ಕಪ್ಪು ಬಿಳುಪಿನ ಬದಲಾಗಿ ಕಂದು ಬಣ್ಣ ಹೊಡೆಯುತ್ತಿತ್ತು. ಮುಂಬಾಗಿಲ ಚೌಕಟ್ಟಿನ ಮೇಲೆ, ಚಿದಂಬರ ದಾಮ್ಲೆ ಮದುವೆಯ ಫೋಟೋ ಇರಬೇಕು.

ಉಲ್ಲಾಸ ದೇಶಪಾಂಡೆ, ಒಳಗಿನ ಕೋಣೆಯಲ್ಲಿ ಮಲಗಿದ್ದ ಯಶವಂತನ ತಾಯಿಯತ್ತ ಕಣ್ಣು ಹಾಯಿಸಿದ. ಪ್ರಾಯದಲ್ಲಿ ಫೋಟೋದಲ್ಲಿ ಕಾಣುವಂತೆ ತೆಳ್ಳಗಿದ್ದರೂ ಆ ಮೇಲೆ ಬೆಳೆದ ಅಸಾಧ್ಯ ಬೊಜ್ಜಿನಿಂದಾಗಿ, ಮತ್ತು ಈಗ ಕಾಯಿಲೆಯಿಂದ ಮೈತುಂಬಾ ತುಂಬಿದ ನೀರಿನಿಂದಾಗಿ, ದೊಡ್ಡ ಹತ್ತಿಯ ಮೂಟೆಯನ್ನು ಮಂಚದ ಮೇಲೆ ಒಗೆದಂತಿತ್ತು. ಹ್ಯಾಂಡ್ ಲೂಮಿನ ಚೌಕುಳಿ ಹೊದಿಕೆಯೊಂದು ಅದನ್ನು ಮುಚ್ಚಿತ್ತು. ಔಷಧಗಳ ಚಿಮುಟು ವಾಸನೆ- ''ಆಕೆ ನಿದ್ರೆ ಹೋಗಿದ್ದಾಳೆ. ನಿನ್ನೆ ತುಂಬ ತ್ರಾಸಾಗಿತ್ತು, ಸರ್. ಡಾಕ್ಟರರನ್ನು ಕರೆದುಕೊಂಡು ಬರಬೇಕಾಯಿತು. ಔಷಧಿಯ ಪ್ರಭಾವದಿಂದ ನಿದ್ರೆ ಹೋಗಿದ್ದಾಳೆ. ಹಾಗಾಗಿ ನಿಮಗೆ ಕೊಡಬೇಕಾದ ಪಾರ್ಸೆಲ್ ಸಿದ್ಧವಾಗಿಲ್ಲ ಸರ್. ಉಪ್ಪಿನ ಕಾಯಿ ಕ್ಯಾನ್ಸಲ್ ಮಾಡಿದ್ದೇವೆ. ಎರಡು ಚಟ್ನಿಪುಡಿಗಳನ್ನು ಮಾತ್ರ ಕೊಡುವುದೆಂದು ನಿರ್ಧಾರ ಮಾಡಿದೆವು. ಅದಕ್ಕಾಗಿ ಬೆಳಗ್ಗೆ ದಾದರ್‌ನ ಮಾರ್ಕೆಟ್ಟಿಗೆ ಹೋಗಿ ಎಲ್ಲ ಸರಂಜಾಮು ತಂದೆ. ನಿಮಗೆ ತೊಂದರೆ ಕೊಡುತ್ತಿದ್ದೇವೆ ಸರ್''.

ಉಲ್ಲಾಸ ದೇಶಪಾಂಡೆ ಒಂದು ನಿಮಿಷ ಸುಮ್ಮನಿದ್ದ. ಆಮೇಲೆ ''ನಿಮ್ಮ ವಯಸ್ಸೆಷ್ಟು?'' ಎಂದು ಕೇಳಿದ. ''72 ದಾಟಿತು'' ಎಂದರವರು. ''ನನ್ನದು ಮೂವತ್ತಾರು, ಅಂದರೆ ನಿಮ್ಮ ಅರ್ಧದಷ್ಟು ವಯಸ್ಸು. ನಿಮಗೆ ನನ್ನಷ್ಟೇ ವಯಸ್ಸಿನ ಮಗನಿದ್ದಾನೆ. ನೀವು ನನ್ನನ್ನು ಸರ್ ಸರ್‌ಅಂತ ಬಹುವಚನದಲ್ಲಿ ಕರೆಯಬಾರದು. ನನಗೆ ಇರಿಸುಮುರುಸಾಗುತ್ತದೆ'' ಎಂದು ತಣ್ಣಗೆ ಹೇಳಿದ. ''ಉಲ್ಲಾ, ಮಾಸ್ತರರಾದ ನಿಮ್ಮನ್ನು ನಾನು ಸರ್ ಎಂದು ಸಂಬೋಧಿಸಬೇಕು. ಆದರೆ ನನ್ನ ಕಾರ್ಪೊರೇಟ್ ಬುದ್ಧಿ ಬಿಟ್ಟಿಲ್ಲ'' ಎಂದು ನಕ್ಕ.

''ಛೇ, ಛೇ, ಎಲ್ಲಾದರೂ ಉಂಟೇ? ವಯಸ್ಸಿನಲ್ಲಿ ಹಿರಿಯವ ಎಂದು ನಾನು ಆ ಸ್ವಾತಂತ್ರ್ಯ ತೆಗೆದುಕೊಳ್ಳಲೇ? ತಾವು ತುಂಬ ಕಲಿತವರು. ದೊಡ್ಡ ಅಧಿಕಾರದಲ್ಲಿರುವವರು. ನಿಜ ಹೇಳಬೇಕೆಂದರೆ, ನಿಮ್ಮ ಮೂಲಕ ನಾನು ಒಂದೆರಡು ಚಟ್ನಿಪುಡಿಗಳ ಪಾರ್ಸೆಲ್ಲನ್ನು ಮಗನಿಗೆ ಕಳುಹಿಸುವುದೆಂದರೆ ನನ್ನ ಉದ್ಧಟತನ. ಅದಕ್ಕಾಗಿ ನೀವು ನನ್ನನ್ನು ಕ್ಷಮಿಸಬೇಕು. ಆದರೆ ಮಂಚದ

ಮೇಲೆ ಮಲಗಿರುವ ಈ ಮುದುಕಿಯ ಕೊನೆಯ ಬಯಕೆ ಪೂರೈಸಲು, ನಾನು ಈ ಹೆಜ್ಜೆ ತೆಗೆಯುವುದು ಅನಿವಾರ್ಯವಾಯಿತು''. ಅವರು ಎರಡೂ ಕೈ ಜೋಡಿಸಿ ನಿಂತರು.

''ಏನಾಗಿದೆ?'' ಎಂದು ಕೇಳಿದ ಉಲ್ಲಾಸ ದೇಶಪಾಂಡೆ. ಅವನ ಸ್ವರದಲ್ಲಿ ದಿಗಿಲು ಕಾಣ ಹತ್ತಿತ್ತು. ''ಬೋನ್ ಕ್ಯಾನ್ಸರ್. ಥರ್ಡ್ ಸ್ಟೇಜಿನಲ್ಲಿದೆ'', ಮೆತ್ತಗೆ ಹೇಳಿದರು. ''ಯಶವಂತನಿಗೆ ಇನ್ನೂ ಸುದ್ದಿ ಕೊಟ್ಟಿಲ್ಲ. ದಯವಿಟ್ಟು ನೀವೂ ಹೇಳಬಾರದೆಂದು ಕೇಳಿಕೊಳ್ಳುತ್ತೇನೆ ಸರ್. ದೂರದ ದೇಶ. ಹೇಗೋ ಏನೋ?''

ಉಲ್ಲಾಸ ದೇಶಪಾಂಡೆಗೆ ಅಲ್ಲಿಂದ ಎದ್ದು ಓಡಿ ಹೋಗಬೇಕು ಎಂದು ತೀವ್ರವಾಗಿ ಅನಿಸಿತು. ಆದರೆ ಕಾಲುಗಳು ನೆಲದೊಳಗೆ ಹೂತು ಹೋದಂತೆ, ಕಬ್ಬಿಣದ ಕುರ್ಚಿಗೆ ಸೊಂಟದ ಹಿಂಭಾಗ ಅಂಟಿದಂತೆ. ''ಕಾಫಿ ಮಾಡಲೇ?'' ಎಂದು ಕೇಳಿದರು ಚಿದಂಬರ ದಾಮ್ಲೆ. ಅವನು ಬೇಡ ಎಂದು ತಲೆಯಲ್ಲಾಡಿಸಿದ.

ಮಾಡಿ ''ಅವನೇ ಯಶವಂತ. ಜರ್ಮನ್ ಕಂಪೆನಿಯಲ್ಲಿ ಸಕ್ಸಸ್‌ಫುಲ್ ಇಂಜಿನಿಯರ್. ಖಡಾಖಂಡಿತ ಎರಡು ವರ್ಷಗಳಿಗೊಮ್ಮೆ ತರಕ್ಕೀ ಪಡೆಯುತ್ತಾನೆ. ಪರಿಚಯವಾದರೆ ನೀವು ಖಂಡಿತ ಅವನ ಬಗ್ಗೆ ಹೆಮ್ಮೆ ಪಡುತ್ತೀರಿ.''

ಬೇಡ ಅಂದರೂ ಅವರು ಚಹ ಮಾಡಿದರು. ಉಲ್ಲಾಸ ದೇಶಪಾಂಡೆಗೆ ಅದನ್ನು ಕುಡಿಯುವುದು ಸಾಧ್ಯವಾಗುತ್ತಿಲ್ಲ. ತೀರ ಕಹಿಕಹಿಯಾಗಿತ್ತು. ಇನ್ನೊಂದು ಗುಟುಕು ಕುಡಿದರೆ ಎಲ್ಲಿ ವಾಂತಿ ಮಾಡುತ್ತೇನೋ ಎಂದು ಬರಿದೇ ಕೈಯಲ್ಲಿ ಹಿಡಿದು ಕುಳಿತ. ''ನೀವು ನನ್ನನ್ನು ಕ್ಷಮಿಸಬೇಕು ಸರ್. ಚಟ್ನಿಪುಡಿ ಸಿದ್ಧವಾಗಿಲ್ಲ. ನಿನ್ನೆ ಅವಳ ಪರಿಸ್ಥಿತಿ ನೋಡಿ ತುಂಬ ಗಾಬರಿಯಾಗಿದ್ದೆ. ಅವಳಿಗೆ ಔಷಧಿ, ಗೋಧಿಗಂಜಿ ಅಂತ ಆ ಓಡಾಟದಲ್ಲಿಯೇ ಇದ್ದೆ. ನಾನೇ ಕುಟ್ಟಬೇಕು. ಎರಡು ಲಕೋಟೆಯಲ್ಲಿ ಹಾಕಿ ಕೊಡುತ್ತೇನೆ. ನೀವು ಮಂಗಳವಾರ ಹೋಗುವುದಲ್ಲವೇ?



''ಯಾಕೆ? ಯಶವಂತ ದಾಮ್ಲೆಗೆ ಒಮ್ಮೆ ಬಂದು ಹೋಗಲು ಹೇಳಬಹುದಲ್ಲ?'' ಎಂದು ಕೇಳಿದ. ಅವರ ಮುಖ ಜೋತುಬಿತ್ತು. ''ಹೇಳಿದೆವು ಸರ್. ಆತ ಬರಲೊಲ್ಲ. ಇಂಡಿಯಾ ನಾರುತ್ತಿದೆ ಅನ್ನುತ್ತಾನೆ'' ಎಂದರು. ಗೋಡೆಯ ಮೇಲಿನ ಫೋಟೋದತ್ತ ಬೆರಳು

ಸೋಮವಾರ ಸಂಜೆಯೊಳಗೆ ನಿಮಗೆ ತಲಪಿಸುತ್ತೇನೆ. ಖಂಡಿತ ತಲಪಿಸುತ್ತೇನೆ ಸರ್. ನೀವು ಪುನಃ ಬರುವ ಅಗತ್ಯವಿಲ್ಲ'' ಎಂದು ಕ್ಷಮೆಯಾಚನೆಯ ಧ್ವನಿಯಲ್ಲಿ ಹೇಳಿದರು. ಉಲ್ಲಾಸ ದೇಶಪಾಂಡೆ ಅವರ ಮನೆಯಿಂದ ಹೊರಬಿದ್ದಾಗ ಸಂಜೆ ಬಾಡಿತ್ತು.



ಅವನು ಹಿಂದೆ ಎಂದೂ ಇಷ್ಟೊಂದು ವಿಚಲಿತನಾಗಿರಲಿಲ್ಲ. ತನ್ನ ಮದುವೆ ಮುರಿದು ಬಿದ್ದಾಗಲೂ ಸಹ. ಸಂಬಂಧಗಳ ಬಗ್ಗೆ ಸೆಂಟಿಮೆಂಟಲ್ ಆಗುವುದನ್ನು ಬಿಡಲು ಅವನ ಕಾರ್ಪೊರೇಟ್ ಎಕ್ಸಿಕ್ಯೂಟಿವ್‌ತನ ಎಂದೋ ಕಲಿಸಿತ್ತು. ಅವನ ಆಫೀಸಿನಲ್ಲಿ ಮದುವೆಯಾದ ಹೆಣ್ಣೊಂದು ತಾನಾಗಿ ಮೈ ಮೇಲೆ ಬಿದ್ದ ವಿಷಯದಲ್ಲಿಯೂ ಅವನದು, ತೀರ ನಿರ್ಲಿಪ್ತ ಮನೋಭಾವ. ಕೆಲವರಿಗೆ ಈ ಸಂಬಂಧದ ಬಗ್ಗೆ ತಿಳಿದಿತ್ತು. ಅವರವರು ಮಾತನಾಡುತ್ತಿದ್ದರೇನೋ. ಆದರೆ ಉಲ್ಲಾಸ ದೇಶ ಪಾಂಡೆ ಈ ಸಂಬಂಧವನ್ನು ಭಾವುಕವಾಗಿ ಹಚ್ಚಿಕೊಂಡಿರಲಿಲ್ಲ. ಒಂದು ರೀತಿಯ ಅಗತ್ಯ ಪೂರೈಕೆಯ ಅಪ್ರೋಚ್. ಆಕೆಯೂ ಹಾಗೆಯೇ ತನ್ನ ಕೆಲಸಗಳ ಮಧ್ಯೆ, ರಿಲ್ಯಾಕ್ಸ್ ಆಗಲೆಂಬಂತೆ ಹಂಚಿಕೊಂಡ ರೀತಿ.

ಆದರೆ ಅವನಿಗೆ ಚಿದಂಬರ ದಾಮ್ಲೆಯ ಮನೆಯ ಭೇಟಿಯನ್ನು ಮರೆಯುವುದು ಸಾಧ್ಯವಾಗಲಿಲ್ಲ. ಒಂದು ಸಣ್ಣ ಪೊಟ್ಟಣವನ್ನು, ತಾನಿನ್ನೂ ಭೇಟಿಯಾಗದ ವಾಯ್ ಸಿ ದಾಮ್ಲೆಯ ಕೈಗೆ ಮುಟ್ಟಿಸಿದರೆ ಧನ್ಯನಾಗಬಹುದು ಎಂಬ ತೃಪ್ತ ಭಾವ ಅವನನ್ನು ಹೊಂಚುಹಾಕಿತು. ಈ ಯೋಚನೆಗಳಲ್ಲಿಯೇ ಅವನು ಆಫೀಸಿಗೆ ಕೊನೆಯ ವಿದಾಯ ಹೇಳಿದ. ಮುಂಬೈಯಲ್ಲಿ, ಕೊನೆಯ ಕ್ಷಣಗಳಲ್ಲಿ ಕೊಳ್ಳಬೇಕಾದ ವಸ್ತುಗಳನ್ನು ಕೊಂಡು, ಪ್ಯಾಕ್ ಮಾಡಿದ. ಟೆಲಿಫೋನ್ ಮಾಡುವವರಿಗೆಲ್ಲ ಮಾಡಿದ. ಮನೆಯ ಚಾವಿಯನ್ನು, ಆಫೀಸಿಗೆ ಮರಳಿಸಿದ. ಸೋಮವಾರ ಚಿದಂಬರ ದಾಮ್ಲೆ ಅವನನ್ನು ಭೇಟಿಯಾಗಲು ಬರಲಿಲ್ಲ. ಅವರನ್ನು ಕಾಯುವ ವ್ಯವಧಾನವೂ ಅವನಿಗಿರಲಿಲ್ಲ. ಆದರೆ ಸೋಮವಾರ ಹೊತ್ತು ಹೋದಂತೆಲ್ಲ, ಅವನ ಆತಂಕ ಹೆಚ್ಚುತ್ತಾ ಹೋಯಿತು. ರಾತ್ರಿ ತಡೆಯಲಾಗದೇ ಅವನೇ ಅವರಿಗೆ ಟೆಲಿಫೋನ್ ಮಾಡಿದ. ಸಂಪರ್ಕ ಸಿಕ್ಕಲಿಲ್ಲ. ಮಲಗಿದರೆ ನಿದ್ರೆ ಬರಲಿಲ್ಲ. ಎಲ್ಲಾದರೂ ಆ ವಸ್ತುಗಳನ್ನು ಅವರ ಆಸೆಯಂತೆ ಒಯ್ಯುವುದು ಸಾಧ್ಯವಾಗದಿದ್ದಲ್ಲಿ ತಾನೊಂದು ದೊಡ್ಡ ತಪ್ಪೆಸಗಿದಂತಾಗಬಹುದು ಎಂಬ ಭಾವ ಹಳಹಳಿಸುವಂತೆ ಮಾಡಿತು. ಮಂಗಳವಾರ ಬೆಳಗ್ಗೆ ಮತ್ತೆ ಟೆಲಿಫೋನ್ ಮಾಡಿದ. ರಿಂಗ್ ಆಗುತ್ತಿದ್ದರೂ ಬಹಳ ಹೊತ್ತು ಯಾರೂ ಎತ್ತಲಿಲ್ಲ. ಉಲ್ಲಾಸ ದೇಶಪಾಂಡೆ ಮೊತ್ತ ಮೊದಲು ಸೋಲುಂಡವನಂತೆ ಫೀಲ್‌ಮಾಡಿ ಪ್ರಯತ್ನ ಕೈಬಿಟ್ಟ.

ಅವನು ಸಹರಾ ಏರ್‌ಪೋರ್ಟ್‌ಗೆ ಮೂರು ಘಂಟೆ ಮೊದಲೇ ಹೋದರೂ, ಸಹೋದ್ಯೋಗಿಗಳೆಲ್ಲ ಅಲ್ಲಿ ಜಮಾಯಿಸಿ ಹೂವಿನ ಹಾರ ಹಿಡಿದು ನಿಂತಿದ್ದರು. ಆಫೀಸ್ ಬಾಯ್‌ಗಳು ಅವನ ಲಗ್ಗೇಜ್‌ಗಳ ಉಸ್ತುವಾರಿ ನೋಡಿಕೊಳ್ಳುತ್ತಿದ್ದಾಗ, ಅವನ ಕಣ್ಣು ಸಹೋದ್ಯೋಗಿಗಳ ಮಧ್ಯೆ ಚಿದಂಬರ ದಾಮ್ಲೆಯ ಕುಳ್ಳ ಆಕೃತಿಯನ್ನು ಅರಸಿತು. ಅದು ಕಾಣದಿದ್ದಾಗ ನಿರಾಸೆಗೊಂಡ. ಆಯಿತು, ಇನ್ನು ಅವರು ಕೊಡಬಹುದಾದ ಪಾರ್ಸೆಲನ್ನು ಕೊಂಡೊಯ್ಯದ ತಪ್ಪುಭಾವ ಜರ್ಮನಿಯಲ್ಲಿ ತನ್ನನ್ನು ಮುಂದಿನ ದಿನಗಳಲ್ಲಿ ಕಾಡಿ ಬಳಲಿಸುವ ವಸ್ತುವಾಗಬಹುದು ಎಂದುಕೊಂಡು ಸಹೋದ್ಯೋಗಿಗಳಿಗೆಲ್ಲ ಮತ್ತೊಮ್ಮೆ ವಿದಾಯ ಹೇಳಿದ. ಇನ್ನೇನು, ತಾನಾಗಿ



ತೆರೆಯುವ ಗಾಜಿನ ಬಾಗಿಲಿನೊಳಗೆ ಹೋಗ ಬೇಕು ಅನ್ನುವಷ್ಟರಲ್ಲಿ-

ದೂರದಲ್ಲಿ ಚಿದಂಬರ ದಾಮ್ಲೆ ಓಡುತ್ತಾ ಬರುವುದು ಕಂಡು ನಿಂತ. ಮೆಟ್ಟಿಲು ಹತ್ತಿ ಹತ್ತಿರ ಬಂದ ದಾಮ್ಲೆ ತೇಕುತ್ತಿದ್ದರು. ''ನಮಸ್ಕಾರ ಸರ್, ನಿನ್ನೆ ಬರಲಾಗಲೇ ಇಲ್ಲ. ಸಾರಿ, ತಾವು ದಾರಿ ಕಾಯುತ್ತಿದ್ದಿರೇನೋ? ಕ್ಷಮಿಸಿ. ದಾದರ್‌ನಿಂದ ಟ್ಯಾಕ್ಸಿ ಹಿಡಿದು ಬಂದೆ'' ಎಂದು ವಿಷಾದದಿಂದ ಹೇಳಿದರು. ಉಲ್ಲಾಸ ದೇಶಪಾಂಡೆ ಸುಮ್ಮನೆ ಕೈಚಾಚಿ ಅವರ ಕೈಗಳನ್ನು ಹಿಡಿದ. ತಣ್ಣಗೆ ಕೊರೆಯುತ್ತಿತ್ತು. ಕುಲಕಬೇಕು ಅನ್ನುವಷ್ಟರಲ್ಲಿ ''ಯಶವಂತನ ತಾಯಿ ನಿನ್ನೆ ಹೋಗಿಬಿಟ್ಟಳು'' ಎಂದು ನಿರ್ಭಾವದಿಂದ ಹೇಳಿದರು. ''ಸಾವು ಅಂಥ ಭಯಾನಕವಾಗಿರಲಿಲ್ಲ. ಅಥವಾ ನಮಗೆ ಹಾಗೆ ಅನ್ನಿಸಿತು. ಮೂರು ದಿನಗಳಿಂದ ಕೋಮಾದಲ್ಲಿದ್ದಳು. ಎಚ್ಚರಾದಾಗೆಲ್ಲ ಯಶವಂತ ನನ್ನು ತುಂಬ ನೆನಸಿದಳು. ಸಾಯುವ ಮುನ್ನ ಅವನು ಚಿಕ್ಕಂದಿನಲ್ಲಿ ಉಪಯೋಗಿಸುತ್ತಿದ್ದ ಒಂದು ಕೊಡೆಯನ್ನು ಅವನಿಗೆ ತಲಪಿಸಬೇಕೆಂದು ನನಗೆ ತಾಕೀತು ಮಾಡಿದಳು. ಮೂರು ಮಡಿ ಕೆಯ ಕೊಡೆ. ಖಂಡಿತ ನಿಮ್ಮ ಹ್ಯಾಂಡ್ ಬ್ಯಾಗಿನಲ್ಲಿ ಹಿಡಿಯುತ್ತದೆ. ಪ್ಯಾಕ್ ಕೂಡಾ ಮಾಡಿಲ್ಲ. ಚಿಕ್ಕಂದಿನಲ್ಲಿ ಯಶವಂತ ಈ ಕೊಡೆಯನ್ನು ತುಂಬ ಹಚ್ಚಿಕೊಂಡಿದ್ದ. ನಿನ್ನೆ ಇಡೀ ದಿನ ಸ್ಮಶಾನದಲ್ಲೇ ಕಳೆದು ಹೋಯಿತು. ದಯವಿಟ್ಟು ಅವನಿಗೆ ತಲಪಿಸಬೇಕು ಸರ್. ತುಂಬಾ ಥ್ಯಾಂಕ್ಸ್ ಸರ್. ನಿಮ್ಮ ಉಪಕಾರ ಮರೆಯಲಾರೆ.''

ಹೊತ್ತಾಯಿತೆಂದು ಧ್ವನಿವರ್ಧಕದಲ್ಲಿ ಅವನ ಹೆಸರು ಕೂಗುತ್ತಿದ್ದರೂ ಉಲ್ಲಾಸ ದೇಶಪಾಂಡೆ ಥಕ್ಕಾಗಿ ಅಲ್ಲಿಯೇ ನಿಂತಿದ್ದ.





ಸಾಯುವ ಮುನ್ನ ಅವನು ಚಿಕ್ಕಂದಿನಲ್ಲಿ ಉಪಯೋಗಿಸುತ್ತಿದ್ದ ಒಂದು ಕೊಡೆಯನ್ನು ಅವನಿಗೆ ತಲಪಿಸಬೇಕೆಂದು ನನಗೆ ತಾಕೀತು ಮಾಡಿದಳು. ಮೂರು ಮಡಿಕೆಯ ಕೊಡೆ. ಖಂಡಿತ ನಿಮ್ಮ ಹ್ಯಾಂಡ್ ಬ್ಯಾಗಿನಲ್ಲಿ ಹಿಡಿಯುತ್ತದೆ.

ಜನಪದ

ಗಣಪತಿ ಬೀರಪ್ಪ ಆಚಾರಿ
ಸಂಗ್ರಹ: ಎಲ್.ಆರ್. ಹೆಗಡೆ

# ಹಕ್ಕಿ ಟೊಪ್ಪಿ



## ಕತೆ-1

ಒಬ್ಬ ಅರಸ ಹಾದಿಯಲ್ಲಿ ಹೋಗ್ತಾ ಇದ್ದ. ಹೋಗುವಾಗ ಟೊಪ್ಪಿಹಕ್ಕಿ ಹೇಳಿತು: 'ಅರಸನಿಗೆ ಟೊಪ್ಪಿಗೆ ಇಲ್ಲ, ನನಗೆ ಟೊಪ್ಪಿಗೆ ಇದೆ.'

ದಿನಾಲು ಹೀಗೆ ಹೇಳ್ತಿತ್ತು.

ದಿನಾ ಹೀಗೇ ಹೇಳೂದು ಕೇಳಿ ಅವನಿಗೆ ಸಿಟ್ ಬಂತು. ಸಿಟ್ಟು ಬಂದು ಅದರ ಟೊಪ್ಪಿಗೆ ತೆಗೆದುಬಿಟ್ಟ.

ಆಗ ಅದು ಏನು ಹೇಳ್ತು? 'ಅರಸನಿಗೆ ಟೊಪ್ಪಿಗೆಗೆ ಗತಿ ಇಲ್ದೆ ನನ್ನ ಟೊಪ್ಪಿಗೆ ತಕ್ಕೊಂಡ.'

ಆಗ ಅದರ ಟೊಪ್ಪಿಗೆಯನ್ನು ಹಿಂದೆಯೇ ಅದರ ತಲೆಗೆ ಹಾಕಿದ. ಆಗ ಅದು 'ಅರಸನಿಗೆ ಟೊಪ್ಪಿಗೆ ಇಲ್ಲ, ನನಗೆ ಟೊಪ್ಪಿಗೆ ಇದೆ' ಅಂತ ಮತ್ತೆ ಹೇಳಲು ಶುರುಮಾಡ್ತು.

ಅರಸನಿಗೆ ಟೊಪ್ಪಿಗೆ ತೆಗೆಯಾವಕ್ಕೂ ಗತಿ ಇಲ್ಲ, ಬಿಡಲೂ ಗತಿಯಿಲ್ಲ ಈ ನಮೂನೆಯಾಯಿತು.

## ಕತೆ-2

ಒಬ್ಬ ದಾರಿಹೋಕನು ಟೊಪ್ಪಿಗೆ ಧರಿಸಿಕೊಂಡು ಮಧ್ಯಾಹ್ನದ ಬಿಸಿಲಿನಲ್ಲಿ ನಡೆದು ಬರುತ್ತಿದ್ದನು. ಅವನಿಗೆ ಆಯಾಸವಾಗಿ ಮರದ ನೆರಳಿನಲ್ಲಿ ಕೂತು ವಿಶ್ರಾಂತಿ ತೆಗೆದುಕೊಳ್ಳಬೇಕೆಂದು ಅಶ್ವತ್ಥ ಮರದ ನೆರಳಿಗೆ ಬಂದನು.

ಮರದ ಟೊಂಗೆಯ ಮೇಲೆ ಒಂದು ಹಕ್ಕಿ ಕೂತುಕೊಂಡಿತ್ತು. ಇವನು ನೆರಳಿನಲ್ಲಿ ಬಂದು ನಿಂತದ್ದನ್ನು ಅದು ನೋಡಿತು. 'ನೆರಳಿನಲ್ಲಿ ಬಂದು ನಿಲ್ಲು ಅಂತ ಹೇಳಿದೆ. ಬಂದು ನಿಂತ. ನಾನು ಹೇಳಿದಂತೆ ಕೇಳಿದ ಇವ' ಅಂತ ಹೇಳಿತು.

ಇದು ಕೇಳಿ ದಾರಿಹೋಕ ಮೇಲೆ ನೋಡಿದ. ಮರದ ಬುಡದಲ್ಲಿ ಕೂತೇ ಬಿಟ್ಟ. 'ಮರದ ಬುಡದಲ್ಲಿ ಕೂತುಕೋ ಎಂದೆ, ಕೂತೇಬಿಟ್ಟ' ಅಂದಿತು ಹಕ್ಕಿ.

ದಾರಿಹೋಕ ಟೊಪ್ಪಿಗೆ ತೆಗೆದು ಅದರಿಂದ ಗಾಳಿ ಬೀಸಿಕೊಳ್ಳಹತ್ತಿದ. 'ಟೊಪ್ಪಿಗೆ ತೆಗೆದುಕೊಂಡು ಗಾಳಿ ಬೀಸಿಕೋ ಎಂದಿದ್ದೆ, ಹಾಗೇ ಮಾಡಿದ' ಎಂದಿತು.

ದಾರಿಹೋಕ ಅಲ್ಲಿಂದೆದ್ದು ಮರದ ಮರೆಗೆ ಹೋಗಿ ವಂದಕ್ಕೆ ಕೂತ. 'ವಂದ ಮಾಡು ಅಂತ ನಾನು ಅವನಿಗೆ ಹೇಳಿದೆ. ಅದರಂತೆ ಕೂತ' ಅಂದಿತು.

ಸಿಟ್ಟಿನಿಂದ ಎದ್ದ ಅವನು ಹಕ್ಕಿಗೆ ಹೊಡೆಯಲು ಒಂದು ಕಲ್ಲನ್ನು ತಕ್ಕೊಂಡ, 'ಕಲ್ಲನ್ನು ಕೈಯಲ್ಲಿ ತಕ್ಕೋ ಎಂದೆ, ತಕ್ಕೊಂಡೇ ಬಿಟ್ಟ' ಅಂದಿತು.

ಇನ್ನೂ ಜೋರು ಸಿಟ್ಟು ಬಂದು ಕಲ್ಲನ್ನು ಹಕ್ಕಿಗೆ ಹೊಡೆದ. 'ನನಗೆ ಕಲ್ಲು ಹೊಡೆ ಎಂದು ಹೇಳಿದ್ದೆ' ಎಂದು ಹೇಳಿ ಹಕ್ಕಿ ಟೊಂಗೆಯಿಂದ ಪುರ್ರನೆ ಹಾರಿಹೋಯಿತು.

# ಕಾಗದದ ದೋಣಿ



ಪ್ರೀತಿಯ ಗೆಳತಿ ಮಾಹಿನ್ ಮೆಹರ್ಸಾ,

ನೀ ಈಗ ಎರಡು-ಮೂರು ಮಕ್ಕಳ ತಾಯಾಗಿ, ದುಂಡ-ದುಂಡಗ ಇನ್ನಷ್ಟು ಛಂದ ಆಗಿರ್ತಿ ಅಂತ ಕಲ್ಪಿಸಿಗೋತೀನಿ.

ಮಾಹಿನ್, ನಿನಗ ನೆನಪೈತೀ? 1973ರೊಳಗ ಧಾರವಾಡದಾಗ ಯೂನಿವರ್ಸಿಟಿ ಹಾಸ್ಟಲ್‌ದೊಳಗ ನಾವಿಬ್ರೂ, ಒಂದೇ ಖೋಲಿಯೊಳಗಿದ್ದಿವಿ. ನಿನಗ ಇಂಗ್ಲಿಷ್ ಬಿಟ್ಟು ಬ್ಯಾರೇ ಭಾಷೆ ಬರ್ತಿದ್ದಿಲ್ಲಾ, ನನಗ ಕನಡಾ ಬಿಟ್ಟು ಬ್ಯಾರೇದೇನೂ ಗೊತ್ತಿರಲಿಲ್ಲಾ. ನಾ ಅದೇ ಆಗ ಗುಲಬರ್ಗಾದ ರಣಬಿಸಿಲಿನಿಂದ, ಏಕದಂ ಧಾರವಾಡದ ಥಂಡಿಗಿ ಬಿದ್ದು, ಭಳಿಜ್ವರಾ ಬಂದು ಮಲಗಿದ್ಯಾ. ನೀ ಚಾ ಮಾಡಿ ಕೊಡ್ತಿದ್ದಿ. ನಿಮ್ಮೂರಿಂದ ತಂದಿದ್ದ ಅಪರೂಪದ ಶಂಖ ಚಿಪ್ಪುಗಳಿಂದ ಮಾಡಿದ ಬಾತುಗೋಳಿಗಳದು ಒಂದ ಸೆಟ್ ಕೊಟ್ಟಿದ್ದಿ. ಹಿಂದೂ ಮತ್ತ ಪರ್ಶಿಯನ್‌ದೊಳಗಿರೋ ಅಗ್ನಿಪೂಜಾದ ಬಗ್ಗೆ ನಮ್ಮ-ನಮ್ಮ ಭಾಷಾದಾಗ ಮಾತಾಡ್ತಿದ್ದಿವಿ.

ಇನ್ನೇನು ಪರೀಕ್ಷಾ ಆಯ್ತು, ಊರಿಗಿ ಹೋಗಾಕ ಗಂಟ ಕಟ್ಟಬೇಕ ಅನ್ನೂದರಾಗ ನೀ ಒಂದಿಸಾ ಅಳಕೊಂತ ಬಂದಿ. ನಿನ್ನ ಹಿಂದ 5-6 ಮಂದಿ ಹುಡಗ್ಯಾರು. ನೀ ಅಳಕೊಂತ ನಿನ್ನ ಕಾಟ ಮ್ಯಾಲ ಮಲಕೊಂಡಿ. ನಿನ್ನ ಜೋಡಿ ಬಂದ ಹುಡಗ್ಯಾರು, ಗುಸುಗುಸು ಮಾತಾಡಕೊಳ್ಳಾಕ ಹತ್ತಿದ್ರು-''ಅಯ್ಯ, ಇಕಿ ಇಲ್ಲಿ ಕಲ್ಯಾಕ ಬಂದಿಲ್ಲಂತ, ತಮ್ಮ ಧರ್ಮಾ ಪ್ರಸಾರಾ ಮಾಡಾಕ ಬಂದಾಳಂತ, ಕಲಿಯೂದೊಂದ ನೆವಾ ಅಂತ. ಅದಕ ಇವತ್ತ ಗೊತ್ತಾಗಿ ಇಕಿನ್ನ ಹಾಸ್ಟಲ್‌ದಿಂದ ಬಿಡಸಾಕ ಹತ್ಯಾರ. ಮಾಡೂದೆಲ್ಲಾ ಮಾಡಿ ಮಳ್ಳೀ ಹಂಗ ಅಳೂದು ನೋಡು'' ಎಂದರು. ಆಗಲೇ ನಿ ಎದ್ದು ಅಳಕೋತ ಅಳಕೋತನಽ ಪ್ಯಾಕಿಂಗ್ ಮಾಡಕೋಳಾಕ ಹತ್ತಿದಿ. ನನಗೇನ ಮಾಡಬೇಕಂತನಽ ತಿಳೀಲಿಲ್ಲಾ. ಒಂದಽ ಸೂಟಕೇಸು ನಿಂದು. ಎಲ್ಲಾ ಮುಗದ ಮ್ಯಾಲೆ ನನ್ನ ಹಂತೇಲಿ ಬಂದು ''ಶಶೀ, ನನ್ನ ಕನ್ನಡಿ ಇಂದ ಮುಂಜಾನಿ ಒಡದ ಹೋತು. ನನಗೀಗ ಸಿಟಿಯೊಳಗ ಹೋಗಿ ತರಾಕ ಟೈಮಿಲ್ಲಾ. ಈಗಲೇ ಊರಿಗೆ ಹೊಂಟೀನಿ. ದಯಮಾಡಿ ನಿನ್ನ ಕನ್ನಡಿ ಕೊಡು. ನಾ ಅದರ ದುಡ್ಡ ಕೊಡ್ತೀನಿ. ನೀ ಬ್ಯಾರೇ



ತೊಗೋ'' ಅಂದಿ ಇಂಗ್ಲಿಷಿನಾಗೇ. ನನಗ ಸಹಜ s ನಮ್ಮ ಗುಂಪಿನ ಮ್ಯಾಲ ಕಣ್ಣ ಹೋತು. ನಿನ್ನ ಬೆನ್ನ ಹಿಂದ ನಿಂತ ಅವ್ರೆಲ್ಲಾ ''ಬ್ಯಾಡ, ಬ್ಯಾಡ'' ಅಂತ ಕೈಸನ್ನಿ- ಕಣ್ಸನ್ನಿ ಮಾಡಿದರು. ನಾ ನಿನ್ನ ಕಡೆ ನೋಡಲಾರದೇ 'ಸಾರಿ ಮಾಹಿನ್' ಅಂದ್ಯಾ. ನೀ ಒಂದೂ ಮಾತಾಡದೇ ಸೂಟಕೇಸ್ ತಗೊಂಡಕಿನೇ ಚಪ್ಪಲಿ ಹಾಕೊಂಡು ಹೊರಗ ಹೋಗಿಬಿಟ್ಟೆ. ಕಿಡಕೆಂದು ಎಲ್ಲಾರೂ ನೋಡ್ಕೋತ ನಿಂತಿದ್ವಿ. ನಿನಗ್ಯಾರೂ ಕಳಸಾಕ ಬರ್ಲಿಲ್ಲಾ. ಆಮ್ಯಾಲೆ ನನಗ ತಳಮಳಾ ಸುರುವಾತು. ನಾ ಹಂಗ್ಯಾಕ ಮಾಡದ್ಯಾ? ನಿನ್ನ ಮ್ಯಾಲಿನ ಆಪಾದನಿ ಎಷ್ಟು ಖರೇನೋ ಎಷ್ಟು ಸುಳ್ಳೋ, ಖರೇ ಇದ್ರೂ, ನಿನ್ನ ಧರ್ಮದ ಬಗ್ಗಿ ನೀ ಹೇಳಕೊಂಡರ ಅದೊಂದು ಅಪರಾಧಾ ಅಂತ ಯಾಕ ತಿಳಕೊಂಡವಿ?

ಪ್ರಿಯ ಮಾಹಿನ್, ದಯಮಾಡಿ ಕ್ಷಮಾ ಮಾಡು. ಅಂದಿನಿಂದ ಈ ಗಳಿಗಿವರಿಗೂ ನಾ ಕನಡಿ ಮುಂದ ನಿಂತಾಗೊಮ್ಮಿ ನಿನ್ನದೇ ನೆನಪು. ನಾ ಹಂಗ ಮಾಡಬಾರದಿತ್ತು. ನೀ ಕೇಳಿದ್ದು ಬರೇ ಒಂದ ಸಣ್ಣ ಕನ್ನಡಿ. ಮಾಹಿನ್, ನನ್ನ ಜೀವನದಾಗ ನೀ ಎಂದರೇ ಮತ್ತ ಸಿಗು. ಅವತ್ತಿನ ತಪ್ಪಿಗಿ ಕ್ಷಮಾ ಕೇಳ್ತೀನಿ.

'ಶ್ರಾವಣ', ಗಿರಿನಗರ
ಬೆಂಗಳೂರು.

ನಿನ್ನ ಗೆಳತಿ
**ಶಶಿಕಲಾ ವೀರಯ್ಯಸ್ವಾಮಿ**



ಪ್ರೀತಿಯ ಅರೂ,

ನೀನು ಈಗ ಎಲ್ಲಿದ್ದೀಯ, ಏನು ಮಾಡುತ್ತಿದ್ದೀಯ ಅಂತ ನಂಗೊತ್ತಿಲ್ಲ. ಬಹುಶಃ ಈ ಕಾಗದ ನಿಂಗೆ ತಲುಪದೆ ಹೋಗಲೂಬಹುದು. ಆದರೆ ಅರೂ, ಈ ಕಾಗದ ಬರೆಯುತ್ತಿರುವಾಗ ನೀನು ನನ್ನ ಸುತ್ತಲೂ ಪರಿಮಳದಂತೆ ಆವರಿಸಿಕೊಂಡಿದ್ದೀಯಾ. ನನ್ನ ಕಾಗದದ ಪ್ರತಿ ಪದಗಳೂ ನಾನು ಚಿಕ್ಕವಳಿದ್ದಾಗ ನಿಂಜೊತೆ ಕೂತು ಮಾತಾಡುತ್ತಿದ್ದ ಎಷ್ಟೋ ವಿಷಯಗಳ ಮರುದನಿಯಂತೆ ಅನ್ನಿಸ್ತಿದೆ. ನನ್ನ ಅಜ್ಜ ನನಗೆ ಹಾಲು ಕುಡಿಸಲು ನಿನ್ನ ಪ್ರಭಾವ ಉಪಯೋಗಿಸುತ್ತಿದ್ದಳು. ನಾನೋ ಸಂಜೆ ಐದು ಗಂಟೆಗೆ ಕೂಗುವ ಅಲ್ಲಾನಿಗಾಗೇ ಕಾದುಕೊಂಡಿರುತ್ತಿದ್ದೆ. 'ಅಲ್ಲಾ ಕೂಗಿದರೆ ಅರು ಬರುತ್ತಾಳೆ', ಶಾರದಚಿಕ್ಕಿ ಹೇಳಿದ್ದಳು. ಇಲ್ಲಿ, ಬೆಂಗಳೂರಲ್ಲಿ, ಸಂಜೆ ಗಂಡನ ಜೊತೆಗೆ ಎಲ್ಲೋ ಸ್ನೇಹಿತರನ್ನ ಭೇಟಿ ಮಾಡಲು ಹೋಗುವಾಗ ಅಲ್ಲಾ ಕೂಗಿದ್ದು ಕೇಳಿದರೆ ಮತ್ತೆ ಸಾಗರದ ಮಾರ್ಕೆಟ್ ರಸ್ತೆಗೆ ಓಡಿಹೋಗೋಣವೆನ್ನಿಸುತ್ತದೆ. ನೀನು ಸಂಜೆ ಮನೆಗೆ ಬಂದು ಕೈಕಾಲು ತೊಳೆಯುವುದಕ್ಕಿಲ್ಲ ನಾನು ಓಡಿಬರುತ್ತಿದ್ದೆ. ನನಗೆ ನಿನ್ನ ಹಸಿರು ಕಾನ್ವೆಂಟ್ ಸ್ಕರ್ಟ್ ನೋಡಿದರೆ ಅದೇನೋ ಸಂತಸ. ನಿಮ್ಮಮ್ಮ 'ಸಿಂಧೂ ಮಧ್ಯಾಹ್ನ ನಿದ್ದೆ ಮಾಡಿದ್ಯಾ?' ಅಂತ ಪ್ರೀತಿಯಿಂದ ಕೇಳಿ ನಿಮ್ಮ ಮನೆಯ ಸ್ಪೆಷಾಲಿಟಿ ಅಕ್ಕಿರೊಟ್ಟಿ ಕೊಡುತ್ತಿದ್ದರು. ನಿಮ್ಮನೆಯ ಬಿಲ್ಪತ್ರೆ ಮರದ ಕಟ್ಟೆಯ ಮೇಲೆ ಕೂತುಕೊಂಡು, ನೀನು ಅವತ್ತು ಏನೇನು ಮಾಡಿದೆ ಅಂತ ನಂಗೆ ಹೇಳ್ತಾ ಇದ್ರೆ, ನಾನು ಬಾಯಿಬಿಟ್ಟುಕೊಂಡು ಕೇಳುತ್ತಿದ್ದೆ. ನನಗೆ ಯಾವಾಗ ಹೀಗೆ ಸ್ಕರ್ಟ್ ಹಾಕಿಕೊಂಡು ಕಾನ್ವೆಂಟಿಗೆ ಹೋಗುತ್ತೀನೋ ಎಂಬ ಆಸೆ. ನೀನು ನನ್ನ ಬಲೂನಿಗೆ ಸೂಜಿ ಚುಚ್ಚುತ್ತಿದ್ದೆ. 'ಹೋಂ ವರ್ಕ್ ಬರೀಲಿಲ್ಲಾಂದ್ರೆ, ಗೊತ್ತಲ್ಲಾ... ಸಿಸ್ಟರ್ ಕೈ - ಕೈ ಮುರಿಯೋ ತರಹ ಹೊಡೀತಾರೆ. ಆಮೇಲೆ ನೀನು ಕಾನ್ವೆಂಟಿಗೆ ಹೋದಂಗೇ.'

ಇಷ್ಟು ಮಾತುಕತೆಗಳಾಗುವ ಹೊತ್ತಿಗೆ ಎಲ್ಲ ಗಣಗಳೂ ಬರುತ್ತಿದ್ದರು. ಚೇತು, ಬಿಜ್ಜು, ಮಂಗಳ, ರವಿ, ಶ್ವೇತ, ವಾಸಂತಿ. ನಿಮ್ಮನೆಯ ದೊಡ್ಡ ಅಂಗಳದಲ್ಲಿ ನಾವು ಯಾವ ಆಟ ಆಡಿಲ್ಲ ಅರೂ? ಎಲ್ಲರ ಮನೆಗಳ ಕಾಂಪೌಂಡೂ ಗೋಡೆಯ ಹಾಗೆ ಎತ್ತರಕ್ಕೆ ಆದರೆ ಒಂದಕ್ಕೊಂದು ಹೊಂದಿಕೊಂಡಂತೆ ಇತ್ತಲ್ವಾ. ನಾವು ಎಲ್ಲ ಅದರ ಮೇಲೆ ಸರ್ಕಸ್ ಕಂಪನಿಯ ಕಟ್ಟಾಳುಗಳಂತೆ ಒಬ್ಬರಿಗೊಬ್ಬರು ಕೈ ಹಿಡಿದು ದಾಟಿ ಆಚೆ ಕಡೆ ಯಾರ್ದೋ ಮನೆಯ ಹಿತ್ತಲಿಗೆ ಹೋಗುತ್ತಿದ್ದೆವಲ್ಲಾ ಅದೆಷ್ಟು ಚೆನ್ನಾಗಿತ್ತು. ಬಹುಶಃ ವಾನರಸೇನೆಯೂ ಧನುಷ್ಕೋಟಿಯ ಮೇಲೆ ನಡೆವಾಗ ಅಷ್ಟು ಖುಷಿ ಪಟ್ಟಿರಲಿಕ್ಕಿಲ್ಲ.

ಸಂಜೆ ಕತ್ತಲಾಗುವಾಗ ನಿಮ್ಮನೆಯ ದೊಡ್ಡ ಬಚ್ಚಲಿನಲ್ಲಿ ಎಲ್ಲರೂ ಒಟ್ಟಿಗೆ ಕೈಕಾಲು ತೊಳೆದು, ದೇವರ ನಮಸ್ಕಾರ ಮಾಡಿ, ನಿಮ್ಮನೆಯ ಮುಂದಿನ ಕಟ್ಟೆಯ ಮೇಲೆ ಕುಳಿತು ಏನೆಲ್ಲಾ ಮಾತಾಡಿ ನಗುತ್ತಿದ್ದೆವಲ್ಲಾ. ಯಾರೋ ಹಾಲು ಮಾರುವವನ ಮುಖಮುದ್ರೆಯಲ್ಲಿ ಜಾಂಬವಂತ ಕಾಣಿಸುತ್ತಿದ್ದ ನಮಗೆ. ಅಲ್ಯಾರೋ ಬಸ್ಸು ಹತ್ತುವವರು ಗಡಿಬಿಡಿಯಲ್ಲಿ ಚಪ್ಪಲಿಯ ಬಾರ್ ಹರಿದುಕೊಂಡರೂ ನಮಗೆ ನಗು ತಡೆಯಲಾಗುತ್ತಿರಲಿಲ್ಲ. ಆಕಾಶದಲ್ಲಿ ನಕ್ಷತ್ರಗಳು ಒಂದೊಂದಾಗಿ ಬರುತ್ತಿದ್ದರೆ ನಾವು, ಯಾವುದು ಯಾವ ನಕ್ಷತ್ರ ಅಂತ ಹೆಸರಿಡುತ್ತ ಕೂರುತ್ತಿದ್ದೆವು. ಅಷ್ಟೊತ್ತಿಗೆ ನಿಮ್ಮಮ್ಮ ಬಂದು 'ಮಕ್ಕಳೇ ಇನ್ನು ಸಾಕು ಮನೆಗೆ ಹೋಗಿ, ಅರೂ ಎಸ್ಸೆಲ್ಸಿ. ತುಂಬಾ ಓದ್ಕೋಬೇಕು. ನೀವೂ ಅಷ್ಟೇ, ಈಗಿಂದ್ಲೇ ಚೆನ್ನಾಗಿ ಓದಬೇಕು' ಅನ್ನೋವ್ರು. ನಾನು ಶಾಲೆಗೆ ಸೇರಿದ ದಿನ ಸಂಜೆ ಮನೆಗೆ ಬಂದ ಕೂಡಲೇ ನಿಮ್ಮನೆಗೆ ಓಡಿ ಬಂದಿದ್ದೆ, ನನ್ನ ಪುಸ್ತಕ ಸ್ಲೇಟು ಬ್ಯಾಗು ಎಲ್ಲವನ್ನೂ ನಿನಗೆ ತೋರಿಸಲು.

ನಂಗೆ ಮಾತ್ರ, ನಿನ್ನ ಅರೂ ಅಂತ ಕರಿಯೋ ಪ್ರಿವಿಲೇಜಿತ್ತು. ಆದೇನೋ? ಆಮೇಲೆ ಸ್ವಲ್ಪ ವರ್ಷಗಳಲ್ಲಿ ಎಲ್ಲ ಬದಲಾಗಿ ಹೋಯಿತು. ನೀನು ಕಾಲೇಜಿನಲ್ಲಿ ಕರಗಿಹೋದೆ. ನಾನು ಶಾಲೆಯಲ್ಲಿ ಕಳೆದು ಹೋದೆ. ಸಂಕ್ರಾಂತಿ, ದೀಪಾವಳಿ, ಯುಗಾದಿಯಲ್ಲಿ ನಾನು ಸಿಹಿಹಂಚಲು ಬಂದಾಗ ನೀನು ದೊಡ್ಡವಳ ಥರಾ ಆಗಿಬಿಟ್ಟಿದ್ದೆ, ಅಕ್ಕನ ಥರಾ.

ಆಮೇಲೆ ನಮ್ಮಿಬ್ಬರ ಪರಿಧಿಗಳು ಬೇರೆ ಬೇರೆಯಾದರೂ. ನಾನೆಲ್ಲೊ ಬೆಂಗಳೂರಿಗೆ ಓದಲಿಕ್ಕೆ ಬಂದೆ. ನೀನೆಲ್ಲೋ ಚಿತ್ರದುರ್ಗಕ್ಕೆ ಹೋದೆಯಂತೆ, ಅಮ್ಮ ಹೇಳ್ತಾ ಇದ್ದಳು. ಪ್ರತಿ ಬಾರಿ ಊರಿಗೆ ಬರುವಾಗ ಬಸ್ಸಿಳಿದು ನಿಮ್ಮನೆಯ ಮುಂದಿನಿಂದೇ ಹೋಗುತ್ತಿದ್ದೆ. ಕಣ್ಣು ಅಲ್ಲೆಲ್ಲಾದರೂ ಹಸಿರು ಸ್ಕರ್ಟಿನ, ಹಸಿರುಕಣ್ಣಿನ ಉದ್ದಹುಡುಗಿ ನಿಂತಿದಾಳಾ ಅಂತ ಹುಡುಕುತ್ತಿತ್ತು. ಅವತ್ಯಾವತ್ತೋ ನಾನು ಅಜ್ಜನಮನೆಯ ಬಸ್ಸು ಹತ್ತುವಾಗ ಇನ್ನೊಂದು ಬಸ್ಸಿನ ಕಿಟಕಿಯಲ್ಲಿ ನಿನ್ನ ನೋಡಿದೆ. ಅಲ್ಲಿ ಹಸಿರುಲಂಗದ ತುಂಟ ಹುಡುಗಿ ಇರಲಿಲ್ಲ. ಪಿಂಕ್ ಸೀರೆಯಲ್ಲಿ ಮರೆಯಾದ ಗಂಭೀರ ಗುಲಾಬಿ ಇತ್ತು.



ಅರೂ ಯಾವತ್ತಾದರೂ ಒಂದು ದಿನ ಮತ್ತೆ ಅಲ್ಲಿ ಹಿತ್ತಲಲ್ಲಿ ಮರಳಿನಲ್ಲಿ ಊರು ಕಟ್ಟೋಣ ಬರುತ್ತೀಯಾ? ಪೊರಕೆ ಕಡ್ಡಿಗಳನ್ನೆಲ್ಲ ಜೋಡಿಸಿ ಇಟ್ಟುಕೊಂಡಿದ್ದೇನೆ, ಎಲೆಕ್ಟ್ರಿಕ್ ಕಂಬ ಮಾಡುವುದಕ್ಕೆ. ನನ್ನ ನೋಟ್ಸಿನ ರಟ್ಟುಗಳಿವೆ ಬೋರ್ಡು ಬರೆಯಲಿಕ್ಕೆ. ಒಂದು ಮಧ್ಯಾಹ್ನ ಮೂರುಗಂಟೆಗೆ ಬಾ ಸಾಕು. ಕತ್ತಲಾಗುತ್ತಲೂ ಹೋಗುವಿಯಂತೆ.

ನಿನ್ನ
ಸಿಂಧು

ಸಂಜಯನಗರ
ಬೆಂಗಳೂರು.



ಮುಸ್ಸಂಜೆ ಮೆಟ್ಟಿಲಲ್ಲಿ ಕೂತು ಆಲೋಚಿಸುತ್ತೇನೆ ಯಾವಾಗಲೂ. ಆ ಹುಡುಗಿಯಲ್ಲಿ ಅದೆಷ್ಟು ಕನಸಿತ್ತು, ಕೋಮಲತೆಯೂ. ಹದಿಮೂರು ಮಕ್ಕಳ ತೋಟಾವಳಿಯ ಮಧ್ಯೆ ಬೆಳೆದದ್ದೇ ನನಗೀಗಿರುವ ಬೆಚ್ಚಗಿನ ನೆನಪುಗಳಲ್ಲಿ ಒಂದು. ಅಮ್ಮನಿಗೆ ಸಹಾಯಕ್ಕೆ ಅಕ್ಕಂದಿರಿದ್ದರು, ಮುದ್ದಿಗೆ ತಂಗಿಯರಿದ್ದರು; ಚೇಷ್ಟೆ, ತಂಟೆ, ರಿಪೇರಿಗಳಿಗೆಲ್ಲ ಅಣ್ಣ-ತಮ್ಮಂದಿರು. ಈ ಎಲ್ಲರ ನಡುವೆ ನಾನು ಹಾಯಾಗಿದ್ದೆ.

ನನ್ನದೇ ಲೋಕಸೃಷ್ಟಿಗೆ ಬೇಕಾದಷ್ಟು ಸಮಯ, ಬೇಕಾದಂತಹ ವಾತಾವರಣ. ಅಪ್ಪನ ಮನೆಯಲ್ಲಿ ಕಪಾಟುಗಳ ತುಂಬ ಕತೆ ಪುಸ್ತಕ! ದೊಡ್ಡ ಕತೆ, ಸಣ್ಣ ಕತೆ, ತಮಾಷೆ ಕತೆ, ಐತಿಹಾಸಿಕ ಕತೆ.... ಏನೆಲ್ಲದರ ಸಮುದ್ರ! ಅಪ್ಪನೂ ಬರೆಯುತ್ತಿದ್ದ. ಕತೆ ಬರೆಯುತ್ತ ಕೂತರೆ ಊಟ, ನಿದ್ರೆ, ಪರಿವೆ ಇಲ್ಲದೆ ಬರೆಯುತ್ತಿದ್ದ. ತಹಶೀಲ್ದಾರ ಅಪ್ಪ ಸಂಜೆ ಮನೆಗೆ ಬರುವಾಗ, ಆರು ದಾಟಿಬಿಡುತ್ತಿತ್ತು.

# ನಯನಾ ಕಾಶ್ಯಪ್

# ಅಲೆಗಳು



ಆಫೀಸು ಅದೆಷ್ಟೊತ್ತಿಗೆ ಮುಗಿಯುತ್ತಿತ್ತೊ, ನಾವು ಆಗ ತಲೆಕೆಡಿಸಿಕೊಳ್ಳದ ವಿವರ. ಆದರೆ ಆಫೀಸು ಕಳೆದು ಸೀದ ಮನೆಗೆ ಬರುತ್ತಿರಲಿಲ್ಲ. ದಾರಿಯಲ್ಲಿ ಸಿಗುವ ಸಮುದ್ರದಂಡೆಯಲ್ಲಿ ಅರ್ಧ, ಮುಕ್ಕಾಲು ಗಂಟೆ ಕೂತು ಅದನ್ನೇ ನೋಡುತ್ತಿದ್ದ. ಅಲೆಅಲೆಯಾಗಿ ದಡಕ್ಕೆ ಅಪ್ಪಳಿಸಿ ಶಾಂತವಾಗಿ ಹಿಂದಿರುಗುವ ಅಲೆಗಳಿಂದಲೇ ತಾನು ಬದುಕಿನ ಗತಿ ತಿಳಿದದ್ದು, ಜೀವನದ ಗೂಢ ಅರಿಯಲು ಪ್ರಯತ್ನಿಸಿದ್ದು ಅಂತ ಹೇಳುವಾಗ ಅಪ್ಪನ ಕಣ್ಣಲ್ಲಿ ಸಂತನ ಬೆಳಕಿತ್ತು. ಮನೆಯಲ್ಲಿ ಇಷ್ಟು ಮಕ್ಕಳು, ಬಂದು ಹೋಗುವವರು, ವಹಿವಾಟಿನ ಸಂಸಾರ ಕ್ಷಣಕಾಲವಾದರೂ ಬಿಟ್ಟು ಸಮುದ್ರ ಬದಿಗೆ ಹೋಗಿ ಶಾಂತಿ ಅರಸಲಾರದ ಅಮ್ಮ, ಮನೆ ಹಿಂಬದಿಯ ತೆಂಗಿನ ಮರಗಳ ನೆತ್ತಿ ನೇವರಿಸುತ್ತ ಸಂಜೆ ಅಷ್ಟು ಸಮಯ ತನ್ನದಾಗಿಸಿಕೊಳ್ಳುತ್ತಿದ್ದಳು. ಮನೆಗೆ ಬಂದವನೇ ಅಪ್ಪ ಕೈಕಾಲು ಮುಖ ತೊಳೆದು, ದೇವರ ದೀಪ ಹಚ್ಚಿ, ಕಾಫಿ ಕುಡಿದವನು ತಾನು ಸಮುದ್ರದಿಂದ ಆಯ್ದು ತಂದ ಹೊಸ ತರದ ಕಪ್ಪೆಚಿಪ್ಪು, ಸಮುದ್ರ ನಾಲಗೆಗಳ ಭಂಡಾರ ಮಕ್ಕಳ ಮುಂದೆ ಹರಡಿ ನಮ್ಮ ಕಣ್ಣ ಮಿಂಚು ಕಂಡು ಖುಷಿಪಡುತ್ತಿದ್ದ. ಮಕ್ಕಳು ಹಾಗೇ ಅವುಗಳೊಡನೆ ಆಡತೊಡಗಿದಾಗ, ಅಲ್ಲಿಂದ ಎದ್ದು ತನ್ನ ಕೋಣೆಯ ಕುರ್ಚಿಯಲ್ಲಿ ಕೂತರೆ, ಸದ್ಯಕ್ಕೆ ಏಳುವುದಿಲ್ಲ ಅಂತಲೇ. ಓದುವುದು, ಟಿಪ್ಪಣಿ ಮಾಡುವುದು, ಬರೆಯುವುದು ಹೀಗೇ ರಾತ್ರಿ ಒಂಬತ್ತು ಗಂಟೆಯವರೆಗೂ. ಆಮೇಲೆ ಊಟ. ಅಂತೂ ಅಮ್ಮನಿಗೆ ಅಪ್ಪ ಸಿಗುವುದು ನಾವು ಮಕ್ಕಳೆಲ್ಲ ಮಲಗಿದ ಮೇಲೆ. ಅಷ್ಟು ಖರ್ಚು, ವೆಚ್ಚ, ಕೆಲಸ, ಮಕ್ಕಳು, ನೆಂಟರಿಷ್ಟರ ಮಧ್ಯೆಯೂ ಅವರಿಬ್ಬರದು ಸುಗಮ ದಾಂಪತ್ಯ. ಒಂದೇ ಒಂದು ದಿನ ಅಮ್ಮ ಅಪ್ಪನನ್ನು ಮೂದಲಿಸುವುದನ್ನೊ, ಅಪ್ಪ ಕಣ್ಣು ಕೆಂಚರಿಸುವುದನ್ನೊ ನಾವು ನೋಡಿಯೇ ಇಲ್ಲ. ನಾವು ಮಕ್ಕಳೇ ಶಾಲೆಯಲ್ಲಿ ಕಲಿತು, ಕದ್ದು ಉಪಯೋಗಿಸುತ್ತಿದ್ದ ಕೆಟ್ಟ ಶಬ್ದಗಳನ್ನು ಬಿಟ್ಟರೆ ಮನೆಯಲ್ಲಿ ಹಿರಿಯರು ಯಾರೂ ಅವಾಚ್ಯ ನುಡಿಯುತ್ತಿರಲಿಲ್ಲ. ತಾನು ಓದಿದ ಒಳ್ಳೆಯ ಪುಸ್ತಕಗಳನ್ನು ಅಪ್ಪ, ಅಮ್ಮನಿಗೆ 'ಓದಿ ನೋಡು' ಅಂತ ಕೊಟ್ಟು ಆಮೇಲೆ ಅದರ ಬಗ್ಗೆ ಚರ್ಚಿಸುತ್ತಿದ್ದರು... ಇದನ್ನೆಲ್ಲ ಈಗ ಯಾಕೆ ನೆನಪಿಸಿಕೊಳ್ಳುತ್ತಿದ್ದೇನೆ? ಇದೆಲ್ಲ ಮಹಾ ದೊಡ್ಡ ವಿಷಯಗಳೆಂತಲೆ? ಸಾಮಾನ್ಯದಲ್ಲಿ ಸಾಮಾನ್ಯ ದಿನಚರಿಯಾಗಬಹುದಾದ ಇವೆಲ್ಲ ಯಾಕೆ ಮತ್ತೆ ಮತ್ತೆ ನನ್ನ ವಿವರಣೆಗೆ ಸಿಕ್ಕುತ್ತಿವೆ?



ಅಪ್ಪ ಹೋಗುವಾಗ ನಾನು ಪಿಯುಸಿ ಮುಗಿಸಿದ್ದೆನಷ್ಟೆ. ಅಂದಿನಿಂದ ನಮ್ಮ ಮನೆಯಲ್ಲಿ ಸಮುದ್ರದ ಲಯಬದ್ಧ ಭೋರ್ಗರೆತವಿಲ್ಲ, ಕಪ್ಪೆಚಿಪ್ಪುಗಳ ಭಂಡಾರಕ್ಕೆ ಹೊಸ ಸೇರ್ಪಡೆಗಳಿಲ್ಲ. ಅಪ್ಪನ ಅರ್ಧನಿಂತ



ಕತೆಗಳನ್ನು ಪೂರ್ತಿ ಮಾಡುವವರಿಲ್ಲ.... ಆಗ ಇವೆಲ್ಲಕ್ಕಿಂತ ಬೃಹತ್ತಾಗಿ ನಿಂತ ಸಮಸ್ಯೆಯೇ ಬೇರೆ. ಅಪ್ಪನ ಆತ್ಮವನ್ನೂ ಇಹಲೋಕದಿಂದ ಕಳಿಸಿದ ಆ ಹದಿನಾಲ್ಕು ದಿನಗಳ ಮೇಲೆ ಪುರೋಹಿತರೊಬ್ಬರು, ಮನೆಯ ಯಜಮಾನ ತೀರಿದ ವರ್ಷದೊಳಗೆ ಕನ್ಯಾದಾನ ಮಾಡಿದರೆ ಭಾರೀ ಪುಣ್ಯ, ಹುಡುಗಿಗೂ ಭಾಳ ಒಳ್ಳೆಯದು ಅಂದರು. ಅಪ್ಪನ ಉಳಿತಾಯ ಎಷ್ಟಿತ್ತೊ, ಸರ್ಕಾರದಿಂದ ಎಷ್ಟು ಬಂತೊ ಇತ್ಯಾದಿ ಪೂರ್ತಿ ವಿವರಣೆ ಅಮ್ಮ, ಅಣ್ಣಂದಿರಿಗಷ್ಟೆ ಗೊತ್ತು. ಮೂರು ಜನ ಅಕ್ಕಂದಿರ ಮದುವೆ ಅಪ್ಪನೇ ಮಾಡಿದ್ದರಿಂದ, ಸದ್ಯ ಕನ್ಯಾದಾನಕ್ಕೆ ಸಿಕ್ಕಿದವಳು ನಾನು. ಸಿಕ್ಕ ಸಿಕ್ಕ ಪುಸ್ತಕಗಳನ್ನೆಲ್ಲ ಓದುವುದರಲ್ಲೇ ಇದ್ದ ನನ್ನ ಬಳಿ ''ನಿನಗೆ ಮದುವೆ'' ಅಂದರು. ಅಪ್ಪ ಅಮ್ಮ ಇದ್ದ ರೀತಿ ನೋಡಿದ್ದ ನನಗೆ ಯಾವ ಗಾಬರಿಯೂ ಆಗಲಿಲ್ಲ. ''ಆಗಲಿ'' ಅಂದೆ.



ನನ್ನ ಬದುಕಿನಲ್ಲಿ ಆತ ಬಂದದ್ದು ಹೀಗೆ, ಇಷ್ಟು ಸರಳವಾಗಿ. ಅಷ್ಟು ದೊಡ್ಡ ಕುಟುಂಬ ಬಿಟ್ಟು ಧೈರ್ಯದಿಂದ ಒಬ್ಬಳೇ ಆತನೊಂದಿಗೆ ತಿರುವ ನಂತಪುರಕ್ಕೆ ಹೋಗಿ ಬಿಡಾರ ಹೂಡಿದ್ದೆ. ಹೋದ ಕೂಡಲೇ ನನಗೆ ಮತ್ತಷ್ಟು ಧೈರ್ಯ ಕೊಟ್ಟದ್ದು ಅಲ್ಲಿಯೂ ಸಮುದ್ರ, ಇರುವುದು. ದಂಡೆ ಮಾತ್ರ ಬದಲಾಗಿತ್ತು. ಅಪ್ಪನನ್ನೂ, ಬಾಲ್ಯ ವನ್ನೂ ಒಟ್ಟಿಗೇ ನೆನಪಿಸುವ ಊರು ಆಪ್ಯಾಯ ಮಾನವೆನಿಸಿತ್ತು.

ತಿರುವನಂತಪುರಕ್ಕೆ ನಾವು ಬಂದ ಮೇಲಿನ ಮೊದಲ ಬೆಳಗು ಅದು! ಸುತ್ತ ತೆಂಗಿನಮರದ ಈ ಮನೆಯ ಎದುರು ರಸ್ತೆ. ರಸ್ತೆಯ ಆಚೆಬದಿ ಸಾಲುಮನೆಗಳು. ಪಾಗಾರದೊಳಗೆ ಅಲ್ಲಲ್ಲಿ ಸೇವಂತಿಗೆ ಗುತ್ತಿ. ಬಟ್ಟೆ ಒಗೆಯುವ ಕಲ್ಲಿನ ಬಳಿ ನಿತ್ಯಪುಷ್ಪದ ಅಷ್ಟಗಲ ಗಿಡ, ಗಿಡದ ತುಂಬ ನೀಲಿ, ಬಿಳಿ ಹೂ. ಒಂದೇ ಗಿಡದಲ್ಲಿ ಎರಡು ಬಣ್ಣವಾದಂತಿತ್ತು. ಅಲ್ಲೇ ಪಕ್ಕದಲ್ಲಿ, ಬಟ್ಟೆ ಒಗೆದ ನೀರು ಹೋಗುವ ಕಡೆ ಬಾಳೆಯಗಿಡ, ಗೊನೆ ಯಾಗಿದೆ. ಬಾಳೆಕುಂಡಿಗೆಯ ತುಸುವೇ ಅರಳಿದ ಕೆಂಪು ಎಸಳಿನ ತುದಿಯಲ್ಲಿ ಇಬ್ಬನಿ ನೀರು ಮುಗುಳಿನಂತೆ ನಿಂತಿದೆ! ''ಸ್ವಲ್ಪ ಇಲ್ಲಿ ಬಂದು ನೋಡಿ, ಎಷ್ಟು ಚಂದ ಇದೆ!'' ಆಗಲೇ ಸ್ನಾನಕ್ಕೆ ಹೊರಟಿದ್ದ ಆತ, ''ಅದರಲ್ಲಿ ಚಂದ ಏನುಂಟು? ನೀನು ಬೇಗ ಬಂದು ತಿಂಡಿ ರೆಡಿಮಾಡು.'' ಅಂದಾಗ ಮುಗುಳು ಠಪ್ಪ ಕೆಳಗೆ ಬಿತ್ತು!



ಬೆಳಿಗ್ಗೆ ಹನ್ನೊಂದರೊಳಗೇ ಎಲ್ಲ ಕೆಲಸವೂ ಮುಗಿದಿತ್ತು. ಅಷ್ಟೊತ್ತಾದರೂ ಪೇಪರು ಬಂದಿರ ಲಿಲ್ಲ. ಏನಾದರೂ ಓದಬೇಕು. ಎಲ್ಲೂ ಒಂದು ಪುಸ್ತಕ ಕಾಣಲಿಲ್ಲ. ಆತ ಮಧ್ಯಾಹ್ನ ಊಟಕ್ಕೂ ಬರುವುದಿಲ್ಲ, ದಿನಾ ಆಫೀಸಿನ ಬಳಿಯ ಕ್ಯಾಂಟೀ ನಿನಲ್ಲಿ ತಿನ್ನುವುದಂತೆ. ಸಂಜೆಯವರೆಗೆ ಮಾಡುವು

ದೇನು? ಅಂಗಳಕ್ಕೆ ಬಂದು ಪಾಗಾರದ ಅಂಚಿಗೆ ಒರಗಿ ನಿಂತೆ. ಸುತ್ತಲ ಮನೆಯವರಲ್ಲಿ ಹೆಚ್ಚಿನವರು ಕೇರಳದವರೇ ಅನಿಸುವಂತಿತ್ತು. ಎದುರೇ ಸಿಕ್ಕರೂ ಭಾಷೆ ಬಾರದೆ ಬರೀ ನಗೆಯಲ್ಲಿ ಭೇಟಿ ಮುಗಿಸಬೇಕಾಗಿತ್ತು. ಆಚೀಚೆ ಹೋಗುವವರೊಂದಿಗೆ ಪೆಚ್ಚುಪೆಚ್ಚಾಗಿ ನಗುತ್ತ ನಿಲ್ಲುವುದಕ್ಕಿಂತ ಒಳಗೆ ಹೋಗುವುದು ಒಳ್ಳೆಯದು ಅಂತ ಹಿಂದಿರುಗುತ್ತಿರುವಾಗಲೇ ''ಹಲೋ, ಹೌ ಆರ್ ಯೂ?'' ಅನ್ನುತ್ತ ಮಧ್ಯವಯಸ್ಕ ಮಹಿಳೆಯೊಬ್ಬರು ಗೇಟಿನ ಬಳಿ ನಿಂತಿದ್ದರು. ನನಗೆ ಗೊತ್ತಿದಷ್ಟು ಇಂಗ್ಲಿಷಿನಲ್ಲಿ ತಕ್ಕ ಉತ್ತರ ಕೊಟ್ಟು ''ಪ್ಲೀಸ್ ಕಮ್ ಇನ್'' ಅಂದೆ. ಒಳಗೆ ಬರುತ್ತಲೇ ತಾನು ಅಲ್ಲಿ ಇಪ್ಪತ್ತು ವರ್ಷಗಳಿಂದ ಇದ್ದದ್ದು, ಆ ಊರು ತನಗೆ ಪೂರ್ತಿ ಒಗ್ಗಿಹೋಗಿದ್ದು, ದಿನವೂ ಸಂಜೆ ಸಮುದ್ರದ ಬದಿಗೆ ಹೋಗುವುದು, ಆಕಾಶವಾಣಿಯಲ್ಲಿ ಕೆಲಸ ಮಾಡುತ್ತಿರುವುದು, ಆವತ್ತು ಹುಷಾರಿಲ್ಲ ಅಂತ ರಜಾ ಹಾಕಿದ್ದು ಎಲ್ಲ ಹಜಾರದಲ್ಲಿ ಕುಳಿತುಕೊಳ್ಳುವುದರೊಳಗೇ ಹೇಳಿಮುಗಿಸಿದ್ದರು. ಬರೀ ಇಂಗ್ಲಿಷ್‌ನಲ್ಲೇ ಮಾತಾಡುತ್ತಿದ್ದ ಅವರಿಗೆ ಕನ್ನಡ ಗೊತ್ತಿರಬಹುದೆ, ಕುತೂಹಲವಾಯ್ತು. ''ನಿಮಗೆ ಕನ್ನಡ, ಮಲಯಾಳ ಯಾವುದೂ ಗೊತ್ತಿಲ್ಲವೇ?'' ''ಮಲಯಾಳ ಚೆನ್ನಾಗಿ ಗೊತ್ತು, ಕನ್ನಡ.... ಯಾಕೆ ಕೇಳುತ್ತಿದ್ದೀರಿ?'' ಅಂತ ನನಗೇ ಮರುಪ್ರಶ್ನೆ ಹಾಕಿದರು. ''ಅಲ್ಲ, ಹೀಗೇ ಕೇಳಿದೆ ಅಷ್ಟೆ. ನನ್ನದು ಕನ್ನಡ ಭಾಷೆ, ನಿಮಗೂ ಗೊತ್ತಿದ್ದರೆ ಚೆನ್ನಾಗಿ ಹರಟಬಹುದಿತ್ತು.'' ಆಕೆ ಕಣ್ಣರಳಿಸಿ ಸ್ವಲ್ಪ ಬಗ್ಗಿ, ತಗ್ಗಿದ ದನಿಯಲ್ಲಿ ''ನಾನೂ ಕನ್ನಡದವಳೆ'' ಅಂದಾಗ ತುಂಬ ಮಾತಾಡಬೇಕು ಅಂದುಕೊಂಡಿದ್ದ ನನಗೆ ಬಹಳ ಹೊತ್ತು ಏನೂ ಹೊಳೆಯಲಿಲ್ಲ! ಅವರೇ ಮುಂದುವರಿಸಿದರು. ''ನನ್ನ ಹೆಸರು ಲಕ್ಷ್ಮಿರಾವ್ ಅಂತ. ಆದರೆ ಈ ಊರಿಗೆ ಬಂದು ಸೆಟ್ಲ್ ಆದ ಮೇಲೆ ಪರವೂರಿನವಳು ಅನಿಸಬಾರದು ಅಂತ ಲಕ್ಷ್ಮಿಕುಟ್ಟಿ ಅಂತ ಸ್ವನಾಮಕರಣ ಮಾಡಿಕೊಂಡಿದ್ದೇನೆ'', ಸಣ್ಣಗೆ ನಕ್ಕರು. ''ಈ ಗುಟ್ಟು ನಿನಗೆ ಮಾತ್ರ ತಿಳಿದಿರಲಿ, ಕರೀವಾಗ ನೀನೂ ಲಕ್ಷ್ಮಿಕುಟ್ಟಿ ಅಂತಲೇ ಕರಿ''. ಅವರ ಏಕವಚನದ ವಿಶ್ವಾಸದಿಂದ ಒಮ್ಮೆಲೆ ನಾವು ಬಹಳ ವರ್ಷದ ಗೆಳತಿಯರಂತೆ ಅನಿಸಿತ್ತು. ಆಮೇಲೆ ಅವರ ಕೆಲಸ, ಅಲ್ಲಿಯ ಜನರು, ಎಲ್ಲಾ ಕಡೆ ಇದ್ದಂತೆ ಅವರ ಆಫೀಸಲ್ಲೂ ಇದ್ದ ರಾಜಕೀಯ, ತಾಯಿಮನೆ, ಒಡಹುಟ್ಟಿದವರು, ಸಮುದ್ರ, ಎಲ್ಲವೂ ಮಾತಿಗೆ ಬಂತು. ನಾನು ಅಷ್ಟರವರೆಗೆ ಬಿಗಿಹಿಡಿದ ಕುತೂಹಲ ಮೆಲ್ಲ ಸಡಿಲಬಿಟ್ಟು ''ನಿಮ್ಮ ಗಂಡ....?'' ಅನ್ನುವುದರೊಳಗೆ ''ಆಹ್, ಹೀ ವಾಸ್ ಎ ಬ್ಲಡಿ ಈಡಿಯಟ್. ಹೀ ಡಿನ್ಟ್ ಈವನ್ ನೋ ಹೌ ಟು ಬಿಹೇವ್ ವಿತ್ ಹಿಸ್ ವೈಫ್. ಸೊ ಐ ಡಿವೋರ್ಸ್ಡ್ ಹಿಮ್'', ಕನ್ನಡದಲ್ಲಿ ತನ್ನ ಆಕ್ರೋಶ ವ್ಯಕ್ತಪಡಿಸಲಾರೆನೆಂಬಂತೆ ಇಂಗ್ಲಿಷ್‌ನಲ್ಲಿ ರಪ್ಪೆಂತ ಹೇಳಿಮುಗಿಸಿದ್ದರು ಲಕ್ಷ್ಮಿಕುಟ್ಟಿ, ಮುಂದೆ ಮಾತಿಗೆ ಅವಕಾಶವಿಲ್ಲದಂತೆ. ಇನ್ನೊಂದು ಗಳಿಗೆಯಲ್ಲೆ ಮೃದುವಾಗಿ ''ನಾಳೆ ಸಂಜೆ ವಾಕ್ ಹೋಗುವಾಗ ಕರೆಯುತ್ತೇನೆ, ಬಾ. ಸಮುದ್ರಕ್ಕೆ ಹೋಗುವ, ಬರೀ ಏಳೆಂಟು ನಿಮಿಷದ ದಾರಿ.... ಈಗ ಬಹಳ ಹೊತ್ತಾಯ್ತು. ಹೀಗೇ ಮಾತಾಡ್ತಾ ಕೂತರೆ ರಾತ್ರಿವರೆಗೂ ಮಾತಾಡಬಹುದು. ಊಟ ಮಾಡು, ಹಸಿವಾಗ್ತಾ ಇರಬಹುದು ನಿನಗೆ, ಟೈಮಾಯ್ತು''. ತನಗೆ ಮಾತ್ರ ಹಸಿವಿಲ್ಲವೆಂಬಂತೆ ''ಊಟ ಮಾಡು ಲೇಟಾಯ್ತು, ಬರ್‍ಲಾ'' ಅನ್ನುತ್ತ ಗೇಟು ದಾಟಿದರು. ಮನೆ ಯಾವುದೋ ನೋಡೋಣವೆಂತ ಗೇಟಲ್ಲೇ ನಿಂತು ಅವರನ್ನು ಹಿಂಬಾಲಿಸಿದೆ. ಎದುರಿನ ಸಾಲಿನ ಮನೆಗಳಲ್ಲಿ ಕಡೇಯದು. ತನ್ನ ಗೇಟಿನೊಳಗೆ ಹೊಕ್ಕು, ನಾನು ನಿಂತದ್ದು ತಿಳಿದಿರುವಂತೆ, ಈ ಕಡೆ ತಿರುಗಿ ವೇವ್ ಮಾಡಿ ಒಳಹೋದರು.

ಗಂಟೆ ಎರಡಾಗಿತ್ತು. ಹಸಿವಾಗಿದ್ದೇನೊ ಹೌದು. ಒಬ್ಬಳೇ ಉಣ್ಣುವುದು ಹೇಗೆ? ಅಮ್ಮನ ಮನೆಯಲ್ಲಿ ಅಣ್ಣಂದಿರು, ತಮ್ಮ ತಂಗಿಯರೆಲ್ಲ ಸಾಲು ಪಂಕ್ತಿಯಲ್ಲಿ ಊಟಕ್ಕೆ ಕೂತಿದ್ದಾಗ, ನನ್ನ ಉರುಟು ಬಟ್ಟಲು ಮಾತ್ರ ಹಾಗೇ ಪಾತ್ರೆಗಳ ಆರೆಯಲ್ಲಿ ಬಿದ್ದಿರಬಹುದು. ಅಲ್ಲಿಗೇ ಹೋಗಿ ಬಿಡಬೇಕು ಅನಿಸಿತ್ತು. ಏನಾದರೂ ಓದುತ್ತ ತಿನ್ನೋಣವೆಂದರೆ ಪುಸ್ತಕದ 'ಪು' ಸಹ ಇಲ್ಲ ಆತನ ಮನೆಯಲ್ಲಿ. ಓದುವ ಅಭ್ಯಾಸವಿಲ್ಲವೇನೋ. ನಾನೇ ಇನ್ನು ಮೇಲೆ ಪುಸ್ತಕ ಕೊಳ್ಳಬೇಕು ಅಂತ ಸಮಾಧಾನ ಮಾಡಿಕೊಳ್ಳುತ್ತ, ಒಬ್ಬಳೇ ಬಟ್ಟಲಿಗೆ ಸಾರು, ಅನ್ನ ಹಾಕಿಕೊಂಡು ಬಂದು, ಟಿ.ವಿ. ನೋಡುತ್ತ ಎರಡು ತುತ್ತು ಉಣ್ಣುವುದರೊಳಗೆ ಬೇಜಾರಾಗಿತ್ತು. ಆ ಲಕ್ಷ್ಮಿಕುಟ್ಟಿಯನ್ನಾದರೂ ಊಟಕ್ಕೆ ಇರಿಸಿಕೊಳ್ಳಬಹುದಿತ್ತು. ಅವರು ಮಾತಾಡುತ್ತಾ ಕೂತರು, ನಾನು ಬಾಯಿಬಿಟ್ಟು ಕೇಳುತ್ತ ಕೂತೆ. ಛೆ, ''ಊಟಕ್ಕಿರಿ'' ಅಂತ ಹೇಳುವಷ್ಟು ತಲೆ ಓಡಲಿಲ್ಲವಲ್ಲ!

ಅಡುಗೆ ಮನೆಯಲ್ಲಿ ಪಾತ್ರೆಗಳನ್ನೆಲ್ಲ ಮುಚ್ಚಿ ಬದಿಗಿಟ್ಟು, ಹಾಲು ಕಾಯಿಸಿ, ಹಾಗೇ ದಿವಾನ್ ಮೇಲೆ ಬಂದು ಬಿದ್ದುಕೊಂಡೆ. ತಲೆ ತುಂಬ ಲಕ್ಷ್ಮಿಕುಟ್ಟಿಯೆ. ಗಂಡನನ್ನು ಬಿಟ್ಟೆ ಅಂತ ಎಷ್ಟು ಸಲೀಸಾಗಿ, ಗಟ್ಟಿಯಾಗಿ ಹೇಳಿದ್ದರು! ಅಂತಹ ಬಿಡುವಂತಹ ತೊಂದರೆ ಏನು ಬರುತ್ತದೋಪ್ಪ! ಸರಿಯಾಗಿ ಬಿಹೇವ್ ಮಾಡಲಿಲ್ಲ ತನ್ನೊಡನೆ ಅಂದರಲ್ಲ, ಹಾಗಂದರೇನಿರಬಹುದು? ಗಂಡ-ಹೆಂಡತಿ ಒಂದೇ ಜೀವದಂತೆ, ಮಧ್ಯೆ ಬಿಹೇವಿಯರ್, ಮ್ಯಾನರ್ಸ್ ಇದೆಲ್ಲಿ ರಂಪ ಹೇಗೆ ನುಸುಳುತ್ತದೆ? ಮಕ್ಕಳಿದ್ದಾರೊ ಇಲ್ಲವೊ ಕೇಳಲೇ ಇಲ್ಲ... ಇರಲಿಕ್ಕಿಲ್ಲ, ಅಂತೂ ಒಬ್ಬಳೆ ಇರುವುದಕ್ಕೆ, ಭಾಷೆಯೂ ಬಾರದ್ದಕ್ಕೆ, ಕನ್ನಡದವರೇ ಆದ ಹಿರಿಯ ಹೆಂಗಸು ಒಬ್ಬಾಕೆ ಸಿಕ್ಕಿದ್ದು ನನ್ನ ಪುಣ್ಯ. ನಾನೂ ದಿನಾ ಅವರೊಡನೆ ಸಮುದ್ರ ದಂಡೆಯಲ್ಲಿ ವಾಕ್ ಮಾಡಬೇಕು..... ಅಮ್ಮನಿಗೆ ಕಾಗದ ಬರೆಯುವಾಗ ಲಕ್ಷ್ಮಿ ಕುಟ್ಟಿಯ ವಿಷಯ ಬರೆಯಬೇಕು... ಗಂಡನನ್ನು ಬಿಟ್ಟಿದ್ದು ಉಳಿದು, ಮತ್ತೆಲ್ಲ... ಅಮ್ಮನಿಗೆ ಸಮಾಧಾನವಾಗಬಹುದು...

ಎಷ್ಟೊತ್ತಿಗೆ ನಿದ್ದೆ ಆವರಿಸಿತೊ. ಕಣ್ಣು ಬಿಡುವಾಗ ಐದು ಗಂಟೆ. ದಡಬಡ ಎದ್ದು, ಇನ್ನೇನು ಬರಬಹುದು ಆತ ಅಂತ ಕಾಫಿ ಡಿಕಾಕ್ಷನ್ ಹಾಕಿ, ಬೇಗ ಕೈಕಾಲು ಮುಖ ತೊಳೆದು ಫ್ರೆಶ್ ಆದೆ. ಗಂಟೆ ಆರಾದರೂ ಆತ ಪತ್ತೆ ಇಲ್ಲ. ಅಂಗಳದಲ್ಲಿದ್ದ ಗಿಡಗಳಿಗೆಲ್ಲ ನೀರು ಹಾಕಿಯಾಯ್ತು, ಮೆಟ್ಟಿಲಲ್ಲಿ ಕೂತದ್ದಾಯ್ತು, ಗೇಟಿನ ಬಳಿ ನಿಂತದ್ದಾಯ್ತು. ಊಹೂಂ. ಏಳೂನಲವತ್ತರ ಅಷ್ಟೊತ್ತಿಗೆ ರಸ್ತೆಯ ತಿರುವಿನಲ್ಲಿ ಆತನದೆ ತಲೆಯಂತೆ ಕಾಣುವ ತಲೆ ಈ ರಸ್ತೆಗೆ ತಿರುಗಿತ್ತು. ಬಂದ ಕೂಡಲೆ ಟಿಪಿಕಲ್ ಹೆಂಡತಿಯರಂತೆ ''ಯಾಕೆ ಲೇಟು?'' ಅಂತ ಹಾರುವುದು ಬೇಡ, ಏನು ಕೆಲಸವಿತ್ತೊ ಅಂದುಕೊಂಡು ''ಈಗ ಬಂದ್ರಾ,'' ಅಂತಷ್ಟೆ ಹೇಳಿ, ಒಳಗೆ ಹೋಗಿ ಕಾಫಿ ಮಾಡಿ ತಂದೆ. ಕೈಕಾಲು ತೊಳೆದುಕೊಂಡು ಬಂದು ಕಾಫಿ ಕುಡಿಯುತ್ತ ಕೂತವನು ನಾನೆಣಿಸಿದಂತೆ ಸುಸ್ತಾದವನಂತೇನೂ ಕಾಣುತ್ತಿರಲಿಲ್ಲ. ''ಯಾಕಿಷ್ಟು ಲೇಟಾಯ್ತು....?'' ''ಲೇಟಾ! ಬೇಗ ಇವತ್ತು, ದಿನಾ ನಾನು ಮನೆಗೆ ಬರುತ್ತಿದ್ದದ್ದು ಹತ್ತುಗಂಟೆ ನಂತರವೆ. ಆಫೀಸಿನಿಂದ ಸೀದ ಕ್ಲಬ್ಬಿಗೆ ಹೋಗದಿದ್ದರೆ ಗೆಳೆಯರು ಬಿಡುವುದಿಲ್ಲ, ನನಗೂ ಸಮಾಧಾನವಿಲ್ಲ. ಇವತ್ತು ನಿನಗೆ ಮೊದಲ ದಿನ, ವಿಷಯ ಗೊತ್ತಿಲ್ಲದೆ ಗಾಬರಿಯಾಗಬಹುದು ಅಂತ ಬಂದೆ. ನಾಳೆಯಿಂದ ಯಥಾಪ್ರಕಾರ. ಬೇಗ ಮನೆಗೆ ಬಂದು ಏನು ಮಾಡುವುದು? ನೀನು ಊಟ ಮಾಡಿಬಿಡು. ಇನ್ನುಮೇಲೆ, ಕಾಯಬೇಡ..... ಹ್ಞಾಂ ಮರೆತುಬಿಡುತ್ತಿದ್ದೆ ನೋಡು. ನಾಳೆ ನಮ್ಮ ಆಫೀಸಿನ ಕ್ಲಬ್‌ನಲ್ಲಿ, ನಮ್ಮಿಬ್ಬರಿಗೆ ನ್ಯೂಲಿ ಮ್ಯಾರೀಡ್ ಅಂತ ಪಾರ್ಟಿ. ಏಳೂವರೆಗೆ ಬಂದು ಕರೆದುಕೊಂಡು ಹೋಗುತ್ತೇನೆ. ರೆಡಿ ಇರಬೇಕು....'' ಬೆಳಗಿನಿಂದ

ಮನೆಯೊಳಗೇ ಕೂತಿದ್ದ ನನ್ನನ್ನ ಕುತೂಹಲಕ್ಕಾದರೂ 'ಏನು ಮಾಡಿದೆ?' ಅಂತ ಕೇಳದೆ, ರಾತ್ರಿ ಏಳು ಗಂಟೆ ಮೇಲೂ ತನಗೆ ಈ ಮನೆಯಲ್ಲಿ ಆಗಬಹುದಾದ ಬೇಜಾರು ವರ್ಣಿಸುತ್ತ, ಆಜ್ಞೆಯಂತೆ ಎರಡು ಮಾತಾಡಿ ಆತ ಟಿ.ವಿ. ನೋಡುತ್ತ ಕೂತ. ಎಷ್ಟು ಹೊತ್ತು ಗುಮ್ಮಗಳಂತೆ ಕುಳಿತುಕೊಳ್ಳುವುದು? ''ಪೇಪರ್ ಬರುವುದಿಲ್ಲವಾ?'' ''ಬರುತ್ತದಲ್ಲ'' ''ಮತ್ತೆ ಬರಲಿಲ್ಲ ಇವತ್ತು?'' ''ಇಲ್ಲಿಗಲ್ಲ ಆಫೀಸಿಗೆ ಬರುತ್ತದೆ. ಇಲ್ಲಿ ಪುನಃ ಯಾಕೆ, ದಂಡ. ನಿಂಗೆ ಹೇಗೂ ಟಿ.ವಿ. ಇದೆಯಲ್ಲ, ಇಷ್ಟಕ್ಕೂ ನಿಂಗೆ ಗೊತ್ತಾಗಲೇಬೇಕಾದಂತಹ ವಿಷಯ ಏನಿರುತ್ತದೆ?'' ಏನು ಮಾತಾಡಲೂ ತೋಚಲಿಲ್ಲ ನನಗೆ! ಪುನಃ ಮೌನ. ಅರ್ಧಗಂಟೆ ಟಿ.ವಿ. ನೋಡಿ, ಹೋಗಿ ಮಲಗಿಯೇಬಿಟ್ಟ ಆಸಾಮಿ! ನಾನು ಕುಳಿತೇ ಇದ್ದೆ. ಟಿ.ವಿ.ಯ ಪಾತ್ರಗಳಾದರೂ ಮಾತಾಡಿ, ಬೆಳಗಿಂದ ತುಂಬಿದ್ದ ಮೌನ ಕರಗಲಿ ಎಂಬಂತೆ ಟಿ.ವಿ. ಚಾಲೂ ಮಾಡಿಕೊಂಡೇ ಕೂತಿದ್ದೆ. ಡಿಸೆಂಬರ್ ತಿಂಗಳು. ಸೆಕೆಯ ಕೇರಳದಲ್ಲೂ ರಾತ್ರಿಯ ತಂಪುಗಾಳಿ. ಎಲ್ಲವೂ ಮಲಗಿದಂತಿದೆ. ಸಮುದ್ರವೂ ಮಂದ ಚಲಿಸುತ್ತ ತನ್ನ ತೊಟ್ಟಿಲು ತಾನೇ ತೂಗಿಕೊಳ್ಳುತ್ತಿರಬಹುದು. ಬೆಳಗಾದರೆ ಹೊಸ ಸೂರ್ಯ, ಅಲೆಗಳಿಗೆ ಹೊಸ ಹುರುಪು!...



ನನಗೆ ಮಾತ್ರ ನಿನ್ನೆಯ ಸೂರ್ಯನೇ ಪುನಃ ಎದ್ದು ಬಂದಿದ್ದ. ಮತ್ತದೇ ದಿನಚರಿ. ದಿನ ಇಡೀ ವ್ಯಾಪಿಸಿದ ದೀರ್ಘ ಮೌನದ ಕಡೆಯಲ್ಲಿ, ಐದೂವರೆಗೆ ಲಕ್ಷ್ಮಿಕುಟ್ಟಿ ಬಂದರು. ಇಡಿಯ ದಿನದ ಮಂಕು ಝಾಡಿಸಿ ವಾಕ್‌ಗೆ ಹೊರಟು ನಿಂತೆ. ಮದುವೆಯಾಗಿ ಬಂದ ನಂತರ ಹೊರಗಿಡುತ್ತಿದ್ದ ಮೊದಲ ಹೆಜ್ಜೆ! ಹತ್ತು ನಿಮಿಷದ ನಡಿಗೆ... ಸಮುದ್ರ.... ಅಪ್ಪ ವಿವರಿಸುತ್ತಿದ್ದಂತೆಯೇ ಇತ್ತು. ಅಲೆಗಳು ಬಂತು ಬಂತೆನ್ನುವುದರೊಳಗೆ ಹಿಂದೆ ಸರಿದು ಪುನಃ ಕಾಯಿಸುತ್ತಿದ್ದವು. 'ಹ್ಞಾಂ ಜಾಗ್ರತೆ, ನಿಂತಲ್ಲೆ ಗಟ್ಟಿ ನಿಲ್ಲಬೇಕು. ಹೆಜ್ಜೆ ಎತ್ತಿ ಆಚೆ ಇಟ್ಟರೆ ಆಯ ತಪ್ಪುತ್ತದೆ. ಎಷ್ಟು ಅಲೆ ಬಂದರೂ ನಿಂತ ಜಾಗದಲ್ಲೆ ಭದ್ರ ನಿಂತರೆ ಬೀಳುವ ಭಯವಿಲ್ಲ. ಬಳ್ಳಿ, ಕಸ, ಕಡ್ಡಿ ಏನೇ ಬಂದು ಕಾಲಿಗೆ ತೊಡರಿದರೂ ಜಪ್ಪಯ್ಯ ಅನ್ನಬಾರದು'' ದಿನಾ



ಸಮುದ್ರ ಬದಿಗೆ ಬರುವ ಲಕ್ಷ್ಮಿಕುಟ್ಟಿ ಲಟ್ಟ ನಿಂತು ಹೇಳುತ್ತಿದ್ದರು. ನಾನು ಅವರ ಕೈ ಗಟ್ಟಿ ಹಿಡಿದು, ಬೀಳಲೇಬಾರದು ಎಂಬಂತೆ, ಹಿಂದೆ ಸರಿಯುವ ನೀರಿನೊಡನೆ ಕಾಲಡಿಯ ಮರಳು ಜಾರುವಾಗ ಕಣ್ಣುಮುಚ್ಚಿ ಲಕ್ಷ್ಮಿಕುಟ್ಟಿಯನ್ನು ಜಿಗಿಯಾಗಿ ಹಿಡಿದುಕೊಂಡಿದ್ದೆ. ಎಂತಹ ಅನುಭವ! ಅಪ್ಪ ವಿವರಿಸುತ್ತಿದ್ದ ಸಮುದ್ರಕ್ಕಿಂತ ಇದು ಕಠೋರ ವಿದ್ದಂತೆನಿಸಿತ್ತು. ಇಲ್ಲಿ ಬರಿಯ ಕಪ್ಪೆಚಿಪ್ಪು, ಸಮುದ್ರನಾಲಗೆ, ಪುಟ್ಟ ಏಡಿಗಳೇ ಅಲ್ಲದೆ ತಿಮಿಂಗಿಲಗಳೂ ಇದ್ದಂತಿತ್ತು!

ಸೂರ್ಯನನ್ನೂ, ಹಕ್ಕಿಗಳನ್ನೂ ಕಳಿಸಿ ನಾವು ಮನೆಗೆ ಹೊರಟಾಗ ಆರೂಮುಕ್ಕಾಲು-ಏಳಾಗುತ್ತಾ ಬಂದಿತ್ತು. ದಾರಿ ಉದ್ದಕ್ಕೂ ಲಕ್ಷ್ಮಿ ಕುಟ್ಟಿಯದೇ ಮಾತು. "ಎಷ್ಟು ಓದಿದ್ದಿ?... ಇನ್ನೂ ಸಣ್ಣ ಪ್ರಾಯ. ಪರೀಕ್ಷೆ ಕಟ್ಟಿ ಡಿಗ್ರಿ ಪೂರೈಸು. ಇಲ್ಲಿ ಕೇರಳದಲ್ಲಿ ಬೇಕಾದಷ್ಟು ಯೂನಿವರ್ಸಿಟಿಗಳಿವೆ. ಈಗಿನ ಮಕ್ಕಳು ನೀವು, ಜ್ಞಾನದ ಬಲ ಇರಬೇಕು ನಿಮ್ಮಲ್ಲಿ... "ಡೋಂಟ್ ಸಿಟ್ ಐಡ್ಲ್" ನಾನು ಯೋಚನೆಯೇ ಮಾಡ ದಿದ್ದ ವಿಷಯಗಳು–ಗೊಂದಲವಾಗಿ "ಹೌದು ಮುಂದೆ ಓದಬೇಕು" ಅಂತಷ್ಟೆ ಹೇಳಿದ್ದೆ.

ರಸ್ತೆಯ ತಿರುವಿನಲ್ಲಿ "ಬರಲಾ?" ಅಂದ ಲಕ್ಷ್ಮಿಕುಟ್ಟಿಗೆ 'ಬ್ಯಾ' ಹೇಳಿ ಮನೆಯ ಬಳಿ ಬರುವಾಗ, ಆತ ಬಂದು ಬಾಗಿಲಲ್ಲಿ ನಿಂತಿದ್ದ. "ಎಷ್ಟೊತ್ತು ಕಾಯುವುದು? ನಾನು ಬಂದು ಆಗಲೇ ಐದು ನಿಮಿಷ ಆಯ್ತು. ನೀನು ಎಲ್ಲಿ ಹೋಗಿದ್ದಿ ಅಂತ ನೋಡುವುದು... ಅದು ಆಗಲೇ ನಿನಗೆ ಗಂಟುಬಿದ್ದಾಯ್ತಾ? ತನ್ನ ಗಂಡನ್ನ ಓಡಿಸಿಯಾಯ್ತು. ಇನ್ನು ವನವೆಲ್ಲ ಕೆಡಿಸುವುದು ಬಾಕಿ... ಕ್ಲಬ್‌ನಲ್ಲಿ ಪಾರ್ಟಿ ಇವತ್ತು, ರೆಡಿಯಾಗಿರು ಅಂತ ಹೇಳಿರಲಿಲ್ಲವಾ... ಬೇಗ ಹೊರಡು ಈಗ..." ಯಾವ ಪ್ರತಿಕ್ರಿಯೆಗೂ ಎಡೆಯೇ ಇರಲಿಲ್ಲ... ಹೊಯಿಗೆ ಸೇರಿದ್ದ ಕಾಲು, ಚಪ್ಪಲಿ ಎಲ್ಲ ತೊಳೆದು ಬೇಗ ಹೊರಟು ನಿಂತೆ.

ನಡೆಯುವಾಗ ದಾರಿ ಇಡೀ ಮೌನ. ಕಡೆಗೆ ನನಗೇ ಸಾಕಾಗಿ "ನಾನು ಓದು ಮುಂದು ವರಿಸುತ್ತೇನೆ. ಇಡೀ ದಿನ ಮನೆಯಲ್ಲಿ ಸುಮ್ಮನೆ ಕೂತಿರುವುದು ಕಷ್ಟವಾಗುತ್ತದೆ. ಇವತ್ತು ಲಕ್ಷ್ಮಿ ಕುಟ್ಟಿಯೂ...." "ಆ ಹೆಂಗಸಿನ ಹೆಸರೆತ್ತಬೇಡ ಅಂದೆನಲ್ಲ. ನೋಡು, ಒಂದು ವಿಷಯ ಸ್ಪಷ್ಟ ತಿಳಕೊ. ನನ್ನದು ಪ್ರೈವೇಟ್ ಕಂಪೆನಿಯಲ್ಲಿ ಕೆಲಸ. ಯಾವ ಟ್ರಾನ್ಸ್‌ಫರೂ ಇಲ್ಲ. ನಾವು ಇಲ್ಲೇ ಇರಬೇಕಾದ್ದರಿಂದ ನಮ್ಮ ಸಹವಾಸ ಸರಿ ಇಟ್ಟು ಕೊಳಬೇಕು. ಆ ಹೆಂಗಸಿಗೆ ಒಳ್ಳೆಯ ಹೆಸರಿಲ್ಲ. ನೀನು ಅವರ ಜೊತೆ ಸೇರಿದರೆ ನಮಗೇ ಕಷ್ಟ...



ಇನ್ನು ಓದು ಗೀದು ಎಲ್ಲ ಏನೂ ಬೇಡ. ಹೇಗೂ ಇನ್ನೊಂದು ಮೂರು ವರ್ಷ, ನನಗೆ ಪ್ರೊಮೋಷನ್ ಆಗುವವರೆಗೆ, ಮಗು ಬೇಡ ಅಂತ ನಿರ್ಧಾರ ಮಾಡಿದ್ದೇನೆ. ಅಷ್ಟರೊಳಗೆ

ಕಸೂತಿ ಗಿಸೂತಿ ಏನಾದರೂ ಕಲಿತುಕೊ. ಮನೆಗೆ ಉಪಯೋಗವಾದೀತು.'' ಯಾವುದೇ ಚರ್ಚೆಗೆ ಆಸ್ಪದ ಕೊಡದೆ ಸೀದ ತೀರ್ಮಾನ ಎಸೆ ಯುವುದನ್ನು ಆತನಿಂದ ಕಲಿಯಬೇಕು. ಆತ ಜಾಣನೊ ಹುಂಬನೊ ಗೊಂದಲವಾಗು ವಂತೆ ಮಾತಾಡುತ್ತಿದ್ದ. ತನ್ನ ತೀರ್ಮಾನದ ವಾಕ್ಯವೇ ಕಡೆಯದಾಗಬೇಕೆನ್ನುವಂತೆ ಮತ್ತೆ ಮಾತಾಡಲಿಲ್ಲ. ಹೆಜ್ಜೆಗೆ ಹೆಜ್ಜೆ ಕೂಡದ ದಾರಿ ಸಾಗುತ್ತಲೇ ಇತ್ತು.



ಒಂದು ಪುಟ್ಟ ಹಾಲ್. ಆಗಲೆ ಆಫೀಸಿನ ಗಂಡಸರು, ಮಹಿಳೆಯರು, ಅವರ ಮಕ್ಕಳು ನೆರೆದಿದ್ದರು. ಅಷ್ಟು ಜನರನ್ನ ಒಮ್ಮೆಲೆ ನೋಡಿ ಸಂಕೋಚವಾಯ್ತು. ಆತ ಮಾತ್ರ ಮನೆಮಂದಿ ಯನ್ನು ಮಾತಾಡಿಸುವಂತೆ, ಎಲ್ಲರನ್ನೂ ಮಾತಿ ಗೆಳೆಯುತ್ತ ಹತ್ತು ನಿಮಿಷದಲ್ಲಿ ತನ್ನ ಅಸ್ತಿತ್ವ ಸ್ಥಾಪಿಸಿ ಕೊಂಡುಬಿಟ್ಟ. ''ಶೀ ಈಸ್ ಮೈ ವೈಫ್'', ಇಲ್ಲದ ಅಭಿಮಾನದಿಂದ ಎಲ್ಲರಿಗೂ ನನ್ನನ್ನ ಪರಿ ಚಯಿಸುತ್ತ, ಕೈಹಿಡಿದು ಒಂದು ಸೋಫಾದಲ್ಲಿ ಕೂರಿಸಿ, ಭಾರೀ ಉಪಚಾರ ಮಾಡಿದ. ನಾಟಕದ ಗೊಂಬೆಯಂತೆ ನಾನೂ ನಟಿಸಿದೆ. ಏನೇನೋ ಪೇಯಗಳು, ಎಲ್ಲರ ಕೈಯಲ್ಲೂ. ನನಗೂ ಒಂದು ಗ್ಲಾಸ್ ಜ್ಯೂಸ್ ಬಂತು. ನಡುಗುತ್ತಿದ್ದ ಕೈಗೆ ಅದನ್ನೆ ಆಧಾರವಾಗಿ ಹಿಡಿದು ಗಟ್ಟಿ ಕೂತೆ. ಆತ ಎಲ್ಲರೊಂದಿಗೂ ಮಾತಾಡುತ್ತ, ನಗುತ್ತ, ಜೋಕು ಮಾಡುತ್ತಲೆ ಇದ್ದ. ಆತನೂ ಸೇರಿ ಎಲ್ಲರೂ ಅಪರಿಚಿತರಂತೆ, ನನಗೆ ಅರ್ಥವಾಗದ ಯಾವುದೋ ಭಾಷೆಯಲ್ಲಿ ಮಾತಾಡಿಕೊಳ್ಳುತ್ತ ಬಾರದ ನಗೆಯ ಕಡಲಲ್ಲಿ ತೇಲಿಹೋಗುತ್ತಿದ್ದಾರೆ ಅನಿಸಿ ಸಣ್ಣ ತಲೆನೋವು ಶುರುವಾಗಿತ್ತು. ನಾನು ಕುಳಿತಲ್ಲಿಂದ ಸ್ವಲ್ಪವೆ ದೂರದಲ್ಲಿ ಆಫೀಸಿನ ಇಬ್ಬರು ಹುಡುಗಿಯ ರೊಂದಿಗೆ ಆತನ ರಸಭರಿತ ಮಾತುಕತೆ ನಡೆದಂತಿತ್ತು. ''ಯೂ ಆರ್ ಲುಕಿಂಗ್ ಸಿಂಪ್ಲಿ ಗ್ರೇಟ್'' ಅಂದಳು ಒಬ್ಬಾಕೆ. ಆತನಲ್ಲಿ ಯಾವುದು ಗ್ರೇಟ್ ಕಂಡಿತು ಅಂತ ಆತನನ್ನೇ ದಿಟ್ಟಿಸಿ ನೋಡಿದೆ. ಅವನೂ ''ದಿ ಕ್ರೆಡಿಟ್ ಗೋಸ್ ಟು ಮೈ ವೈಫ್. ಶಿ ಸೆಲೆಕ್ಟೆಡ್ ದಿಸ್ ಸೂಟ್ ಫಾರ್ ಮಿ. ಯೂ ನೊ ವಿಮೆನ್ ಹ್ಯಾವ್ ಗ್ರೇಟ್ ಸೆನ್ಸ್ ಆಫ್ ಸೆಲೆಕ್ಷನ್. ಓನ್ಲಿ ಯೂ ಹ್ಯಾವ್ ಟು ರೆಕಗ್ನೈಸ್ ಇಟ್ ಎಂಡ್ ಗಿವ್ ದೆಮ್ ಎನ್ ಆಪರ್ಚುನಿಟಿ''. ಇದು ಯಾರನ್ನು ಮೆಚ್ಚಿಸಲು ಹೇಳಿದ್ದು ಅರ್ಥವಾಗ ಲಿಲ್ಲ. ನಾನು ಮಾಡದೇ ಇದ್ದ ಕೆಲಸವನ್ನು ಇನ್ಯಾರದ್ದೋ ಬಳಿ ಹೊಗಳಬೇಕಾದರೆ..!? ''ಓಹ್ ನೋಡಿ, ನಿಮ್ಮಂಥ ಗಂಡ ಸಿಗಬೇಕು ಎಲ್ರಿಗೂ. ಎಷ್ಟು ಬೆಲೆ ಕೊಡುತ್ತೀರಿ ನಿಮ್ಮ ಮಿಸೆಸ್‌ಗೆ. ಹ್ಯಾಟ್ಸ್ ಆಫ್ ಟು ಯೂ'', ಪಟಪಟ ಹೊರಬಂದ ಅಭಿನಂದನೆಗಳನ್ನು ಬಹಳ ವಿನೀತವಾಗಿ ಸ್ವೀಕರಿಸಿದ್ದ ಆತ. ಯಾರು ಯಾರನ್ನ ಮರುಳುಗೊಳಿಸುತ್ತಿದ್ದಾರೆ, ಅಥವಾ ನಾನು ಗ್ರಹಿಸುತ್ತಿರುವ ದೃಷ್ಟಿಯೇ ಸರಿ ಇಲ್ಲವೊ ತಿಳಿಯದೆ ಹೊಟ್ಟೆತೊಳೆಸಿದಂತಾಯ್ತು. ಒಮ್ಮೆ ಈ ದೊಂಬರಾಟ ಮುಗಿದು ಮನೆಗೆ ಹೋಗಿ ಬಿದ್ದರೆ ಸಾಕು ಅಂದುಕೊಳ್ಳುವಾಗಲೆ ಒಂದು ಪ್ಲೇಟಲ್ಲಿ ಏನೇನೊ ಹಾಕಿಕೊಂಡು ಬಂದು ನಾಟಕೀಯ ವಾಗಿ ಆತ ನನ್ನ ಕೈಗಿತ್ತ. ಎಲ್ಲ ಚಪ್ಪಾಳೆ ತಟ್ಟಿದರು. ನಾನೂ ಹುಸಿನಾಚಿಕೆ ನಟಿಸಿದ್ದೆ.

ಪಾರ್ಟಿಯ ಕಡೆಯಲ್ಲಿ, ಕ್ಲಬ್ಬಿನ ಪದಾಧಿ ಕಾರಿಗಳು ಅನಿಸಿಕೊಂಡವರೆಲ್ಲ ಒಂದು ದೊಡ್ಡ ಗಿಫ್ಟ್ ಹಿಡಿದು, ನಮ್ಮಿಬ್ಬರನ್ನ ಒಟ್ಟಿಗೆ ನಿಲ್ಲಿಸಿ ಕೊಡುವಾಗ ಒಬ್ಬಾತ ''ಯೂ ಆರ್ ವೆರಿ ಲಕಿ ಟು ಗೆಟ್ ಸಚ್ ಎ ಬ್ರೋಡ್‌ಮೈಂಡೆಡ್ ಹಸ್ಬೆಂಡ್ ಮ್ಯಾಡಂ. ವಿಶ್ ಯು ಬೋತ್ ಎ ವೆರಿ ಹ್ಯಾಪಿ ಮ್ಯಾರೀಡ್ ಲೈಫ್'' ಅಂದಾಗ ನನಗೇ ಗೊತ್ತಿಲ್ಲದಂತೆ ''ಡೂ ಯೂ ರಿಯಲಿ ಮೀನ್

ವ್ಹಾಟ್ ಯೂ ಸೇ'' ಅಂದಿದ್ದೆ! ಆತನ ಮುಖ ಕೆಂಪಾದದ್ದು ಗೊತ್ತಾಗಿಯೂ ತಿಳಿಯದಂತೆ ಎಲ್ಲರೊಂದಿಗೂ ತೆಳುವಾಗಿ ನಕ್ಕು ''ಥ್ಯಾಂಕ್ಸ್'' ಹೇಳಿ ಹೊರಬಂದಿದ್ದೆ.

ಎಲ್ಲ ಮುಗಿಯುವಾಗ ಗಂಟೆ ಹತ್ತೂವರೆ ದಾಟಿತ್ತು. ಕಾಲೆತ್ತಲೂ ಆಗುತ್ತಿರಲಿಲ್ಲ. ಆತನ ಮುಖ ನೋಡದೆ ''ಆಟೊ ಮಾಡೋಣ'' ಅಂದೆ. ಅದೇನೊ ಮಾತಿಲ್ಲದೆ ಒಪ್ಪಿದ. ಮನೆಗೆ ಬಂದವಳು ಬಟ್ಟೆ ಬದಲಾಯಿಸಿ, ಕಾಲು ತೊಳೆದು ಬರುವುದರೊಳಗೆ ಆತ ಕಣ್ಣುಬಿಟ್ಟು ಮಲಗಿಕೊಂಡಿದ್ದ. ''ಬಿನ್ನಿ ಮಹಾರಾಣಿಯವರು. ಏನು ನಿನಗೂ ಇಂಗ್ಲಿಷ್ ಗೊತ್ತು ಅಂತ ತೋರಿಸಲಿಕ್ಕೆ ಮಾತಾಡಿದ್ದಾ? ಅರ್ಥವಿಲ್ಲದೆ ಮಾತಾಡುವುದು ಯಾಕೆ ಅಂತ?...'' ಆತ ಗೊಣಗುತ್ತಲೇ ಇದ್ದ. ನನಗೆ ವಿಪರೀತ ಸುಸ್ತಾಗಿತ್ತು. ಉತ್ತರ ಕೊಡಬೇಕೆನಿಸಿದರೂ ಪ್ರಯೋಜನವಿಲ್ಲ ಅನಿಸಿ, ಆಗಿದ್ದಕ್ಕಿಂತ ಜಾಸ್ತಿಯೆ ಸುಸ್ತು ನಟಿಸಿ, ದೀಪ ಆರಿಸಿ ಮಲಗಿದೆ. ಇಡೀ ದೇಹ ಜಡವಾದಂತೆನಿಸಿ, ನನ್ನೊಳಗಿನ ಆತ್ಮ ಹುಣಸೆಮರದ ಕತ್ತಲಲ್ಲಿ ನೇತಾಡಿದಂತಾಗಿ ಮೈ ಬೆವರಿತ್ತು.



ದಿನವೂ ಅದೇ ದೀರ್ಘ, ಗತ್ತಿನ ಮೌನ. ಹೊರಡುವಾಗ ಆತ ನೆನಪಿರಲಿ ಎಂಬಂತೆ, ''ಮನೆಯಲ್ಲಿ ಇರು. ಸಿಕ್ಕಿಸಿಕ್ಕಿದವರ ಹತ್ತಿರವೆಲ್ಲ ಬೇಡದ್ದು ಮಾತಾಡುವುದು, ಸುತ್ತಾಡುವುದು ಚೆನ್ನಾಗಿರುವುದಿಲ್ಲ. ಸಾಧ್ಯವಾದರೆ ಆದಿತ್ಯವಾರ ನಾನೆ ಎಲ್ಲಾದರೂ ಕರೆದುಕೊಂಡು ಹೋಗುತ್ತೇನೆ'' ಅಂದಿದ್ದ. ಆತ ಹೋದದ್ದೆ ಬಾಗಿಲು ಜಡಿದು, ಕುರ್ಚಿಯಲ್ಲಿ ಮುದುರಿ ಕುಳಿತೆ. ಯಾಕೋ ಅಡಿಗೆ ಮಾಡಲೂ ಮನಸ್ಸಾಗಲಿಲ್ಲ. ಬೆಳಗ್ಗೆಯದೆ ತಿಂಡಿ ಉಳಿದಿತ್ತು. ಮಧ್ಯಾಹ್ನ ಅದನ್ನೆ ತಿಂದರಾಯ್ತು. ರಾತ್ರಿ ಆತ ಬರುವಾಗ ಏನಾದರೂ ಮಾಡಿಟ್ಟರಾಯ್ತು ಅಂದುಕೊಂಡೆ. ತಿರುವನಂತಪುರಕ್ಕೆ ಬಂದ ದಿನ, ಅವಸರದಲ್ಲಿ



ಹೇಗೆ ಹೇಗೊ ಕಪಾಟಿನಲ್ಲಿ ಇಟ್ಟ ಬಟ್ಟೆಗಳನ್ನೆಲ್ಲ ಸರಿಮಾಡುವ ಅನಿಸಿ ಎದ್ದುಹೋಗಿ ಎಲ್ಲ ಮಂಚದ ಮೇಲೆ ಎಳೆದುಹಾಕಿಕೊಂಡೆ. ಮದುವೆಯ ಸೀರೆ, ಬ್ಲೌಸ್‌ಗಳನ್ನು ಈಚೆ ತೆಗೆಯುವಾಗ ಮಧ್ಯೆ ಸಿಕ್ಕಿಕೊಂಡಿದ್ದ ಆಲ್ಬಂ ಕಂಡಿತು. ಆಗಲೇ ಅದರ ಅಜ್ಞಾತವಾಸ ಶುರುವಾಗಿತ್ತು. ಬಟ್ಟೆಯ ರಾಶಿಯ ಮಧ್ಯೆ ಕುಳಿತುಕೊಂಡು ಕೆಲವೆ ದಿನಗಳ ಹಿಂದೆ ನಡೆದ ಮದುವೆಯ ಚಿತ್ರಗಳನ್ನು ನೋಡುವಾಗ ಯಾಕೊ ಗಂಟಲ ನರ ಉಬ್ಬಿತ್ತು. ಹಸೆಯ ಮೇಲೆ ಕುಳಿತ ನಾನಲ್ಲದ ಆ ಹುಡುಗಿಯನ್ನೇ ನೋಡಿದೆ. ಶಾಂತ, ಗಂಭೀರ ಕುಳಿತ ಆ ಹತ್ತೊಂಬತ್ತರ ಬಾಲೆಯನ್ನೇ ನೋಡುತ್ತ ಅದು ನಾನಲ್ಲವೇ ಅಲ್ಲ ಅಂತ ಮತ್ತೆ ಅನಿಸತೊಡಗಿತು. ಸಂಸಾರ ಶುರುಮಾಡಿದ ತಿಂಗಳೊಳಗೇ ನಾನೆಷ್ಟು ಬದಲಾಗಿದ್ದೆ. ಎಷ್ಟು ಒಂಟಿಯಾಗಿದ್ದೆ! ನನ್ನೊಳಗೆ ವಿಚಿತ್ರವಾದೊಂದು ತಳಮಳ, ತಿಳಿವಳಿಕೆ

ಹೊಸೆಯತೊಡಗಿತ್ತು. ಬೆಳಗಿಂದ ರಾತ್ರಿಯ ವರೆಗೆ, ಆತ ಬಂದಮೇಲೂ, ಮನಸ್ಸಿಡೀ ಕಡೆ ದಂತೆ ಭಾಸವಾಗಿ ಆಯಾಸವಾಗುತ್ತಿತ್ತು.

ಎಂದಿನಂತೆ ಅವತ್ತೂ ಲಕ್ಷ್ಮಿಕುಟ್ಟಿ ಬಂದರು, ಸರಿಯಾಗಿ ಐದೂವರೆಗೆ. ಅವರನ್ನು ಕಂಡದ್ದೆ ಇಡೀ ದಿನದ ಆಯಾಸ, ಬೇಸರವೆಲ್ಲ ನುಗ್ಗಿ ಬಂದು ಕಣ್ಣುತುಂಬಿತು. ಆಕೆಗೆ ಗೊತ್ತಾಯಿತೇನೊ, ತಿಳಿಯದಂತೆ ''ಇನ್ನೂ ಹೊರಟಿಲ್ವಾ ನೀನು! ಸೂರ್ಯ ನಮಗೋಸ್ಕರ ಕಾಯ್ತಾನಾ ಮುಳುಗೋದಕ್ಕೆ?'' ಅಂತ ನಕ್ಕಾಗ ನಾನೂ ನಕ್ಕು ''ಇಲ್ಲ, ನೀವು ಮುಂದೆ ಹೋಗ್ತಾ ಇರಿ. ಐದು ನಿಮಿಷದಲ್ಲಿ ನಿಮ್ಮ ಹಿಂದೆ ಬಂದೇ ಬಿಟ್ಟೆ'' ಅಂದೆ. ಒಟ್ಟಿಗೆ ಹೋದರೆ ಆಚೀಚಿನ ಯಾರಾದರೂ ಆತನ ಕಿವಿ ಊದಿದರೆ ಅಂತ ಈ ಉಪಾಯ ಅನ್ನುವುದು ಮಾತ್ರ ಹೇಳಲಿಲ್ಲ. ಅರ್ಥವಾದವರಂತೆ ಒಮ್ಮೆ ನೇರ ನನ್ನ ಕಣ್ಣು ನೋಡಿ ''ಆಯ್ತು ಹುಡುಗಿ, ನಿಧಾನ ಬಾ ತೊಂದರೆ ಇಲ್ಲ'' ಅಂದಾಗ ಸಿಕ್ಕಿಬಿದ್ದೆ ಅನಿಸಿತ್ತು.

ಅವತ್ತಿಂದ ಹಾಗೇ... ಅವರು ಮುಂದೆ ಹೋಗಿರುವುದು, ಸ್ವಲ್ಪ ಸಮಯ ದಾಟಿ ನಾನು ಹೋಗುವುದು. ಬರುವಾಗಲೂ ಅಷ್ಟೆ. ಸಮುದ್ರ ದಂಡೆಯಲ್ಲಿ ಮಾತ್ರ ಇಬ್ಬರೂ ಒಟ್ಟಿಗೆ ಕೂತು ಮಾತಾಡುತ್ತಿದ್ದೆವು. ನಡೆದಷ್ಟು ದಿನ ನಡೆಯಲಿ ಅನ್ನುವ ಭಂಡ ಧೈರ್ಯ. ಆರೂವರೆಗೆಲ್ಲ ವಾಪಸಾಗಿಬಿಡುತ್ತಿದ್ದೆವು. ಗ್ರಹಚಾರ ಕೆಟ್ಟು ಆತ ಎಲ್ಲಾದರೂ ಬೇಗ ಬಂದು, ರಂಪ ಮಾಡಿ, ಮನಸ್ಸು ರಾಡಿಯಾಗುವುದು ಬೇಡ ಅಂತ.



ಎರಡು ತಿಂಗಳೇ ಕಳೆದಿರಬಹುದು. ಆ ದಿನ ಆದಿತ್ಯವಾರ. ಮಧ್ಯಾಹ್ನ ನಾಲ್ಕುಗಂಟೆಯ ಮೇಲೆ ಮನೆಯಲ್ಲೆ ಇರುತ್ತಾನೆ ಆತ. ಬೆಳಿಗ್ಗೆಯಿಂದಲೆ ಹಬೆಯೊಳಗೆ ಹಾಕಿದಂತೆನಿಸಿ ಉಸಿರು ಸಿಕ್ಕಿದಂತಾಗಿತ್ತು. ಸಂಜೆಗೆ ಬೇರೆ ಅದ್ಯಾರೋ ಆತನ ಫ್ರೆಂಡ್ ಅಂತೆ, ಹೆಂಡತಿ ಊರಿಗೆ ಹೋಗಿದ್ದರಿಂದ ಹೊತ್ತು ಕಳೆಯುವುದಿಲ್ಲವಂತೆ, ರಾತ್ರಿ ನಮ್ಮಲ್ಲೆ ಊಟ ಅಂತ ಬೆಳಿಗ್ಗೆಯೇ ನೋಟೀಸು ಕೊಟ್ಟಿದ್ದ. ಸಂಜೆಗೂ ಏನಾದರೂ ಮಾಡಬೇಕಾಯ್ತು.

ಮೂರೂವರೆಗೆ ಗೆಳೆಯನನ್ನು ಕರೆದುಕೊಂಡು ಬಂದು, ಬಾಗಿಲಲ್ಲೆ ನನ್ನನ್ನು ನೋಡಿ ಬಹಳ ಗೆಲುವಾದ. ಹೆಂಡತಿ ಮನೆಯಲ್ಲೆ ಇದ್ದಾಳೆ ಅಂತ ತೃಪ್ತಿಯಾಯಿತೇನೊ. ಒಳ್ಳೆಯ ಅತಿಥೇಯಳಂತೆ ನಾನು ಒಳಗಿನ ಗುಟ್ಟೆಲ್ಲ ಬಚ್ಚಿಟ್ಟುಕೊಂಡು 'ಬನ್ನಿ' ಅಂದೆ, ಆತನ ಗೆಳೆಯನಿಗೆ. ಆ ಮನುಷ್ಯ ಒಳಗೆ ಬರುವುದು ಬಿಟ್ಟು, ಸುತ್ತ ಇದ್ದ ಹೂವಿನ ಗಿಡಗಳನ್ನೆಲ್ಲ ಬಹಳ ಮೆಚ್ಚುಗೆಯಿಂದ ನೋಡುತ್ತ, ''ಪರವಾಗಿಲ್ಲ ಮಾರಾಯಾ, ನಿನಗೆ ಗಿಡಗಳಲ್ಲಿ ಆಸಕ್ತಿ ಇದೆಯಲ್ಲ'' ಅಂದಾಗ ಆತ ''ಅದೆಲ್ಲ ಅವಳ ಕೆಲಸ. ನನಗೆ ಅದರಲ್ಲಿ ಇಂಟರೆಸ್ಟೂ ಇಲ್ಲ ಸಮಯವೂ ಇಲ್ಲ'' ಅನ್ನುವಾಗ ದನಿಯಲ್ಲಿ ತಾತ್ಸಾರ ಎದ್ದು ಕಾಣುತ್ತಿತ್ತು. ಅಷ್ಟು ಹೇಳಿ ಮುಗಿಸುವುದರೊಳಗೆ ಗೆಳೆಯ ಸೀದ ನನ್ನೊಂದಿಗೆ ಮಾತಿಗಿಳಿದಾಗಿತ್ತು. ''ನೋಡಿ ತುಂಬ ಖುಷಿಯಾಯ್ತು. ಈಗೆಲ್ಲ ತಾವೇ ಮನೆ ಸುತ್ತ ಗಿಡ ಬೆಳೆಸಿ, ಸೊಂಟ ಬಗ್ಗಿಸಿ ಸಾಕಿ ನೋಡಿಕೊಳ್ಳುವವರು ಅಪರೂಪ. ಎಲ್ಲದಕ್ಕೂ ಕೆಲಸದವರು ಬೇಕು.... ಇದು ಯಾವ ಗಿಡ? ಹೂ ತುಂಬ ಚೆನ್ನಾಗಿದೆ...'' ಅಂತ ಉತ್ಸಾಹ ತೋರಿದ್ದು ನನ್ನಲ್ಲೂ ಹುರುಪು ಹುಟ್ಟಿ, ಗೆಳೆತನದ ಭಾಸವಾಗಿತ್ತು. ನಾನೇ ಮನೆ ಸುತ್ತ ಕರೆದುಕೊಂಡು ಹೋಗಿ, ನಾವು ಬರುವಾಗಲೇ ಇದ್ದ ಗಿಡಗಳು, ಆಮೇಲೆ ನಾನು ಕೆಲವು ಹೊಸತು ಹಾಕಿದ್ದು, ಮಣ್ಣಿನ ಫಲವತ್ತತೆ, ತೆಂಗಿನಮರಗಳ ಪ್ರಾಯದ ಅಂದಾಜು ಎಲ್ಲ ಹೇಳುತ್ತ ಹೊತ್ತು ಹೋದದ್ದೆ ತಿಳಿಯಲಿಲ್ಲ. ''ಆಯ್ತೀಗ, ಬರೀ

ಬಡಿವಾರವೊ ಅಥವಾ ಅವನಿಗೆ ತಿನ್ನುವುದಕ್ಕೇನಾದರೂ ಕೊಡಲಿಕ್ಕುಂಟೊ'' ಅಂತ ಆತ ಒಮ್ಮೆಲೆ ಕುಕ್ಕುಸ್ವರದಲ್ಲಿ ಹೇಳಿದಾಗ ನನಗೆ ಸತ್ತಂತಾಗಿತ್ತು. ''ಒಳಗೆ ಬನ್ನಿ'' ಅನ್ನುತ್ತ ಸೀದ ಒಳಹೋದೆ. ತಿಂಡಿ ತಿಂದವನೇ ಅದೇನು ಕಂಡಿತೊ, ''ರಾತ್ರಿಗೆ ನಾವಿಬ್ಬರೂ ಹೋಟೆಲಿಗೆ ಹೋಗುತ್ತೇವೆ. ಏನೂ ಮಾಡುವುದು ಬೇಡ ನೀನು, ಕಾಯುವುದೂ ಬೇಡ, ಎಷ್ಟೊತ್ತಾಗುತ್ತದೊ ಗೊತ್ತಿಲ್ಲ.... ಹೋಗೋಣ'' ಅನ್ನುತ್ತ ಗೆಳೆಯನನ್ನು ಹೊರಡಿಸಿಕೊಂಡು ಹೊರಟೇ ಹೋದ! ಆತನ ವ್ಯವಹಾರದಿಂದ ನನಗೆ ಹೇಸಿಗೆ ಮೆಟ್ಟಿದಂತಾಗಿತ್ತು. ಅವಮಾನವೊ, ಸಿಟ್ಟೊ, ಪ್ರತೀಕಾರವೊ, ಅಸಹಾಯಕತೆಯೊ ಏನಂತಲೆ ತಿಳಿಯದೆ ಗರ್ಭದೊಳಗೇ ನೋವಾದಂತಾಯ್ತು. ''ಎಲ್ಲಾದರೂ ಹಾಳಾಗಲಿ, ದಿನಾ ಇವನೇನು ಇರುತ್ತಾನಾ, ಇವತ್ತು ಇರಲಿಕ್ಕೆ'' ಅಂದುಕೊಂಡು ಸುಮ್ಮನೆ ಒಗೆಯುವ ಕಲ್ಲಮೇಲೆ ಬಹಳ ಹೊತ್ತು ಕೂತಿದ್ದು, ಮನಸ್ಸು ಹಿಡಿತಕ್ಕೆ ಬರುವ ಸೂಚನೆ ಕಾಣದೆ ಬಳಲಿ, ಒಳಗೆ ಬಂದೆ.

.... ರಾತ್ರಿ ಹನ್ನೊಂದು ಗಂಟೆಗೆ ಬಂದ ಆತ. ಬಾಗಿಲು ತೆಗೆದವಳು ಸೀದ ಹೋಗಿ ಮಲಗಿಕೊಂಡೆ. ಅವನ ಮುಖಾನೂ ನೋಡಲಿಲ್ಲ. ಬಟ್ಟೆ ಬದಲಾಯಿಸಿ, ದೀಪ ಆರಿಸಿ ಆತನೂ ಬಂದು ಮಲಗಿದ. ನನ್ನ ಉಸಿರು ನನಗೇ ಕೇಳುವಷ್ಟು ನಿಶ್ಶಬ್ದ. ಪಕ್ಕದಲ್ಲಿ ಬಿದ್ದಿದ್ದ ಮರದ ದಿಮ್ಮಿ ಒಮ್ಮೆಲೆ ಮಾತಾಡಲು ಶುರುಮಾಡಿದಂತೆ ''ಏನು, ನಿದ್ದೆ ಬಂದಾಯ್ತಾ?.... ಅವನ ಹತ್ತಿರ ಅಷ್ಟೆಲ್ಲ ಮಾತು ಯಾಕೆ ಬೇಕಿತ್ತು ನಿಂಗೆ? ಅಷ್ಟು ದೊಡ್ಡ ಕುಟುಂಬದಲ್ಲಿ ಬೆಳೆದೂ ಇತಿಮಿತಿ ಗೊತ್ತಿಲ್ಲ. ಕಂಡವರ ಹತ್ತಿರವೆಲ್ಲ ಹಲ್ಕಿಸಿಯುವುದೆ. ಇದೆಲ್ಲ ಯಾರು, ಆ ಗಂಡ ಬಿಟ್ಟವಳು ಹೇಳಿಕೊಟ್ಟದ್ದಾ?.....'' ಹೇಳುತ್ತಲೇ ಹಲ್ಲು ಕಡಿಯುತ್ತ ಛಟ್ಟ ಕೆನ್ನೆಗೆ ಕೊಟ್ಟ! ಅನಿರೀಕ್ಷಿತವಾದ ಈ ಹೊಡೆತಕ್ಕೆ, ಸಣ್ಣ ಮಕ್ಕಳು ಜಗಳದಲ್ಲಿ ತಿರುಗಿಸಿ ಹೊಡೆಯುವಂತೆ ಧಿಗ್ಗನೆದ್ದು, ಆತನ ಕೈಕಾಲು ಮುಖ ನೋಡದೆ ರಪ ರಪ ರಪ ಬಾರಿಸಿದೆ. ನಾನು ಹೀಗೆ ಮಾಡುತ್ತೇನೆಂತ ಅವನೂ ಎಣಿಸಿರಲಿಲ್ಲ. ಹುಚ್ಚು ಹಿಡಿದವರನ್ನ ನೋಡುವಂತೆ ಪೆದ್ದು ಪೆದ್ದಾಗಿ ನನ್ನನ್ನೇ ನೋಡಿದ. ಅವನು ನೋಡುತ್ತಿದ್ದಂತೆಯೇ ನಾನು ದಿಂಬು ತೆಗೆದುಕೊಂಡು ಹೋಗಿ, ಹೊರಗೆ ಹಾಲ್‌ನಲ್ಲಿ ದಿವಾನ್ ಮೇಲೆ ಧೊಪ್ಪನೆ ಬಿದ್ದುಕೊಂಡೆ. ನನ್ನೊಳಗಿನ ಶಕ್ತಿಯೆಲ್ಲ ಒಂದುಮಾಡಿ ಅವಮಾನ, ಸಿಟ್ಟು ಸಹಿಸಲು ಪ್ರಯತ್ನಿಸಿದೆ. ಅಳಲೇಬಾರದೆಂಬ ನಿಶ್ಚಯದಲ್ಲಿ ಕಣ್ಣುರೆಪ್ಪೆ ಬಿಗಿಯಾಗಿ ಮುಚ್ಚಿಕೊಂಡೆ. ಒಳಗಿನ ಉಬ್ಬಸವನ್ನು ಮೂಗು, ಬಾಯಿಯಲ್ಲಿ ಉಸಿರಾಡುತ್ತ ಹೊರಹಾಕಲು ಪ್ರಯತ್ನಿಸಿದೆ.

ರಾತ್ರಿಯೆಲ್ಲ ನಿದ್ದೆ ಬರಲೇ ಇಲ್ಲ. ಛೆ, ಯಾಕೆ ಹೊಡೆದೆ ನಾನು? ಹೊಡೆದಾಟದಲ್ಲೂ ಸಮಾನತೆ ಇರಬೇಕು. ಅವನು ಜಗಳಕ್ಕೂ ಲಾಯಕ್ಕಿಲ್ಲ ಅಂತ ಯಾಕೆ ಆ ಕ್ಷಣ ಮರೆತುಹೋಯ್ತು? ಭಂಡನೆದುರು ನಾನೂ ಭಂಡಳಾದೆನಲ್ಲ... ನನಗೇ ತಿಳಿಯದೆ! ಒಟ್ಟಿಗೆ ಇರತೊಡಗಿದ ಕೆಲ ತಿಂಗಳುಗಳಲ್ಲೆ ಆತನ ಸ್ವಭಾವ ನನಗೂ ಹಬ್ಬುತ್ತಿದೆ. ನನ್ನ ಸಂಸ್ಕಾರವೆಲ್ಲ ಆತನ ಭಂಡತನ, ಸ್ವಾರ್ಥದೆದುರು ಚೂರು ಚೂರೇ ನಷ್ಟವಾಗುತ್ತ ಹೋಗುವ ನನ್ನ ಭವಿಷ್ಯ ನೆನೆದು ಚಿಂತಿತಳಾದೆ. ಲಕ್ಷ್ಮಿಕುಟ್ಟಿ ಅವತ್ತು ಸಮುದ್ರದ ನೀರಿನಲ್ಲಿ ನಿಂತು ಹೇಳಿದ್ದೆಲ್ಲ ನೆನಪಾಯಿತು.



ಬೆಳಿಗ್ಗೆ ಏಳುವಾಗ ವಿಚಿತ್ರವಾದ ಸ್ಥೈರ್ಯವನ್ನು ಅನುಭವಿಸತೊಡಗಿದೆ. ಆತನೆದುರು ನಿರಾತಂಕ ತಲೆ ಎತ್ತಿ ನಡೆಯತೊಡಗಿದ್ದೆ. ಅವತ್ತು ಸಂಜೆ ಲಕ್ಷ್ಮಿಕುಟ್ಟಿಯ ಜೊತೆಗೇ ಸಮುದ್ರಕ್ಕೆ ಹೋದೆ. ಆಕಾಶದ ಕೆಂಪೆಲ್ಲ ಸಮುದ್ರದ ಮೇಲೆ

ಬಿಂಬಿತವಾಗಿ, ಯಾವತ್ತಿಗಿಂತ ಸುಂದರವಾಗಿ, ರುದ್ರವಾಗಿ ಕಾಣುತ್ತಿತ್ತು. ಅಲೆಗಳು ಓಡಿಬಂದು ಅಪ್ಪಳಿಸಿ ಹಿಂದಿರುಗಿದಾಗೆಲ್ಲ ಅಪ್ಪ ಮಾತಾಡಿ ದಂತಾಗುತ್ತಿತ್ತು. ಇಬ್ಬರೂ ಏನನ್ನೋ ಆಲಿಸು ವಂತೆ ಮೌನ ಕುಳಿತು, ಎದ್ದುಬಂದೆವು. ಒಟ್ಟಿಗೇ. ನಿಧಾನ ಹೆಜ್ಜೆ ಹಾಕುತ್ತ ಲಕ್ಷ್ಮಿಕುಟ್ಟಿ "ಇವತ್ತು ನಮ್ಮ ಮದುವೆಯಾದ ದಿನ. ಅದೆಲ್ಲಿದ್ದಾನೋ ಅವನು. ಆ ಮನುಷ್ಯನ ಕೈಹಿಡಿದು ಅವನೊಂದಿಗೆ ಕಾಸರ ಗೋಡಿಗೆ ಹೋಗಿ ನೆಲೆಸಿದ್ದು ಇನ್ನೂ ಹಸಿ ಯಾಗಿದೆ, ನೆನಪಲ್ಲಿ. ಹತ್ತು ವರ್ಷ ಅವ ನೊಂದಿಗೆ ಏಗಲು ಹೆಣಗಾಡಿದೆ ನೋಡು. ಹೋರಾಟ ಮಾತ್ರ, ಫಲ ಸಿಗಲಿಲ್ಲ.... ಅವನನ್ನು ಬಿಟ್ಟ ಮೇಲೆಯೆ ಇಲ್ಲಿ ಬಂದು, ಕೆಲಸ ಪಡೆದು, ಇರಲು ಶುರುಮಾಡಿದ್ದು..... ಇನ್ನೊಂದು ಸ್ವಲ್ಪ ವರ್ಷ, ಆಮೇಲೆ ಕೆಲಸವೂ ಇಲ್ಲ.... ಯಾಕೊ ಒಮ್ಮೊಮ್ಮೆ ಇಡೀ ಬದುಕೇ ಸುಳ್ಳು ಅನಿಸುತ್ತದೆ ನೋಡು..." ತುಂಬ ಅಂತರ್ಮುಖಿಯಾಗಿ ಮಾತಾಡುತ್ತಿದ್ದರು. ನಾನಾದರೂ ಏನು ಹೇಳಲಿ? ಆಕೆ ಹತ್ತು ವರ್ಷವಾದರೂ ಆತ ನೊಂದಿಗೆ ಹೆಣಗುವ ಪ್ರಯತ್ನ ಮಾಡಿದ್ದರು. ನನಗೆ ಈಗಲೆ ಅಂತಹ ಪ್ರಯತ್ನ ಹುಸಿ ಅನಿಸುತ್ತದೆ ಅಂತಲೆ? ಆಕೆಗೆ ಕೆಲಸ ಹುಡುಕಲು ವಿದ್ಯಾರ್ಹತೆಯಾದರೂ ಇತ್ತು, ನನಗೆ? ಹಾಗಂತ ಆತನೊಂದಿಗೆ ಪ್ರಯೋಗ ಮಾಡುತ್ತ ಬದುಕಿನ ಅಮೂಲ್ಯ ವರ್ಷಗಳನ್ನು ಕಳೆಯುವು ದರಲ್ಲಿ ಯಾವ ಜಾಣ್ಮೆಯೂ ನನಗೆ ಕಾಣುತ್ತಿಲ್ಲ. ಕತ್ತಲಲ್ಲೂ ಹುಣ್ಣಿಮೆಯ ಚಂದ್ರ ದಾರಿ ತೋರುತ್ತಿದ್ದಾನೆ.



ರಸ್ತೆಯಂಚಿನಲ್ಲಿ ತಿರುಗುವಾಗ, "ನಾನು ನಿಮ್ಮ ಮನೆ ನೋಡಿಯೆ ಇಲ್ಲ. ಇವತ್ತು ಯಾಕೊ ಮನೆಗೆ ಹೋಗಲು ಬೇಜಾರು. ನಿಮ್ಮ ಜೊತೆ ಬರುತ್ತೇನೆ" ಅಂದೆ. ಬಹಳ ಸಂಭ್ರಮದಿಂದ ಕರೆದುಕೊಂಡು ಹೋದರು, ಲಕ್ಷ್ಮಿಕುಟ್ಟಿ. ಮೊದಲು ವೆರಾಂಡ. "ಇಲ್ಲಿ ಬೇಡ, ನೀನು ಒಳಗೆ ಬಾ" ಅನ್ನುತ್ತ ಹಾಲ್‌ಗೆ ಕರೆದುಕೊಂಡು ಹೋಗಿ ಕೂಡಿಸಿದರು. ಎಡಬದಿಯ ಗೋಡೆ ಯುದ್ದಕ್ಕೂ ಮರದ ಕಪಾಟು ತುಂಬ ಪುಸ್ತಕ! ಇಷ್ಟು ದಿನ ಬಾರದೆ ಇದ್ದದ್ದಕ್ಕೆ ತುಂಬ ಪಶ್ಚಾತ್ತಾಪವಾಯ್ತು. ಕುಡಿಯಲು ಏನಾದರೂ ತರುತ್ತೇನೆ ಅಂತ ಒಳಹೋದ ಲಕ್ಷ್ಮಿಕುಟ್ಟಿಯ ಹಿಂದೆಯೇ ಹೋಗಿ "ನೋಡಿ, ಅದೆಲ್ಲ ಏನೂ ಬೇಡ. ನಿಮ್ಮಲ್ಲಿರುವ ಪುಸ್ತಕಗಳನ್ನು ಓದಲು ಕೊಡುತ್ತೀರಾ ನನಗೆ? ಖಂಡಿತ ವಾಪಾಸು ಕೊಡುತ್ತೇನೆ" ಅಂದಾಗ "ಛೆ, ನಿಂಗೆ ಇಲ್ಲ ಅನ್ನುತ್ತೇನಾ ನಾನು? ಧಾರಾಳ ತೆಗೆದುಕೊಂಡು ಹೋಗು" ಅಂತ ತಾನೇ, "ಇದೆಲ್ಲ ಚೆನ್ನಾಗಿದೆ. ಓದಿ ನೋಡು" ಅಂತ ಹತ್ತು ಪುಸ್ತಕ ಆರಿಸಿಕೊಟ್ಟರು. ಎದೆಗೆ ಅವುಚಿಕೊಂಡು, ಆ ಪುಸ್ತಕಗಳ ಆಸರೆಯಲ್ಲೆ ಮನೆಗೆ ನಡೆದೆ. ಒಮ್ಮೆಲೆ ಒಂಟಿತನವೆಲ್ಲ ಮಾಯವಾದಂತೆ ಅನಿಸಿ ಹಗುರವಾಯ್ತು.

ರಾತ್ರಿ ಬಂದವ ಟೇಬಲ್ ಮೇಲಿದ್ದ ಪುಸ್ತಕಗಳನ್ನು ಕಂಡು, ಹುಬ್ಬು ಗಂಟುಮಾಡಿ, "ಇದೆಲ್ಲ ಯಾರದು?" ಅನ್ನುತ್ತ ತೆರೆದಾಗ ಲಕ್ಷ್ಮಿಕುಟ್ಟಿಯ ಸಹಿ ನೋಡಿ, "ಆಕೆಯನ್ನು ಇಲ್ಲೆ

ತಂದುಕೊ, ಜೋಡಿ ಸರಿ ಉಂಟು. ನಿನಗೆ ಕನ್ನಡ ಭಾಷೆ ಅರ್ಥವಾಗುವುದಿಲ್ಲವಾ? ಕಿವಿಗೇ ಬೀಳುವುದಿಲ್ಲವಲ್ಲ....'' ಅಸಹಾಯಕ ಪ್ರಾಣಿಯಂತೆ ಏನೇನೋ ವಟಗುಟ್ಟುತ್ತಲೇ ಇದ್ದ. ಅವನು ಮಾತಾಡಿದಂತೆಲ್ಲ ನನ್ನಲ್ಲಿ ಹೆಚ್ಚು ಹೆಚ್ಚು ಬಲ ಕೂಡಿದಂತಾಗಿ ಆತನನ್ನ ಉಪೇಕ್ಷಿಸುವ ಧೈರ್ಯವೂ ಬಂದಂತೆನಿಸಿತು. ನನ್ನ ತಲೆಯಲ್ಲಿ ಬೇರೆಯೇ ತಿರುಗುತ್ತಿತ್ತು. ನಾಳೆ ಬೆಳಗ್ಗೆಯೇ ಲಕ್ಷ್ಮಿಕುಟ್ಟಿಯನ್ನು ಕಂಡು ಡಿಗ್ರಿಗೆ ಅಪ್ಲಿಕೇಷನ್ ಫಾರ್ಮ್ ತಂದುಕೊಡಿ ಅನ್ನಬೇಕು. ಹೇಗೂ ಮಾರ್ಚ್ ಹತ್ತಿರ ಬಂದಾಯ್ತು. ಈಗ ಹಾಕಿದರೆ ಸರಿಯಾಗುತ್ತದೆ... ಆತ ಅದೇನು ಮಾಡುತ್ತಾನೊ ನೋಡೋಣ.

ನಾಳೆಯೂ ಸಮುದ್ರ ಬದಿಗೆ ಹೋಗಬೇಕು. ಈ ಸಮುದ್ರದ ಬೇರೆಯದೇ ಬಣ್ಣದ ಕಪ್ಪೆಚಿಪ್ಪು, ಶಂಖ, ಸಮುದ್ರ ನಾಲಗೆ ಎಲ್ಲ ಹೆಕ್ಕಿ ತರಬೇಕು. ಅಪ್ಪ ತಂದುಕೊಟ್ಟದ್ದು ಈಗ ನನ್ನ ಪಾಲಿಗಿಲ್ಲ. ನಾನು ಬೇರೆಯೇ ಒಟ್ಟುಮಾಡಿ ತಂದು ಜೋಪಾನ ಇಟ್ಟುಕೊಳ್ಳಬೇಕು.

ಬೆಳಗ್ಗೆ ಹೊಸ ಸೂರ್ಯ ಬರುತ್ತಾನೆ, ಹೊಸ ಅಲೆಗಳೂ. ಕನಸು ತೂಗಿದೆ ಎಚ್ಚರದಲ್ಲೆ.



ಸೂಕ್ಷ್ಮಗಳು, ವಿಚಾರಗಳು ತಪ್ಪುವಲ್ಲದ ರೂಪದಲ್ಲಿ ಪಾತ್ರಗಳ ಮೂಲಕವೇ ಹಾಗೆಯೇ ಕಲಾತ್ಮಕವಾಗಿ ವ್ಯಕ್ತವಾಗುವುದು ಕಥೆ ಅನಿಸುತ್ತದೆ. ಕಥೆ ಎನ್ನುವುದು ನನಗೆ ಒಂದು ಬಗೆಯ ಬಿಡುಗಡೆ.



ನಯನಾ ಕಶ್ಯಪ್



# ಮುದ್ದು ತಪ್ಪು

**ನೀವು ಮಾಡಿದ ತಪ್ಪಿನಿಂದಾಗಿ ಅನಿರೀಕ್ಷಿತವಾಗಿ ನಿಮಗೋ, ಇತರರಿಗೋ ಒಳ್ಳೆಯದಾಗಿದೆಯೇ? 'ಬ್ಲೆಸಿಂಗ್ ಇನ್ ಡಿಸ್‌ಗೈಸ್'ಥರದ ಪ್ರಮಾದ ಮಾಡಿ ಆ ಕುರಿತು ಹೆಮ್ಮೆಪಟ್ಟುಕೊಳ್ಳುವಂತಾಗಿತ್ತೆ? ಅಂತಹ ಕುತೂಹಲಕಾರಿ ತಪ್ಪಿಗಾಗಿ ಈ ಅಂಕಣ! ಸಂಕ್ಷಿಪ್ತವಾಗಿ ಬರೆದು ಕಳುಹಿಸಿ.**

ನಾನು ಆಗ ಪ್ರಾಥಮಿಕ ಶಾಲೆಯಲ್ಲಿ ಓದುತ್ತಿದ್ದೆ. ಸಂಜೆ ಶಾಲೆಯಿಂದ ಬಂದ ಕೂಡಲೇ ಹಾಲು ತೆಗೆದುಕೊಂಡು ಹೋಗಿ, ಶೀನಪ್ಪನವರ ಮನೆಗೆ ಕೊಟ್ಟು ಬರುವುದು ನಿತ್ಯದ ರೂಢಿ. ಆ ದಿನ ಹಾಲು ಕೊಟ್ಟು, ಖಾಲಿ ಪಾತ್ರೆಯನ್ನು ತೆಗೆದುಕೊಂಡು ಹಿಂತಿರುಗುತ್ತಿದ್ದಾಗ, ಶೀನಪ್ಪನವರ ಮಗಳು ಸಂಗೀತಕ್ಕ ನನ್ನ ಕೈಗೆ ಒಂದು ಪತ್ರ ಕೊಟ್ಟು, ''ಇದನ್ನು ನಿನ್ನ ಮಾವನಿಗೆ ಕೊಡು'' ಅಂದಳು. (ಮಾವ ಅಂದರೆ ನನ್ನ ತಾಯಿಯ ತಮ್ಮ).

ಮರುದಿನ ಮಾವನೂ ಒಂದು ಪತ್ರಕೊಟ್ಟು ''ಇದನ್ನು ಸಂಗೀತಕ್ಕನಿಗೆ ಕೊಡು, ಬೇರೆ ಯಾರಿಗೂ ತೋರಿಸಬೇಡ'' ಎಂದ. ನನಗೆ ಆ ಪತ್ರದಲ್ಲಿ ಏನಿದೆ ಅಂತ ನೋಡಬೇಕೆನಿಸಿತು. ಅವರ ಮನೆಯ ಹಿಂದೆ ನಿಂತು ಯಾರೂ ಇಲ್ಲದಿರುವುದನ್ನು ನೋಡಿ ಪತ್ರ ಬಿಚ್ಚಿದೆ. ಅದರಲ್ಲಿ ''ನೀನೋ ಸ್ಥಿತಿವಂತರ ಒಬ್ಬಳೇ ಮಗಳು. ನಾನಾದರೋ ಊರಿಗೇ ಬಡವ. ನಮ್ಮಿಬ್ಬರ ಮದುವೆ ಅಸಾಧ್ಯ. ವಾಸ್ತವವನ್ನು ಅರ್ಥಮಾಡಿಕೊಂಡು, ನಾಳೆ ನಿನ್ನನ್ನು ನೋಡಲು ಬರುತ್ತಿರುವ ಹುಡುಗನನ್ನು ಸಂತೋಷದಿಂದ ಒಪ್ಪಿ, ಮದುವೆಯಾಗಿ, ಸುಖವಾಗಿರು, ಇದೇ ನನ್ನ ಆಸೆ'' ಎಂದಿತ್ತು. ಪತ್ರವನ್ನು ಓದಿ ಮುಗಿಸುತ್ತಿದ್ದಂತೆಯೇ ನನ್ನ ಕೈಯಿಂದ ಪತ್ರವನ್ನು ಯಾರೋ ಕಿತ್ತುಕೊಂಡರು. ನೋಡಿದರೆ ಶೀನಪ್ಪ! ನನಗೆ ತುಂಬಾ ಭಯವಾಯ್ತು. ಪತ್ರವನ್ನು ಸುಮ್ಮನೇ ಹೋಗಿ ಕೊಡದೆ, ಓದಿ ತಪ್ಪು ಮಾಡಿದೆನಲ್ಲಾ ಎಂದು ಮರುಗಿದೆ. ಆದರೆ ಮಾವನಿಗೆ ಈ ವಿಷಯ ಹೇಳಲಿಲ್ಲ. ಮರುದಿನ ಬೆಳಿಗ್ಗೆ ಶೀನಪ್ಪನವರು ನಮ್ಮ ಮನೆಗೆ ಬಂದರು. ನಾನು ಮರೆಯಲ್ಲಿ ಅಡಗಿಕೊಂಡೆ. ಆದರೆ ಅಲ್ಲೊಂದು ವಿಚಿತ್ರ ನಡೆಯಿತು. ಮಾವನ ಒಳ್ಳೆಯತನವನ್ನು ಮೆಚ್ಚಿ, ಶೀನಪ್ಪನವರು ತಮ್ಮ ಮಗಳನ್ನು ಮದುವೆ ಮಾಡಿಕೊಡಲು ಮುಂದಾದರು. ಇವತ್ತಿಗೂ ಮಾವ ಹೇಳುತ್ತಿರುತ್ತಾನೆ, 'ಆ ದಿನ ನೀನು ತೆಪ್ಪಗೆ, ಒಳ್ಳೆಯವಳಾಗಿ ಪತ್ರವನ್ನೊಯ್ದು ಕೊಟ್ಟುಬಿಟ್ಟಿದ್ದರೆ ಏನಾಗುತ್ತಿತ್ತೋ ಏನೋ. ಬದಲಿಗೆ ಅಧಿಕಪ್ರಸಂಗಿಯಂತೆ ಓದುತ್ತ ನಿಂತೆಯಲ್ಲ, ಅದರಿಂದಾಗೇ ಅದು ಶೀನಪ್ಪನವರ ಕಣ್ಣಿಗೆ ಬಿತ್ತು. ನಾವಿಬ್ಬರೂ ಮದುವೆಯಾಗಲು ಕಾರಣ ನೀನೇ!' ಎಂದು.

**ಶಿಖಾ**, ಹರಿಹರ

ವಿಪರೀತವಾದ ಗಾಳಿ ಯಂಗೇ ಮರೆಮಾಡಿಕೊಂಡರೂ ಬಯಲು, ಬಯಲಲ್ಲಿ ಹಾಕಿದ್ದ ಒಲೆಗೆ ಸುತ್ತಿ, ಬಳಸಿ ಬಡಿಯುತ್ತಿತ್ತು. ಒಲೆಯಲ್ಲಿ ಉರಿಯುತ್ತಿದ್ದ ಟೈರು ಉರಿದೂ, ಉರಿದೂ ಬರಿದಾಗುತ್ತಿತ್ತು. ಮೇಲಿನಿಂದ ಸೂರ್ಯನ ಉರಿ, ಕೆಳಗಿನಿಂದ ಟೈರಿನ ಉರಿ ಇದ್ದರೂ ಪುನುಗ, ತಾಪವೇ ತಟ್ಟದವನಂತೆ ಅಂಗಿಯ ಮೇಲೊಂದು ಅಂಗಿ, ಪ್ಯಾಂಟಿನ ಮೇಲೊಂದು ಪ್ಯಾಂಟು, ತಲೆಗೊಂದು ಟೋಪಿ, ಮೇಲೊಂದು ಪೇಟ, ಕಾಲಿಗೆ ಎಲ್ಲೊ ಸಿಕ್ಕ ಬಲವಾದ ಬೂಟು ತೊಟ್ಟು, ಇರುವೆಯಂತೆ ಮಾತಾಡುತ್ತಾ, ಒಲೆ ತಳ್ಳುತ್ತಾ ಕುಳಿತಿದ್ದ. ಅವನಿಗೆ ಕಣ್ಣುಗಳು ಸರಿಯಾಗಿ ಕಾಣುವುದಿಲ್ಲ. ಮಂಜು ಮಂಜು. ಏನೇ ಆಗಲಿ ಮುಖದ ಹತ್ತಿರ, ಹತ್ತಿರ ಬರುವವರೆಗೂ ಕಾಣುವುದೇ ಇಲ್ಲ. ಕನ್ನಡಕ ಹಾಕಿಕೊಂಡರೆ ಅಷ್ಟೊ ಇಷ್ಟೊ ಕಾಣುತ್ತಿತ್ತು. ಮೊನ್ನೆ, ನಿಂತ ಮರಕ್ಕೆ ಹೋಗಿ ಗುದ್ದರಿಸಿ ಆ ಕನ್ನಡಕವನ್ನೂ ಕಳೆದುಕೊಂಡ.

ಟೈರು ಕತ್ತುಕೊಂಡು ದಗದಗನೆ ಉರಿಯುತ್ತಿತ್ತು. ಅದರಿಂದ ಏಳುತ್ತಿದ್ದ ಬೆಂಕಿಯ ಜ್ವಾಲೆ ಗಾಳಿಯ ಜೊತೆ ಆಡಿಕೊಂಡು ಅನ್ನಕ್ಕೆ ಇಟ್ಟಿದ್ದ ಪಾತ್ರೆಯ ಹಂಡನ್ನೇ ಮುಟ್ಟುತ್ತಿರಲಿಲ್ಲ. ಬೆಂಕಿಯ ಜ್ವಾಲೆ ಗಾಳಿಯ ಜೊತೆ ಆಡುತ್ತಾ, ಹೊಗೆಯಾಗಿ ಕರಗುತ್ತಾ, ಕರಿಯ ಕಿಟ್ಟವನ್ನು ಉಗುಳುತ್ತಿತ್ತು. ಆ ಕರಿಯ ಕಿಟ್ಟ, ಒಲೆಯ ಮೇಲಿದ್ದ ಪಾತ್ರೆಯ ಸುತ್ತಾ ಮುತ್ತಿ, ಬೆಳ್ಳಗಿದ್ದ ಪಾತ್ರೆ ಕಪ್ಪು ಮಡಿಕೆಯಂತಾಗಿತ್ತು. ಅನ್ನಕ್ಕೆಂದು ಹಾಕಿದ್ದ ಒಂದು ಲೋಟ ಅಕ್ಕಿ, ಗಂಟೆಯಾದರೂ ಅನ್ನವೇ ಆಗದೆ, ನೀರು ಕುದ್ದ ಸದ್ದೂ ಆಗದೆ ಹಾಗೇ ಇತ್ತು. ಪುನುಗ ಟೈರನ್ನು ಒಲೆಯ ಒಳಕ್ಕೆ ತಳ್ಳುತ್ತಲೇ ಇದ್ದ.

ಪುನುಗ ಕಣ್ಣಿನ ಆಪರೇಶನ್‌ಗೆ ಎಂದು ಮೈಸೂರಿಗೆ ಬಂದವನು ತಿರುಗಿ ಊರಿಗೆ ಹೋಗಲೇ ಇಲ್ಲ. ಅಲ್ಲಿಗೆ ಹೋದರೂ ಏನು? ಅಲ್ಲೇನಿದೆ; ಹೆಂಡತಿ, ಮಕ್ಕಳೇ ಇಲ್ಲ ಅಣ್ಣತಮ್ಮಂದಿರೇ, ಆಸ್ತಿಪಾಸ್ತಿಯೇ, ಏನೂ ಇಲ್ಲ ಎಂದು ಮೈಸೂರಿನಲ್ಲೆ ಇದ್ದು, ಅಲ್ಲಿ ಇಲ್ಲಿ ಬೇಡುತ್ತಿದ್ದ. ಮೈಸೂರಲ್ಲೆಲ್ಲಾ ಸುತ್ತೀ ಸುತ್ತಿ ಸಾಕಾಗಿ ಕೊನೆಗೆ ಯಾವುದೋ ಒಂದು ಕೊಂಪೆಯಲ್ಲಿ, ಜನ ತಿರುಗಾಡದ ಜಾಗದಲ್ಲಿ ಬಂದು ನಿಂತುಕೊಂಡ. ಅಲ್ಲೊಂದು ಗಿಡ, ಗಾಳಿಗೆ ತೂರಿ ಬರುತ್ತಿದ್ದ ಹಕ್ಕಿಯ ಪುಕ್ಕ, ಎಂಜಲು ಎಲೆ, ಬಟ್ಟೆಯ ಚಿಂದಿ, ಗೋಣಿಯ ತಾಟು, ಪ್ಲಾಸ್ಟಿಕ್ ಚೀಲ, ಕಸ ಕಡ್ಡಿಗಳನ್ನೆಲ್ಲಾ ತಡೆದು ನಿಲ್ಲಿಸಿಕೊಂಡು ಗೂಡು ಮಾಡಿತ್ತು. ಆ ಗೂಡೇ ಅವನಿಗೆ ಮನೆಯಾಯಿತು. ಇರುವವನಿಗೆ ತಾರಸಿಯೇ ಮನೆಯಾದರೆ ಇಲ್ಲದವನಿಗೆ ಬಯಲೇ ಮನೆಯಂತೆ ಬಯಲಲ್ಲಿ ಒಲೆ ಹೂಡಿದ.

ಊರಲ್ಲಿ ಇರುವ ಇವನ ಅಣ್ಣನ ಮಗಳು ದೇವಮ್ಮ ಇವನ ಹಾದಿ ಕಾಯುತ್ತಿದ್ದಾಳೆ. ನನ್ನಿಂದಲೇ ಅವನು ಊರು ಬಿಟ್ಟಿದ್ದು ಎಂದು ಅಳುತ್ತಾಳೆ. ಹೊತ್ತು, ತೆತ್ತು, ಸಾಕಿದ ಚಿಕ್ಕಪ್ಪನನ್ನು ಕಳೆದುಕೊಂಡೆನಲ್ಲ ಎಂದು ಮರುಗುತ್ತಿದ್ದಾಳೆ. ಎಂದೂ ಅವನಿಗೆ ತಿರುಗಿ ಅಂದವಳಲ್ಲ. ಪಾಪ, ಅವತ್ತು ಅವಳ ತಲೆ ಗೋಜಲುಗಳ ಗೂಡಾಗಿತ್ತು. ಬೆಳಗಿನಿಂದ ಅವಳ ಮಗ ಬಸುಲಿಂಗ ಅವಳ ತಲೆ ಕೆಡಸಿ ಕಿಲಾಂತರ ಮಾಡಿದ್ದ. ಅವನನ್ನು ಹೆಚ್ಚಿಗೆ ಓದಲು ಕಳಿಸಿದ್ದೇ ಆಯಿತು, ಮನೆಯಲ್ಲಿ ಒಂದಲ್ಲ ಒಂದು ಜಗಳ, ಕದನ ನಡೆಯುತ್ತಲೇ ಇತ್ತು. ಮಲಗಿದವರ ಮಧ್ಯದಲ್ಲಿ ದೀಪ ಇಟ್ಟುಕೊಂಡು ಓದಿದವನು. ಪಿಯುಸಿಗೆ ಬಂದಮೇಲೆ ಸಪರೇಟಾಗೇ

ರೂಮು ಬೇಕು ಎಂದು ಹಟಹಿಡಿದ. ಜಾಗವಿಲ್ಲ ಎಂದು ಹೇಳಿದರೂ ಕೇಳದೆ ರಾಗಿಕಲ್ಲನ್ನು ಕೀಳಿಸಿ ಅಲ್ಲಿ ಕಟ್ಟಿಸಿ ಎಂದ. ಅದಕ್ಕೆ ತಾಯಿ ದೇವಮ್ಮ ಒಪ್ಪದಿದ್ದಾಗ ಬಸುಲಿಂಗ ಮೇಲೆ ಬಿದ್ದ.

ನೀವು ಹಳೇ ಕಾಲದವರಂಗೆ ಐದು ನಿಮಿಷಕ್ಕೆ ಆಗೋ ಕೆಲಸಕ್ಕೆ ದಿನವೆಲ್ಲಾ ಗೆಯ್ತೀರಿ. ಈಗ ಗೇಟಿಗೆ ಮಿಷನ್ನು ಬಂದಿಲ್ವ; ಅಲ್ಲಿಗೇ ಹೋಗಿ ರಾಗಿ, ಜೋಳ ಬೀಸಿ ತಂದರಾಯಿತು ಎಂದು ಒಪ್ಪಿಸಿದ. ರಾಗಿಕಲ್ಲು ಕೀಳಿಸಿ ರೂಮು ಮಾಡಿಸಿಕೊಂಡ. ಈಗ ಅವನಿಗೆ ಐನೂರು ರೂಪಾಯಿನ ಬೂರ್ಸು ಬೇಕಂತೆ. ತಕ್ಕೊಟ್ಟರೆ ಕಾಲೇಜಿಗೆ ಹೋಗುತ್ತಾನಂತೆ; ಇಲ್ಲದಿದ್ದರೆ ಕಾಲೇಜೂ ಇಲ್ಲ, ಕೆಲಸವನ್ನೂ ಮಾಡುವುದಿಲ್ಲ ಎಂದು ಮುನಿಸಿಕೊಂಡು ಕುಳಿತಿದ್ದಾನೆ.

ಆಗ ದೇವಮ್ಮ ತನ್ನ ಕಷ್ಟಸುಖವನ್ನು ಮಗನ ಮುಂದೆ ತೋಡಿಕೊಂಡಳು. 'ನಮ್ಮತ್ರ ದುಡ್ಡು ಎಲ್ಲಿ ಬತ್ತು ಬಸುಲಿಂಗ, ಏನೋ ನಮ್ಮ ಕೈಲಿ ಆಗವತ್ತಗೆ ಒಂದು ಜೊತೆ ಯಕ್ಕಡ ತಕ್ಕೊಟ್ಟಿಲ್ವ, ಅವನೇ ಹಿಕ್ಕ ಸಮಿಸಪ್ಪ' ಎಂದಳು. ಅದಕೆ ಬಸುಲಿಂಗ 'ನೀನು ಊರಲ್ಲಿ ಬಿದ್ದಿದ್ದೀಯ. ನಿನಗೇನು ಗೊತ್ತು, ಕಾಲೇಜಿಗೆ ಬಂದು ನೋಡು ಎಂಗೆಂಗೆ ಬತ್ತರೆ ಅಂತ' ಎಂದು ಬೆಳಗ್ಗೇನೆ ಸೈಕಲ್ಲಿಗೆ ಕಟ್ಟಿರುವ ಜೋಳವನ್ನು ಗೇಟಗೆ ಹೋಗಿ ಬೀಸಿ ತರದೆ, ಬೆಳಗಿನಿಂದ ಎಲ್ಲರನ್ನೂ ಉಪವಾಸ ಕೆಡುಗಿದ್ದ.

ಬೆಳಗಿನಿಂದಲೂ ಇವನ ಜೊತೆ ಆಡಿ ಸಾಕಾಗಿ, ಹಸಿದು ಹಣ್ಣಾಗಿದ್ದ ದೇವಮ್ಮ ಸಿಟ್ಟಾಗಿ 'ಥೂ ನಿನ್ನ ಬಾಯಿಗೆ ಮಣ್ಣಾಕ. ಯಾವ ನನ್ನ ಮಗನೂ ನಿನಗೆ ಉಗದು ಬುದ್ಧಿ, ಯುಕ್ತಿ ಹೇಳನಿಲ್ವಾ? ಆ ನಮ್ಮಪ್ಪ ಪುಣ್ಯಾತ್ಮ ದಡಿ ಮೇಷ್ಟ್ರು ಇದ್ದ ಒಂದು ದಿನವಾದರು ಹೈಕಳಿಗೆ ಲೇ ನೀ ಇಂತದನೇ ಹುಟಗ ಬಾ, ಇಂತದನೇ ತೊಟಗ ಬಾ ಅನ್ನಿಲ್ಲ. ಹರದೋಗಿರ ಅಂಗೀನೇ ಹಿಕ್ಕಹೋದ್ರು, ಅದನೇ ಹಿಕ್ಕ ಬನ್ನಿ ಆದರೆ ವಕ್ಕಂಡು ಕಿಲೀನಾಗಿ ಬನ್ನಿ ಅಂತಿದ್ದ. ಅವನೂ ಇಂಗೇ ಆಗೋಗಿದ್ದರೆ ನೀನು ಇಲ್ಲಿಗಂಟ ಓದತಿದ್ಯಾ? ನಾವು ನಿನ್ನ ಇಸ್ಕೂಲಿಗೆ ಕಳಿಸ್ತಿದ್ವಾ! ಕಳಿಸ್ತಿರ್ನಿಲ್ಲ. ನಮಗೆ ಈ ಕಷ್ಟ ಬತ್ತಲೂ ಇರ್ನಿಲ್ಲ. ಏನೊ ಮಗ ಓದಿ ಬುದ್ಧಿವಂತ ಆದಂತನೆ ಅಂತ ರಾಗಿಕಲ್ಲ ಕೀಳಿಸಿದ್ದೆ ತಪ್ಪಾಗಿ ಈಗ ಹೊಟ್ಟೆಗೆ ಹಿಟ್ಟಿಲ್ಲದೆ ಸಾಯತಾ ಇವಿ' ಎಂದು ಹೊರಗೆ ಸೂರ್ಯನ ನೋಡಲು ಬಂದಳು.

ಅವಳ ಚಿಕ್ಕಪ್ಪ ಪುನುಗ ಆಗಲೇ ಬಂದು ಜಗುಲಿಯ ಇಸಾನಿ ಮೂಲೆಯಲ್ಲಿ ಕಂಡೂ ಕಾಣದಂತೆ ಮುದುರಿ ಕುಳಿತಿದ್ದ. ನೆತ್ತಿಗೇರಿದ್ದ ಕೋಪವನ್ನು ಹೊತ್ತು ಹೊರಕ್ಕೆ ಬಂದ ದೇವಮ್ಮ, ಪುನುಗನ ಕಂಡು 'ಎದ್ದೋಗಲಿ ಇವನೊಬ್ಬ, ಯಡೊತ್ನಲ್ಲಿ ಬಂದ, ಎಡಿಕೆರಕ ತಿನ್ನಕ್ಕೆ' ಎಂದು ಬಿಟ್ಟಳು. ಪುನುಗನಿಗೆ ಕಣ್ಣುಗಳೇ ಕಾಣದಾದವು. ಎಂದೂ ಇಂತ ಮಾತು ಮಗಳ ಬಾಯಿಯಿಂದ ಬಂದದ್ದೇ ಇಲ್ಲ. ಏನಪ್ಪ ಶಿವ ಇವತ್ತು ಎಂದು ಜಗುಲಿಯಿಂದಿಳಿದು ಹೊರಟುಬಿಟ್ಟ. ಕಾಲದಿಂದಲೂ ಒಂದು ಮೈಲಿ ದೂರದಿಂದ ಇಲ್ಲಿಗೆ ಊಟಕ್ಕೆ ಬರುತ್ತಿದ್ದ. ದೇವಮ್ಮ ಹೊಟ್ಟೆಯಲ್ಲಿ ಹುಟ್ಟಿದ ಮಗಳಿಗಿಂತಲೂ ಹೆಚ್ಚಿಗೆ ಹಿಟ್ಟಿಕ್ಕಿ ಕಳಿಸುತ್ತಿದ್ದಳು. ಇವತ್ತ್ಯಾಕೆ ಇಂಗಾಯಿತು ಎಂದು, ಪುನುಗ ತಡವರಿಸುತ್ತಾ, ಮಟ್ಟದಲ್ಲಿ ಇಡಬೇಕಾದ ಕಾಲುಗಳನ್ನು ಹಳ್ಳಕ್ಕೂ, ಹಳ್ಳದಿಂದ ತೆಗೆದು ಮುಳ್ಳಿಗೂ ಮಡುಗುತ್ತಾ, ಬೆಚ್ಚುತ್ತಾ, ಬೆವರುತ್ತಾ, ಇಲ್ಲಿಗೆ ಅವಳ, ನನ್ನ ಋಣ ಮುಗಿಯಿತು ಎಂದು ತನ್ನ ಹಿರೀಕರು, ಹೆಂಡತಿ ಮಕ್ಕಳ ಸಮಾಧಿ ಬಳಿಗೆ ಬಂದು ಕುಳಿತ.

ಅದೇ ದಾರಿಯಲ್ಲಿ ಒಂದು ಹುಡುಗ, ಕೋಲೂರಿ ಹೆಜ್ಜೆ ಇಡುತ್ತಿದ್ದ ಮುದುಕನನ್ನು ಹಿಡಿದು ನಡೆಸಿಕೊಂಡು ಬಂದ. ಮುದುಕ ಹುಡುಗನಿಗೆ 'ಕೂಸು, ಆ ಮೋದಿ ಡಾಕ್ಟ್ರು ಹೋಗಿರ ಕಣ್ಣುಗಳನೂ ಬರಸ್ಬುಡ್ತರೆ ಅಲ್ಲವಾ' ಎಂದ. ಹುಡುಗ 'ಮಂತೆ ಬರಸೇ ಬರಸ್ತರೆ.' 'ಅಂಗಾದರೆ ಆ ನನ್ನಪ್ಪ, ಮೋದಿ ಡಾಕ್ಟ್ರು ನನ್ನ ಎರಡು ಕಣ್ಣುಗಳಿಗೂ ಬೆಣಕ ಕೊಡದು ಬ್ಯಾಡ.

ಒಂದೇ ಒಂದು ಕಣ್ಣಿಗೆ, ಅದೂ ಚೂಜಿ ಗಾತ್ರದ ಬೆಣಕ ಕೊಟ್ಟರೆ ಸಾಕು ಕೆರೆದಾರಿ ಹಿಡಕಂಡೋಗಿ ತಣ್ಣಗೆ ಜೀವ ಬುಡ್ತಿನಿ' ಎಂದ. ಮುದುಕನ ಮಾತುಗಳು ಪುನುಗನಲ್ಲಿ ಜೀವಸಂಚಾರ ಉಂಟು ಮಾಡಿದವು. ಆಹಾ ನನಗೂ ಕಣ್ಣು ಬಂದರೆ ಯಾರನೂ ಕೊಡಿ ಅಂತ ಕೇಳಲ್ಲ. ಗೇಯಕ ತಿಂತಿನಿ. ನಿಜ, ಮೋದಿ ಡಾಕ್ಟ್ರು ಕಣ್‌ಕಾಣದ ಬಡವರು, ಬಗ್ಗರಿಗೆ ಕಣ್ಣ ಅಪಲೇಷನ್ ಮಾಡಿ ಕಣ್‌ಕಂಡ್ರಿ ಕೊಟ್ಟರಂತೆ, ನಾನು ಹೋಗದೇ ಸರಿ ಎಂದು ಎದ್ದವನೇ ಅವರ ಹಿಂದೆಯೇ ಹೊರಟ.

ಗೇಟಿಗೆ ಬಸ್ಸು ಬಂತು. ಹತ್ತುವವರ ಜೊತೆ ಪುನುಗನೂ ಬಸ್ಸು ಹತ್ತಲು ಹೋದ. ಕಂಡಕ್ಟರ್ ರಾಮಯ್ಯ 'ದುಡ್ಡಿರವರು ಹತ್ತಿ, ಮುಂದೆ ಚಕಿಂಗ್ ಅದೆ' ಎಂದ. ಪುನುಗ 'ಅಯ್ಯೋ ರಾಮಯ್ಯ, ಇವತ್ತೊಂದು ದಿಸ ಹತ್ತಸಗ ಹೋಗಯ್ಯ, ಇನ್ನು ಯಾವತ್ತೂ ನಿನ್ನ ಬಸ್ಸಿಗೆ ಕಾಲಿಡಲ್ಲ ಕಣಯ್ಯ' ಎಂದ. ಕಂಡಕ್ಟರ್ ರಾಮಪ್ಪ, 'ನಮ್ಮಪ್ಪಂದಯ್ಯ ಬಸ್ಸು? ದುಡ್ಡುಕೊಟ್ಟುಬುಟ್ಟು ಹತ್ತಯ್ಯ'. 'ಅಲ್ಲ ಕಣ ರಾಮಪ್ಪ ನೀನು ಕಾಡವನಾ, ನಂಟನಾಗಿ ಒಂದು ರೂಪಾಯಿಗೆ ಸೋಲೊಲ್ಲಯಾ! ನಾನೇನು ಮೈಸೂರಿಗೆ ಪೋಜು ನೋಡಕ್ಕ ಹೊಯತಾ ಇದನಾ, ಕಷ್ಟ ಆಗವತ್ತಗೆ ಅಲ್ಲವಾ...', 'ನನಗೂ ಕಷ್ಟ ಆಗವತ್ತಗೆ ಕಣಯ್ಯಾ ಡ್ಯೂಟಿ ಮಾಡತಾ ಇರದು' ಎಂದು ಬಸ್ಸಿಗೆ ರೈಟ್ ಹೇಳಿಯೇಬಿಟ್ಟ.

ಪುನುಗ ಗೇಟಿನಲ್ಲಿ ಕುಳಿತು ಮೈಸೂರಿನಲ್ಲಿರುವ ತನ್ನ ಅಣ್ಣನ ಮಗ ದೇವರಾಜನನ್ನು ನೆನೆದ. ಮೈಸೂರಿನಲ್ಲಿ ಅವನಿಗೆ ದೊಡ್ಡ ಕೆಲಸ; ಕೈತುಂಬ ಸಂಬಳ. ಅವನ ಕೈಲಿ ಲಕ್ಷ್ಮಿ ನಲದಾಡ ತಳೆ. ಈಗ ಮೈಸೂರಿನಲ್ಲಿ ಓಡಾಡತವಲ್ಲ, ಆ ಹರಕಲು ಪುರುಕಲು ನೋಟುಗಳು, ಅವುನ ಅವನು ಕೈಲಿ ಮುಟ್ಟದೇ ಇಲ್ಲ. ಅದನ ಯಂಗಪ್ಪ ಜೇಬಲ್ಲಿ ಇಟಕಳದು ಅಂತ ಇಟ್ಟೇಬುಡ್ತನೆ. ಅವು ಗಾಳಿಲೆಲ್ಲಾ ತೂರಾಡ್ತವೆ. ಅದಾದರೂ ಇತ್ತಗೆ ತೂರಕಬರಬಾರದ ಎಂದುಕೊಂಡ. ಆ ಎರಡು





ರೂಪಾಯಿನ ಹರಕಲು ನೋಟು 'ವಾಲುತ್ತಾ, ತೇಲುತ್ತಾ ಓಡಿಬಂದು ಗೇಟಿನಲ್ಲಿ ಕುಳಿತಿದ್ದ ಪುನುಗನ ಪಾದಕ್ಕೆ ಅರ್ಪಿತವಾಯಿತು. ಆ ಬಂದ ನೋಟನ್ನು ಕೈಯ್ಯಲ್ಲಿ ಹಿಡಿದು ಪುನುಗ, ಎದೆ ಯುಬ್ಬಿಸಿ ರಾಮಪ್ಪನನ್ನೂ, ಆ ಬಸ್ಸನ್ನೂ ಕಾಯುತ್ತಾ ಕುಳಿತ. ಬಸ್ಸು ಬಂತು. ಕೆಳಗೆ ಬಂದ ಕಂಡಕ್ಟರ್ ರಾಮಪ್ಪನಿಗೆ 'ಅಯ್ಯೋ ರಾಮಪ್ಪ, ಎಷ್ಟಯ್ಯ ಟಿಕೀಟು?' ಎಂದ. ಎರಡು ರೂಪಾಯಿ ಅಂದ ರಾಮಪ್ಪ. 'ಎರಡು ಕೊಟ್ಟರೆ ಏನು ಕೊಟ್ಟಯಿ?' 'ಟಿಕೆಟ್‌ಕೊಡ್ತಿನಿ'. 'ಅದ ತಕಂಡು ಹಂಗೆ ಅಂಟಸ್ತ ಕೂತಗಳನಾ? ತಕೊ, ಒಂದು ಹಿಡಕ, ಒಂದು ಕೊಡು, ಟಿಕೀಟು ಬ್ಯಾಡ' ಅಂದ. ರಾಮಯ್ಯ 'ಹತ್ತು' ಎಂದ.

ನಂಜುಮಳಿಗೆಯಲ್ಲಿ ಬಸ್ಸಿಳಿದ ಪುನುಗ, ಬಸ್ಸು ಹೋದಮೇಲೆ ಅಲ್ಲೆ ನಿಂತು ದಿಕ್ಕು ಹುಡುಕಿಕೊಂಡ. ಕತ್ತಲಾಗುತ್ತಿತ್ತು. ಅವನ ಮಬ್ಬಾದ ಕಣ್ ಬೆಳಕು ರಸ್ತೆಯಲ್ಲಿ ನಡೆಯಲು ಸಾಕಾಗುತ್ತಿರಲಿಲ್ಲ.



ಅತ್ತಿಂದ, ಇತ್ತಿಂದ ಕಣ್ಣು ಕೋರೈಸುವಂತೆ ಬರುತ್ತಿದ್ದ ಬಸ್ಸು, ಕಾರುಗಳ ಬೆಳಕು ಅವನ ಮಬ್ಬಾದ ಬೆಳ ಕನ್ನು ಕಿತ್ತು ಹೊರಟುಬಿಡುತ್ತಿದ್ದವು. ಆಗ ಪುನುಗ ಕಣ್ಣು ಮುಚ್ಚಿ, ನಿಂತಲ್ಲೆ ನಿಂತು, ಹೋದ ಬೆಳಕು ತಿರುಗಿ ಬಂದಮೇಲೆ ಹೆಜ್ಜೆ ಕೀಳುತ್ತಿದ್ದ. ಆರು ಗಂಟೆಗೆ ನಂಜುಮಳಿಗೆ ಬಿಟ್ಟವನು, ಒಂದು ಕಿಲೋ ಮೀಟರ್ ದೂರವಿರುವ ಅಣ್ಣನ ಮಗ ದೇವ ರಾಜನ ಮನೆ ಮುಟ್ಟಿದಾಗ ಎಂಟು ಗಂಟೆಯಾಗಿತ್ತು.

ಪುನುಗನಿಗೆ ಮನೆಯ ಗುರುತೇ ಹತ್ತಲಿಲ್ಲ. ಅದೇ ಜಾಗ. ಈಗ ಆ ಜಾಗದಲ್ಲಿರುವ ಮನೆ ಭಾರೀ ಗಾತ್ರದ್ದು. ಅದರ ಬಣ್ಣ ಬದಲಾಗಿದೆ. ಆಕಾರ ವಿಕಾರವಾಗಿದೆ. ದಾರಿಯಲ್ಲಿ ಬಂದವ ರನ್ನೂ ಪಿಸುಧ್ವನಿಯಲ್ಲಿ ಕೇಳಿದ. ಅವರು ಅದೇ ಅಂದರು. ಪುನುಗ, ಮನೆಯ ಮುಂದಕ್ಕೆ ಹೋಗಿ, ತನ್ನ ಕಾಲಿನ ಯಕ್ಕಡಗಳನ್ನು ಬಿಟ್ಟು, ಅವುಗಳನ್ನು ಪಕ್ಕಕ್ಕೆ ಸರಿಸಿ, ಒಮ್ಮೆ ಸುತ್ತಾ ನೋಡಿ ಬಾಗಿಲು ಚಿಲಕ ಕುಟ್ಟಿದ. ಶಿವ ಶಿವ ಬಂದರೆ ಮಗನೇ ಬರಲಿಕಣಪ್ಪ. ಇನ್ನ್ಯಾರೂ ಬಂದು ಗೊತ್ತಿಲ್ಲ ಹೋಗಯ್ಯ ಅಂದ್ಬುಟ್ಟರು; ನನ್ನ ಗುರುತು ಇರದು ಅವನೊಬ್ಬನಿಗೇ, ಶಿವ ಶಿವ ಎಂದು ದೇವರ ನೆನೆದ. ಎಷ್ಟೊತ್ತಾದರು ಬಾಗಿಲು ತೆಗೆಯಲೇ ಇಲ್ಲ. ಮನೆಯಲ್ಲಿ ಇದ್ದಾರೋ ಇಲ್ಲವೋ ಎಂದು ತನ್ನ ಕಿವಿಗಳನ್ನು ಮನೆಯ ಒಳಕ್ಕೆ ಬಿಟ್ಟ. ಒಳಗೆ ಮಾತುಗಳು ನಡೆಯುತ್ತಿದ್ದವು.

'ನನಗಂತೂ ಊಟ ಬೇಡವೇ ಬೇಡ. ಮಧ್ಯಾಹ್ನ ತಿಂದದ್ದು ಹರಗೇ ಇಲ್ಲ' ಎಂದದಕ್ಕೆ 'ನನಗೂ ಅಂಗೆ ಆಗದೆ ಕಣ್ರಿ, ನಾನು ಏನು ಮಹಾ ತಿಂದೆ, ನೀವು ಬಿಟ್ಟಿದ್ದ ಇಷ್ಟು ಅನ್ನ. ಆದರೂ ನಾನು ನಿಮಗಿಂತ ದಪ್ಪನೇ?' 'ಇಲ್ಲ ನಾನೇ ದಪ್ಪ!' 'ಇಲ್ಲ ಇಲ್ಲ ನಾನೇ.' 'ತೂಕನೇ ಆಕ್ಸನ ಬುಡ್ರಿ. ಅಲ್ರಿ, ನಾನು ವಾರಕ್ಕೆ ಒಂದು ದಿನ ಊಟ ಬಿಡ್ತಿನಿ; ದಿನ ತಪ್ಪಿ ದಿನ ತಿಂಡಿ ಬಿಡ್ತಿನಿ ಆದರೂ ಕರಗಲ್ವಲ್ಲ'. ಇವರ ಮಾತನ್ನು ಕೇಳಿದ ಮಕ್ಕಳು 'ಅಮ್ಮ, ನಮಗೂ ಊಟ ಬೇಡ ಅಂದವು. ಆಗ 'ಒದ್ಬುಡ್ತಿನಿ, ನಮಗೆ ಬೇಡ' ಅಂದರೆ. ನಿಮಗೆ ಯಾಕ್ರೊ ಬೇಡ. ನಾಕು ಚಮಚ ಅನ್ನ ತಿಂದ್ಬುಟ್ಟು ಮಸ್ಕಿರಿ ಆಡ್ತೀರಾ...! 'ಹ್ಞಾಂ ಎಲ್ಲಿ ನಾಲ್ಕು ಚಮಚ? ನಾನು ಹತ್ತು ಚಮಚ ತಿಂದಿ ದ್ದೀನಿ', ಮತ್ತೊಂದು 'ನಾನು ಎಂಟು ಚಮಚ', ಹೀಗೆ ಮಾತು ಸಾಗುತ್ತಲೇ ಇತ್ತು.

ಎಲ್ಲವನು ಆಲಿಸಿದ ಪುನುಗ ಅಪ್ಪವ್ವೊ, ಅನ್ನ ತಿನ್ನಕ್ಕೆ ಪೋರಾಣಕೆಯುಲ್ಲಪ್ಪೊ. ನನಗೆ ನೀವು ಬುಟ್ಟಿದ ಕೊಡ್ರಪ್ಪೋ ಸಾಕು. ದೇವರಾಜ, ನಿನ್ನ ಮನೇಲಿ ಸಿರಿಯೇನೊ ತುಂಬದೆ ಆದರೆ ಆರಗಣೆ ಯಾರಗೂ ಇಲ್ವಲ್ಲಪ್ಪ ಎಂದು ಮತ್ತೆ ಚಿಲಕ ಕುಟ್ಟಿದ. ಈ ಸದ್ದು ಎಲ್ಲಿಯದೋ ಸದ್ದಿನಂತೆ ದೇವರಾಜನಿಗೆ ಕೇಳಿಸಿತು. ಯಾರಾದರು ಬಂದಿ ದ್ದರೆ ಬೆಲ್ ಮಾಡುತ್ತಿದ್ದರು! ಅದ್ಯಾವ ಸದ್ದೊ ಎಂದು ಸುಮ್ಮನಾದ. ಒಂದೆರಡು ನಿಮಿಷ ಬಿಟ್ಟು ಮತ್ತೆ ಸದ್ದು ಮಾಡಿದಾಗ ದೇವರಾಜು ಎದ್ದು ಬಂದು ಬಾಗಿಲು ತೆಗೆದ. ಕ್ಷಣ ಸಂಬದಿರಲಾಗದ ಗುರುತು, ಯಾರು ಎಂದು ಕೇಳಲಾಗದ ಗುರುತು, ಕಣ್ಣಿಗೆ ಒಪ್ಪಿದ ಗುರುತು. ಎದುರಿಗಿದ್ದ ಮುದುಕ ತಲೆಬಗ್ಗಿಸಿ ನಿಂತಿದ್ದ. ಅಂತು ಮೇಲೆ ಕೆಳಗೆ ನೋಡಿದ ದೇವರಾಜು, ಹಾಗೇ ನೋಡುತ್ತಾ ಗುರುತು ಹಿಡಿದು 'ಚಿಕ್ಕಪ್ಪ' ಎಂದ. ಪುನುಗ ಮನದೊಳಗೆ ಶಿವ ಶಿವ ಎಂದು ಬಾಯಿಂದ ಪುಸ್ ಪುಸ್ ಎಂದು ಉಸಿರುಬಿಟ್ಟ.

ದೇವರಾಜು, ಚಿಕ್ಕಪ್ಪನ ಒಳಕ್ಕೆ ಕರೆದು ಹೆಂಡತಿ ಮಕ್ಕಳ ಕೂಗಿದ. ಅವರು ಓಡಿ ಬಂದು ಪಿಳಿ, ಪಿಳಿ ಕಣ್ಣುಬಿಟ್ಟು ನೋಡುತ್ತಾ ನಿಂತರು. ದೇವರಾಜು, 'ಇವರು ನನ್ನ ಚಿಕ್ಕಪ್ಪ' ಎಂದ. 'ಇವಳೇ ನನ್ನ ಹೆಂಡತಿ' ಎಂದು ಚಿಕ್ಕಪ್ಪನಿಗೆ ಪರಿಚಯ ಮಾಡಿ ಕೊಟ್ಟ. ಪುನುಗ 'ಮದುವೆ ಆದ್ಯಾ...? ಎಲಾ

ನನಗೆ ಹೇಳನೇ ಇಲ್ಲ' ಎಂದ. ಹೇಳಬೇಕು ಅನಕಂಡಿ, ಹೇಳಕಾಗನಿಲ್ಲ ಎಂದ. 'ನಿನ್ನ ಕಂಡವರು ಊರನಲೆಲ್ಲಾ ಹೇಳತಿದ್ರು. ನಿನ್ನ ಮಗನ ನೋಡದೊ, ಅಂಗವನೆ, ಇಂಗವನೆ ಅಂತ ಕೊಂಡಾಡತಿದ್ರು. ನನಗೆ ಅದ ಕೇಳಿ ಒಂದು ಸಲ ಹೋಗಿ ನೋಡಕ ಬರಬೇಕಲ್ಲ ಅನಸ್ತು. ಕಣ್ಣುಕತಿ ಕಾಣ್ಸಲ್ವಲ್ಲ, ಎಂಗೆ ಬರನಿ? ನೀನಂತೂ ಊರದಿಕ್ಕೆ ತಲನೆ ಆಕಲ್ಲ.' ದೇವರಾಜು, 'ಎಲ್ಲಿಯಪ್ಪ ನಾನು ತುಂಬಾ ಬಿಜಿ. ಈಗ ಏನು ಬಂದೆ, ಏನು ಸಮಾಚಾರ?' ಎಂದ. ಈಗ ಕಣ್ಣುಗಳು ತೀರಾಮಾನ ಕಾಣಲ್ಲ, ಇದಂತು ಕಾಣದೇ ಇಲ್ಲ. ಇದೊಂದು ಸುಮಾರಾಗಿ ಕಾಣತದೆ. ಊರಲ್ಲಿ 'ಮೈಸೂರಿಗೆ ಮೋದಿ ಡಾಕ್ಟ್ರು ಬತ್ತರೆ, ಹೋಗಿ ತೋರಸಗೊ ಅಂದ್ರು', ಬಂದಿ. ಒಳ್ಳೇದು ಒಳ್ಳೇದು ಎಂದು ದೇವರಾಜು ಎದ್ದು ಒಳಕ್ಕೆ ಹೋದ. ಹೆಂಡತಿಗೆ ಅಡುಗೆ ಮಾಡು ಎಂದ. ಅವಳು ಮಧ್ಯಾಹ್ನದ್ದೇ ಬೇಕಾದಷ್ಟಿದೆ ಎಂದಳು. ಅದು ಯಾವ ಮೂಲೆ, ಅವರು ಚನ್ನಾಗಿ ಊಟ ಮಾಡ್ತಾರೆ, ಇನ್ನೂ ಸ್ವಲ್ಪ ಮುದ್ದೆ, ಅನ್ನ ಹೆಚ್ಚಿಗೇನೆ ಮಾಡು ಅಂದ.

ಮಗ ಒಳಗೆ ಹೋದ ಮೇಲೆ ಪುನುಗ ಮನೆಯನ್ನೆಲ್ಲಾ ಒಮ್ಮೆ ನೋಡಲು ಶುರುಮಾಡಿದ. ಹೆಜ್ಜೆ ಹೆಜ್ಜೆಗೂ ದೀಪಗಳು ಉರಿಯುತ್ತಿದ್ದು, ಮನೆ ಫಳ ಫಳ ಎನ್ನುತ್ತಿತ್ತು. ಮೇಲೆ ಹೊಡೆಯುತ್ತಿದ್ದ ಗಾಳಿ, ಹರಿದ ಅಂಗಿಯ ಒಳಗೆಲ್ಲಾ ಸುಳಿದಾಡಿ, ಬೂತಾಳೆ ಬುಡದಲ್ಲಿ ಕುಳಿತರೂ ಸಿಗದ ತಂಪು ಸಿಗುತ್ತದಲ್ಲಪ್ಪ ಎನಿಸಿತು. ಕಾಲುಗಳು ತಣ್ಣಗಾಗಿ ಕುಳು ಕುಳು ಎನ್ನುತ್ತಿದ್ದವು. ಬಗ್ಗಿ ನೋಡಿದ. ನೆಲ ಪಣ ಪಣ ಎನ್ನುತ್ತಿತ್ತು. ತೊಪ್ಪೆ ನೆಲದಂತೆ ಹಳ್ಳ ಹಳ್ಳ ಇರದೆ ನಯಸ್ಸಾಗಿತ್ತು. ತೊಪ್ಪೆ ನೆಲವಾದರೆ ಹೈಕಮಕ್ಳ ತೊಪ್ಪೆ ಚಕ್ಕೆ ಯಡಕ ತಿನಕತವೆ ಅಂತ ಲೇಸೊ ಇಂಗೆ ಮಾಡಸವನೆ. ಅವನು ವಸೊಸಿ ತೊಪ್ಪೆ ಚಕ್ಕೆ ತಿಂತಿದ್ನ. ಎಷ್ಟೇ ವಡದರೂ ಬುಡ್ತಿರ್ನಿಲ್ಲ. ಆದರೂ ಈ ನೆಲ ದನಕರಿಗಲ್ಲ. ಮೇಲೆ ನೋಡಿದ. ದಬ್ಬಳ ಅಡಸ್ಸೂ ತೂತಿಲ್ಲ. 'ನಾನು ಬಿತ್ತಿ ಬೆಳೆಯೋ ಕಾಲದಲ್ಲಿ ಇಂಗಿದ್ದಿದ್ರೆ ಅದೆಷ್ಟು ಮೂಟೆ ಜ್ವಾಳ, ರಾಗಿ, ಕಾಳುಕಡ್ಡಿ ಉಳಿತಿತ್ತೊ. ಬಡ್ಡಿ ಇಲಿ, ಯಗ್ಗಣ ಮೂಟ್ ಮೂಟೆಗಳನೇ ಕತ್ತರಸಿ ಉತ್ತರಸ್ಬುಡತಿದ್ವೊ. ನಮ್ಮ ಕುಡಿ ಎಲ್ಲಾದ್ರು ಬೆಳೀಲಿ ಅದು ನಮಗೇ ಹೆಸರಲ್ವೆ.'

ಮಕ್ಕಳು ಹೊರಗೆ ಕುಳಿತಿದ್ದ ಪುನುಗನನ್ನು ಇಣುಕಿ ಇಣುಕಿ ನೋಡುತ್ತಿದ್ದವು. ತಾತ ಕಣ್ರೋ ಎಂದರೆ ತಾತ ಎನ್ನುತ್ತಿರಲಿಲ್ಲ. ಅವರ ಮೈನ ಬೆವರಿನಿಂದಲೇ ನಿಮ್ಮ ಅಪ್ಪ ಈ ಮಟ್ಟ ತಲುಪಿರುವುದು ಎಂದರೆ ಹುಂ ಹ್ಞೂಂ ಎನ್ನುತ್ತಿದ್ವೊ. ಅವನ ಮಾಸಿದ ಬಟ್ಟೆಯಲ್ಲಿ ನಿಮ್ಮಪ್ಪನ ಗೊಣ್ಣೆ ಅವುತಿದೆ ಎಂದರೆ ಥೂ ಎನ್ನುತ್ತಿದ್ದವು. ಬಿರುಕು ಬಿಟ್ಟಿರುವ ಕಾಲು, ಸವೆದಿರುವ ಮೂಳೆ, ಮುಚ್ಹೋಗಿರುವ ಕಣ್ಣು, ಕಿವಿಗಳು ನಿಮ್ಮ ಅಪ್ಪನಿಗಾಗೇ; ನಿಮ್ಮಗಳ ಈ ಸುಖದ ಜೀವನಕ್ಕೆ ಎಂದರೆ ತಮ್ಮ ಅಪ್ಪನನ್ನು ತಬ್ಬಿ ಹಿಡಿಯುತ್ತಿದ್ದವು. ದೇವರಾಜು, ತೆರೆದಿದ್ದ ಹೊರಗಿನ ಬಾಗಿಲು ಮುಚ್ಚಲು ಹೋದ. ಹೊರಗೆ ಬಿಟ್ಟಿದ್ದ ಚಿಕ್ಕಪ್ಪನ ಯಕ್ಕಡಗಳನ್ನು ಕಂಡು ಬಾಗಿಲಲ್ಲೆ ನಿಂತುಬಿಟ್ಟ. ಚಿಕ್ಕಪ್ಪನ ಎರಡು ಯಕ್ಕಡಗಳು ಒಂದೇ ಕಾಲಿನವು. ಬೇರೆ ಬೇರೆ ಬಣ್ಣದವು. ಅವುಗಳಿಗೆ ದಾರ ಕಟ್ಟಿದ್ದು ಹಿಂಬಡಿಗಳಿಗೆ ಸಿಕ್ಕಿಸಿಕೊಳ್ಳುವಂತಿತ್ತು. ಆ ಯಕ್ಕಡಗಳು ದೇವರಾಜುವಿನ ಮೆದುಳಿನಲ್ಲಿ ನಾಟಿಕೊಂಡು ಗತಕಾಲಕ್ಕೆ ಎಳೆದುಕೊಂಡು ಹೋದವು.

ಆಗ ದೇವರಾಜು ನಾಲ್ಕನೆ ತರಗತಿ ಪಾಸು ಮಾಡಿದ್ದ. ಐದನೆಯದ ಓದಲು ಗೌರಿಪುರಕ್ಕೆ ಹೋಗಬೇಕಿತ್ತು. ಗೌರಿಪುರಕ್ಕೆ ಹೋಗುವ ಮಧ್ಯದಲ್ಲಿ ಅಯ್ಯನಕೆರೆ. ಅಲ್ಲಿ ಇರುವವರೆಲ್ಲಾ ಶಿವಾಚಾರದವರು. ಗೌರಿಪುರಕ್ಕೆ ಹೋಗಬೇಕಾದರೆ ಈ ಊರಿನ ಒಳಗಿನಿಂದಲೇ ಹೋಗಬೇಕಿತ್ತು. ಹೊಲೇರು ಯಕ್ಕಡ ಮೆಟ್ಟಿ ಹೋಗುವಂತಿರಲಿಲ್ಲ. ಕೋಳಿಗಳ ಹಿಡಿದು ಹೋಗುವಂತಿರಲಿಲ್ಲ. ಹೋಗಲೇಬೇಕು ಅಂದರೆ ಕಾಡುಮೇಡು ಬಿದ್ದು,

ಒಂದೂವರೆ ಮೈಲಿ ಸುತ್ತೀ, ಬಳಸಿ ಹೋಗಬೇಕಿತ್ತು. ಸುತ್ತಿ ಬಳಸಲಾರದ ಜನ ಬಟ್ಟೆ ಬರೆ ಸಪ್ಪರಿಸಿಕೊಂಡು, ಆ ಕೇರಿಯ ಪೈಕಳು ಬಂದರೂ 'ಅರಗಾಗರಪ್ಪೊ' ಎಂದು ಹೇಳುತ್ತಾ ಊರು ದಾಟಬೇಕಿತ್ತು. ದೇವರಾಜನ ಚಿಕ್ಕಪ್ಪ ಪುಸುಗನ ಕಾಲಿನಲ್ಲಿ ಕಲ್ಲೊತ್ತ ಇದ್ದು ಯಕ್ಕಡ ಇಲ್ಲದೆ ಹೆಜ್ಜೆ ಊರಲು ಆಗುತ್ತಿರಲಿಲ್ಲ. ಅವನು ಸುತ್ತಿ, ಬಳಸಿ ಹೋಗಲು ಆಗದೆ, ಮೆಟ್ಟಿದ್ದ ಯಕ್ಕಡಗಳನ್ನು ಕಳೆದು, ಹೊಟ್ಟೆಯಲ್ಲಿ ಇಟ್ಟುಕೊಂಡು, ಊರು ದಾಟಿ ಆಮೇಲೆ ಅತ್ತ ಇತ್ತ ನೋಡಿ ಯಕ್ಕಡ ಮೆಟ್ಟಿ ನಡೆಯುತ್ತಿದ್ದ.

ಒಂದು ದಿನ ಆ ಕೇರಿಯ ಜನ ಇವನ ಕೃತ್ಯವನ್ನು ಪತ್ತೆ ಹಚ್ಚಿ, ಅವನಿಗೆ ಹೊಡೆದು ಹಣ್ಣುಗಾಯಿ ನೀರುಗಾಯಿ ಮಾಡಿದರು. ಅವತ್ತೆ ಆಯ್ತು, ಪುಸುಗ ಆ ಊರಿನ ಅಂಕವನ್ನು ಮೆಟ್ಟುವುದು ಬಿಟ್ಟ. ಆ ಕುದಿಗೆ ದೇವರಾಜನನ್ನು ಓದಿಸಲೇಬೇಕು ಎನ್ನುವ ಛಲ ಹುಟ್ಟಿತು. ದೇವರಾಜನನ್ನು ಹೆಗಲ ಮೇಲೆ ಕೂರಿಸಿಕೊಂಡು ಒಂದೂವರೆ ಮೈಲಿ ಸುತ್ತೀ, ಬಳಸಿ ಗೌರಿಪುರಕ್ಕೆ ಬಿಟ್ಟು ಬರುತ್ತಿದ್ದ. ದೇವರಾಜನಿಗೆ, 'ನೀನು ಚನ್ನಾಗಿ ಓದ್ಲಮಗ. ನಾವು ಚಿತ್ತಿ ಬೆಳೆಯದೆಲ್ಲಾ ಅದನೇ ಆದರೂ ಸರಿಯ, ವರ್ಷಕ್ಕೆ ಹತ್ತುರಾಸು, ಆಡು, ಕುರಿ ಮಾರದಾಗಲಿ, ಚನ್ನಾಗಿ ಓದಿ ದೊಡ್ಡ ಕೆಲಸಕ ಸೇರಕಂಡು ನೀನು ರಾಜಾರೋಸ್ನಾಗಿ ಯಕ್ಕಡ ಹಿಕ್ಕೊ, ನಮ್ಮ ಜನಕ್ಕೂ ಯಕ್ಕಡ• ಹಿಕ್ಕಳಂಗೆ ಮಾಡು. ಇಂತವರ ಮಗ ಇಂತಿಂತ ಕೆಲಸ ಮಾಡಿ ಹೆಸರೂಸಗೆ ತಕತಾವನೆ ಅಂತ ಜನ ಮಾತಾಡಕಂಡರೆ ಅದೇ ನಮಗ ಯಚ್ಚೊಳ' ಎನ್ನುತ್ತಿದ್ದ. ಉಸ್ಸೊ ಉಸ್ಸೊ ಎನ್ನುತ್ತಾ ಕುರ್ಚಿಯಲ್ಲಿ ಮುದುರಿ ಕುಳಿತಿದ್ದ ಚಿಕ್ಕಪ್ಪನನ್ನು ನೋಡಿ ದೇವರಾಜು ಕಣ್ಣೀರು ಕೆಡುಗಿದ.

ಅಷ್ಟೊತ್ತಿಗೆ ಒಳಗಿನಿಂದ ಅಡುಗೆಯಾಯಿತು ಎಂದು ಸುದ್ದಿ ಬಂತು. ದೇವರಾಜು ಏಳು ಚಿಕ್ಕಪ್ಪ ಊಟ ಮಾಡು ಎಂದ. ಚಿಕ್ಕಪ್ಪ ಕುರ್ಚಿಯಿಂದ ಕೆಳಗಿಳಿದು ಅಲ್ಲೆ ನೆಲದಲ್ಲಿ ಊಟಕ್ಕೆ ಕುಳಿತ. ಕೈ ಕಾಲು ತೊಳೆಯುವೆ ಬಾ ಎಂದಾಗ; ಇಲ್ಲ ಬರಾಗ ತೊಳಕ ಬಂದಿವ್ನಿ ಎಂದ. ಆದರೂ ಕೈ ತೊಳೆಯದೆ ಅದ್ದೇಗೆ ಊಟ ಮಾಡುವುದು ಎಂದು ಅಲ್ಲಿಗೇ ಒಂದು ತಟ್ಟೆ ಕೊಡಿಸಿ, ಕೈ ತೊಳೆಸಿ, ಊಟಕ್ಕೆ ಬೇರೆ ತಟ್ಟೆ ಕೊಡಿಸಿದ. ತಟ್ಟೆಗೆ ಮುದ್ದೆ, ಮಾಂಸದ ಸಾರು ಬಡಿಸಿದರು. ಪುಸುಗ ಗಬಗಬನೆ ತಿಂದು, ತಿರುಗ ಮುದ್ದೆ ಕೇಳಿ ಹಾಕಿಸಿಕೊಂಡ.



ಮಕ್ಕಳು ಅಬ್ಬಬ್ಬಾ ಎಂದು ಬೆರಗುಗಣ್ಣಿನಿಂದ ನೋಡುತ್ತಿದ್ದರು. ಸೊಸೆ ತಟ್ಟೆ ತುಂಬ ಅನ್ನ ಬಡಿಸಿ, ಸಾರು ಬಿಟ್ಟಳು. ಪುಸುಗ ತಲೆಬಗ್ಗಿಸಿ ಬಡಿಸಿದ್ದನ್ನೆಲ್ಲಾ ಉಂಡ. ದೇವರಾಜು ಅದೆಷ್ಟು ದಿನವಾಯಿತೊ ಪಾಪ ಹೀಗೆ ಊಟ ಮಾಡಿ, ಬಡಿಸಿ, ಬಡಿಸಿ ಎಂದು ಹೆಂಡತಿಗೆ ಹೇಳಿ ಬಡಿ

ಸುತ್ತಿದ್ದ. ಪುಸುಗ 'ಸಾಕುಕಣಪ್ಪ' ಎಂದು ಚೊಂಬು ನೀರು ಕುಡಿದು, ತಡಕಾಡುತ್ತಾ ಬಂದು ಕುರ್ಚಿಯ ಮೇಲೆ ಕುಳಿತ.

ದೇವರಾಜನ ಹೆಂಡತಿ 'ಇದೆಲ್ಲಾ ಆಯ್ತು ಈಗ ಅವರನ ಎಲ್ರಿ ಮಲಗುಸದು?' ದೇವರಾಜು, 'ಅಲ್ಲೆ ವರಂಡಾದಲ್ಲೆ ಮನಿಕತನೆ, ಹಾಸಕಳಕೆ ಒಂದು ಮಂದಲಿಗೇನು, ಒಂದು ಬೆಡ್ ಶೀಟ್‌ನೂ ಕೊಡು' ಎಂದ. ಮಂದಲಿಗೆಯ ಮೇಲೆ ಬಂದು ಕುಳಿತ ಚಿಕ್ಕಪ್ಪನಿಗೆ ದೇವರಾಜು, 'ಒಂದಗಿಂದ ಮಾಡಂಗಿದ್ರೆ ಈಗಲೇ ಮಾಡ ಬುಡು, ಲೈಟಾಕಳಕೆ ನಿನಗೆ ಗೊತ್ತಾಗಲ್ಲ' ಎಂದ. ಚಿಕ್ಕಪ್ಪ 'ಮಾಡಲ್ಲಕಣಪ್ಪ' ಎಂದ. 'ರಾತ್ರಿ ಏನಾದರು ಎದ್ದರೆ'? 'ಏಳಲ್ಲಕಣ ಹೋಗು' ಎಂದ. ದೇವರಾಜು ಅನುಮಾನದಿಂದಲೇ ಮಕ್ಕಳನ್ನು ಕರೆದುಕೊಂಡು ಒಳಗೆ ಹೋದ. ಇನ್ನೂ ಹೊರಗಿನ ಬಾಗಿಲು ಬೋಲ್ಟ್ ಮಾಡಿರಲಿಲ್ಲ. ಒಳಗಿದ್ದವರಿಗೆ ಕ್ಷಣದಲ್ಲಿ ಹೊರಗಿನ ಬಾಗಿಲು ತೆಗೆದ ಸದ್ದಾಯಿತು. ಹೊರಗೆ ಬಂದ ದೇವರಾಜನ ಹೆಂಡತಿ, 'ರ್ರೀ ರ್ರೀ ಬನ್ರಿ, ಬೇಗ ಬನ್ರಿ, ಆಚೆಗೋಗವರೆ' ಎಂದು ಕೂಗಿಕೊಂಡಳು.

ದೇವರಾಜ ಹೊರಗಡೆ ಓಡಿಬರುವಷ್ಟರಲ್ಲಿ ಚಿಕ್ಕಪ್ಪ ಆಗಲೇ ಬಾಗಿಲು ದಾಟಿ, ತಡಕಾಡುತ್ತಾ ರಸ್ತೆ ದಾಟಿದ್ದ. ಎಡದಗೈಯ್ಯನ್ನು ಎಡದ ಸೈಡಿನ ಚಡ್ಡಿಗೆ ಹಾಕಿ ಮೇಲೆತ್ತುತ್ತಾ ಎದುರು ಮನೆಯ ಗೇಟಿಗೆ ಸರಿಯಾಗಿ ಹೋಗಿ ಕುಳಿತುಕೊಳ್ಳುತ್ತಿದ್ದ. ದೇವರಾಜ ಚಕ್ಕನೆ ಹಾರಿ 'ಚಿಕ್ಕಪ್ಪ, ಬಾ ಈ ಕಡೆ, ಅದು ಬೇರೆಯವರ ಮನೆ ಬಾಗಲು, ಅಲ್ಲಿಗ್ಯಾಕೆ ಹೋದೆ? ನಾನು ಆಗಲೇ ಕೇಳದರೆ ಮಾಡಲ್ಲ ಅಂದೆ. ಬಾ ಇತ್ತಗೆ' ಎಂದು ಅವನ ರಟ್ಟೆ ಹಿಡಿದು ತಮ್ಮ ಮನೆಯ ಮೂಲೆಗೆ ಬಿಟ್ಟ. ಚಿಕ್ಕಪ್ಪ ಅಲ್ಲೆ ಕುಳಿತ. ಬಾಗಿಲಲ್ಲಿ ಬಗ್ಗಿ ನೋಡುತ್ತಿದ್ದ ದೇವ ರಾಜನ ಹೆಂಡತಿ 'ಇದೊಳ್ಳೆ ಕತೆಯಾಯಿತು ಯಾರಾದರೂ ನೋಡಿದ್ರೆ, ನಮ್ಮ ಮರ್ಯಾದೆ ಏನು, ಇನ್ನು ರಾತ್ರಿಯಲ್ಲಾ ಏನು ಮಾಡತಾರೊ ಏನೊ' ಎನ್ನುತ್ತಿದ್ದಳು. ಮಕ್ಕಳೆಲ್ಲಾ ಕಿಲಕಿಲನೆ ನಕ್ಕರು. ಇವರೂ ಅವರ ಜೊತೆ ನಗುತ್ತಾ ಒಳಕ್ಕೆ ಬಂದರು.

ಒಂದ ಮಾಡಲು ಕುಳಿತ ಚಿಕ್ಕಪ್ಪ ಎರಡು ನಿಮಿಷವಾದರೂ ಮೇಲೆ ಏಳಲೇ ಇಲ್ಲ. ಅವನು ಮಾಡಿದ್ದ ಉಚ್ಚೆ ಎರಡು ಅಡಿ ಸುತ್ತಳತೆಯಲ್ಲಿ ಹರಿದಾಡಿತ್ತು. ಇಷ್ಟೊಂದು ತುಂಬಿಕೊಂಡೂ ಹೋಗಲ್ಲ ಅಂತಿದನಲ್ಲಪ್ಪ; ಇನ್ನು ನಾವು ಬೋಲ್ಟ್ ಮಾಡಿದರೆ ರಾತ್ರಿ ಇಡೀ ಇವನ ಕತೆ ಏನಪ್ಪ. ಹೆಂಡತಿ 'ಇದೊಳ್ಳೆ ಗ್ರಹಚಾರ ಕಂಡ್ರಿ,' ಎಂದಳು. ಆದಂಗಾಗಲಿ, ಮೊದಲು ಬೆಳಗಾಗಲಿ ಬನ್ನಿ, ಎಂದು ಎಲ್ಲರನ್ನು ಕರೆದುಕೊಂಡು ಲೈಟ್ ಆರಿಸಿ ಮಲಗಲು ಹೋದ. ಚಿಕ್ಕಪ್ಪ ಉಸ್, ಉಸ್ ಎನ್ನುತ್ತಾ ತಾನು ಉಟ್ಟಿದ್ದ ಪಂಚೆಯ ಹೊಸ್ಸು ಕೊಂಡು ಮಲಗಿದ.

ಬೆಳಗ್ಗೆ ಇನ್ನೂ ಮಲಗೇ ಇದ್ದ ದೇವರಾಜನ ಹತ್ತಿರ ಹೆಂಡತಿ ಓಡಿಬಂದು 'ರೀ ಏಳ್ರಿ, ಏಳ್ರಿ, ನನ್ನ ಕೈಲಿ ನೋಡಕ್ಕಾಗಲ್ಲ ಏಳ್ರಿ' ಎಂದು ಬಡಬಡಿಸಿದಳು. ರಾತ್ರಿ ನಡೆದಿದ್ದ ಘಟನೆಯನ್ನು ನೆನೆಸಿಕೊಂಡ ದೇವರಾಜು ಏನೊ ಕತೆಯಾಗಿದೆ ಎಂದು ದಡಬಡನೆ ಎದ್ದ. ಎದ್ದವನನ್ನು ಹೆಂಡತಿ ಸ್ನಾನದ ಮನೆಯ ಮುಂದೆ ಕರೆದುಕೊಂಡು ಹೋಗಿ ನಿಲ್ಲಿಸಿದಳು. ಕಣ್ಣು ಕಾಣದ ಚಿಕ್ಕಪ್ಪ ಮೇಲೆಯೇ ಕಕ್ಕಸ್‌ಗೆ ಹೋಗಿ ಬಂದುಬಿಟ್ಟಿದ್ದ. ನೀರೂ ಹಾಕಿರಲಿಲ್ಲ. ಮಕ್ಕಳೂ ಮೂಗನ್ನು ಹಿಡಿದು ಓಡಾಡುತ್ತಿದ್ದವು. ಹೊರಗೆ ವರಾಂಡ ದಲ್ಲಿ ಕುಳಿತಿದ್ದ ಪುಸುಗನನ್ನು ಬಗ್ಗಿ ಬಗ್ಗಿ ನೋಡಿ ಬರುತ್ತಿದ್ದವು.

ಹೆಂಡತಿ 'ಕಕ್ಕಸು ಮನೇನ ಆಚೆ ಕಟ್ಸಿ ಅಂದರೆ ಕೇಳಲಿಲ್ಲ. ನೀರು ಮನೆ ಒಳಗೇ ಮಡಗಸ್ಬುಟ್ರಿ. ಈಗ ಅಲ್ಲಿ ಹೇಗ್ರಿ, ಕೂತಗ ಸ್ನಾನಮಾಡದು?' 'ಅತ್ತೆ ಮಾವಂದಿರ ಸೇವೆ ಅಂದರೆ ಇದೇ ಕಣೆ, ಮಾಡಬೇಕು, ಮಾಡು'. 'ಥೂ ಹೋಗ್ರಿ, ಅದೇನು ನೀವೆ ತೊಳೀರಿ'. ದೇವರಾಜು,

ಮೆಲ್ಲಗೆ ಮಾತಾಡಿ ಕೇಳಿಸ್ಕಂಡರು ಎಂದ. 'ನೋಡ್ರಿ, ಬಂದವರಿಗೆ ಎಷ್ಟು ಸಲ ಬೇಕಾದ್ರು ಬೇಯಿಸಾಕು ಅನ್ನಿ, ಬೇಯಿಸ್ತಿನಿ. ಆದರೆ ಈ ಏಲು ಉಚ್ಚೆ ಬಾಚೋದು ಮಾತ್ರ ನನ್ನ ಕೈಲಿ ಆಗಲ್ಲ' ಎಂದು ನೇರವಾಗೇ ಹೇಳಿದಳು. ದೇವರಾಜು, ಈಗ ಆಯ್ತಲ್ಲ ಬುಡು, ಇದ್ದರೆ ಇನ್ನೊಂದು ಗಳಿಗೆ ಇರಬಹುದು, ಒಂದಷ್ಟು ತಿಂಡಿಗಿಂಡಿ ಮಾಡಿ ಆಕ್ಬುಡು ಎಂದ. ಅವಳು ಸೀರೆಯನ್ನು ಮಂಡಿಯ ವರೆಗೆ ಎತ್ತಿ ನಡುವಿಗೆ ಬಲವಾಗಿ ಬಿಗಿದು ಮನೆಯಲ್ಲಿದ್ದ ಫಿನಾಯಿಲ್‌ನೆಲ್ಲಾ ಹೊರಗೆ ನಿಂತೇ ಒಳಕ್ಕೆ ಎರಚಿದಳು. ಬಕೆಟ್ ಬಕೆಟ್‌ಗಟ್ಟಲೆ ನೀರು ಸುರಿದಳು. ಮನೆಯ ತುಂಬೆಲ್ಲಾ ಗಂಧದಕಡ್ಡಿ ಹತ್ತಿಸಿಟ್ಟಳು.

ಅಡುಗೆ ಮನೆಗೆ ಬಂದವಳೆ ಚಕ ಚಕನೆ ಉಪ್ಪಿಟ್ಟು ಹುರಿದು ರೆಡಿ ಎಂದಳು. ದೇವರಾಜು ತಿಂಡಿ ತಿನ್ನೇಳು ಚಿಕ್ಕಪ್ಪ ಎಂದ. ಅವನು ಉಸ್ ಉಸ್ ಎನ್ನುತ್ತಾ, ಶಿವಾ ಎಂದು ಕುರ್ಚಿಯಿಂದ ಕೆಳಗಿಳಿದು ಕುಳಿತ. ಹೆಂಡತಿ ಒಳಗಿದ್ದುಕೊಂಡೇ ತಕಂಡೋಗ್ರಿ ಎಂದಳು. ದೇವರಾಜು ಉಪ್ಪಿಟ್ಟಿನ ತಟ್ಟೆಯನ್ನು ತಂದು ಚಿಕ್ಕಪ್ಪನ ಮುಂದೆ ಇಟ್ಟು ನೀರು ಮಡಗಿದ. ಮಕ್ಕಳು ಇಣುಕಿ ಇಣುಕಿ ನೋಡುತ್ತಲೇ ಇದ್ದವು. ಅವನು ಉಪ್ಪಿಟ್ಟು ತಿಂದು ಮುಗಿಸಿ ಕೈ ತೊಳೆದ. ಒಂದು ಮಗು, 'ಅಮ್ಮ, ಅಮ್ಮ' ಎಂದು ಓಡಿಬಂದು 'ಉಪ್ಪಿಟ್ಟು ತಿಂದ್ಬುಟ್ಟು ಕೈನ ನಮ್ಮ ಕುರ್ಚಿಗೆ ಆಕೆಲ್ವ ಆ ಬಟ್ಟೆಗೇ ಹೊರಸ್ಬುಟ್ಟ' ಎಂತು. ದೇವರಾಜು ಲೇ ಸುಮ್ನಿರೋ ಎಂದು ಗದರಿಸಿದ. ಮತ್ತೊಂದು ಪಿಳ್ಳೆ 'ಹ್ಞೂಂ ಕಣಪ್ಪ, ಕೈನ ನೆಲಕ್ಕೂ ಹೊರಸ್ದ' ಎಂತು. ಸಾಕು ಸುಮ್ನಿರ್ರೋ ಎಂದು ಅವರಮ್ಮ ಕಿರುಚಿಕೊಂಡಳು.

ದೇವರಾಜು ಮಧ್ಯಾಹ್ನ ಮನೆಗೆ ಊಟಕ್ಕೆ ಬಂದಾಗ ಹೊರಗೆ ಚಿಕ್ಕಪ್ಪನ ಚಪ್ಪಲಿಗಳಿರಲಿಲ್ಲ. ಸದ್ಯ ಎನ್ನುವಂತಾದರೂ ಒಳಗೆ ಹೋದಾಗ ಬೇಜಾರಾಯಿತು. ಹೆಂಡತಿ ಸದ್ಯ, ಹೋದರು ಎಂದಳು. ಹೋಗುವಾಗ ಒಂದು ತಟ್ಟೆ, ಲೋಟ, ಮಂದಲಿಗೆ, ಬೆಡ್‌ಶೀಟ್ ಕೇಳಿದರು, ಕೊಟ್ಟೆ ಎಂದಳು. ದೇವರಾಜು 'ಐ ಕ್ಯಾಂಪಲ್ವ', ಮಲಗಕ್ಕೆ ಬೇಕಲ್ಲ, ಕೊಟ್ಟಿದ್ದು ಒಳ್ಳೆದೆ ಆಯ್ತುಬಿಡು. ಆದು ಸರಿ, ಮನೆ ಇನ್ನೂ ಗಮ್ ಅನತಾನೆ ಇದೆ'. ಹೆಂಡತಿ, 'ಸುಮ್ನಿರಿ, ಜ್ಞಾಪಿಸ ಬೇಡಿ, ನಾನು ಇನ್ನೂ ಬಾಯಿಗೆ ನೀರು ಬಿಟ್ಟಿಲ್ಲ. ಮತ್ತೆ ನಾಳೆ ನಾಳಿದ್ದು ತಿರುಗಿ ಬಂದರೆ ಯಂಗಪ್ಪ ಅಂತ ಯೋಚನೆ ಆಗಿದೆ'. 'ಬಂದರೆ ಅನ್ನದೇನು ಬಂದೇ ಬತ್ತನೆ'. 'ನಾಳೆ ಬಂದೇಬುಟ್ರೆ ಏನ್ರಿ ಮಾಡದು?' 'ನಾವು ಊರಲ್ಲಿ ಇರಲ್ಲ ಅಂತ ಹೇಳ್ಬುಡು. ಅಥವಾ ಊಟ ಮಾಡಕಂಡು ಎಲ್ಲಾದ್ರು ಹೊರಗಡೆ ಹೋಗಿ ಮಲಕಳಿ' ಅಂತ ಹೇಳು. 'ಅವೆಲ್ಲಾ ಯಾಕ್ರಿ, ನೇರವಾಗಿ ಊರಿಗೇ ಹೋಗ್ರಿ, ಅಂದರೆ ಯಂಗೆ?' 'ಅರೆ ನಮ್ಮನೆ, ನಮ್ಮಿಷ್ಟ, ಏನು ಬೇಕಾದ್ರು ಹೇಳಬಹುದಲ್ಲ?' 'ಪಾಪ' ಎಂದಳು. 'ನನಗೂ ಪಾಪ ಅಂತಲೇ ಅನ್ಸದು ಆದರೆ ಈಗ ಪಾಪ ಪೀಪಿ ನೋಡಕ್ಕಾಗಲ್ಲ. ಇವತ್ತೇ ಇಂಗೆ, ನಾಳೆ ಮಲಗೇಬಿಟ್ರೆ, ಮಾಡು ವರು ಯಾರು? ಅದೆಲ್ಲಾ ಬ್ಯಾಡ, ನಾವು ಇರಲ್ಲ ಊರಿಗೆ ಹೋಗತಾ ಇದೀವಿ ಅಂತಲೇ ಹೇಳ್ಬುಡು' ಎಂದ ದೇವರಾಜ.

ಆಪರೇಷನ್ ಮಾಡಿಸಿಕೊಂಡು ಪುನುಗ ತಿರುಗಿ ಮನೆಗೆ ಬಂದ. ಆಗ ಮಧ್ಯಾಹ್ನ ದೇವ ರಾಜ ಮನೆಯಲ್ಲಿರಲಿಲ್ಲ. ಬಾಗಿಲು ತೆಗೆದ ಸೊಸೆ ಪುನುಗನಿಗೆ ಬನ್ನಿ, ಹೋಗಿ ಎನ್ನಲಿಲ್ಲ. ಪುನುಗ ಒಳಗೆ ಬಂದು ಕುರ್ಚಿಯ ಮೇಲೆ ಕುಳಿತು ಉಸ್‌ಪುಸ್ ಎನ್ನುತ್ತಿದ್ದ. ಬಂದವನಿಗೆ ಸೊಸೆ ಊಟಕ್ಕೆ ಕೊಟ್ಟಳು. ಊಟ ಮಾಡಿ ಕುರ್ಚಿಯಲ್ಲಿ ಕುಳಿತ ತಕ್ಷಣವೇ ಅವನ ಹತ್ತಿರ ಹೋಗಿ 'ಈಗ ನಾವೆಲ್ಲಾ ಊರಿಗೆ ಹೊಯತಾ ಇದ್ದೀವಿ' ಎಂದಳು. ಪುನುಗ ಮೆಲ್ಲಗೆ ಕಣ್ಣು ಸರಿಸಿನೋಡಿ 'ಅಂಗವ್ವಾ...!! ದೇವರಾಜ ಇರತನಲ್ಲ...!!' ಇಲ್ಲ, ಅವರೂ ನಮ್ಮ ಜೊತೆಗೇ ಬರತರೆ

ಎಂದಳು. 'ಇನ್ನೊಂದು ದಿಸ ಇಲ್ಲೇ ಇದ್ದು, ಕಣ್ಣು ಬಿಚ್ಚಸ್ಕಂಡು ಒಂದೇ ಸಲ ಹೊಂಟೋಗವ ಅನಕಂಡಿದ್ದಿ.' 'ಇಲ್ಲ ಈಗ ನಾವು ಹೊರಟಿದ್ದೀವಿ.' ಕ್ಷಣ ಸುಮ್ಮನಿದ್ದ ಪುನುಗ, 'ಊರಲ್ಲಿ ಹಾಸಗಳಕ್ಕ ಮಂದಲಿಗೆ ಇಲ್ಲ, ಹೊಸ್ಯಕಳಕ್ಕ ರಗ್ಗಿಲ್ಲ. ತಟ್ಟೆ ಲೋಟ ಎಲ್ಲಾನು ತಕಹೋಯ್ತಿನಿ' ಎಂದ. ಹೋ ಹೋ ತಕಂಡೋಗಿ ಎಂದಳು ಸೊಸೆ. ಪುನುಗ ಶಿವ ಶಿವ ಎಂದು ಎಲ್ಲವನ್ನೂ ತಬ್ಬಿಕೊಂಡು ಹೊರಟುಹೋದ.

ಊರಿಗೆ ಹೋಗಿದ್ದನೋ ಬಿಟ್ಟನೋ ಅಂತು ಮೂರು ದಿನಗಳ ಬಿಟ್ಟುಕೊಂಡು 'ಕಣ್ಣಿನ ವಲಗೆ ಬಿಚ್ಚಸಕ್ಕೆ ಬಂದಿದ್ದಿ' ಎಂದು ತಿರುಗಿ ಮನೆಗೆ ಬಂದ. ಬಂದವನಿಗೆ ದೇವರಾಜು ಬಾಗಿಲು ತೆಗೆದು, ಬೇಕಾಬಿಟ್ಟಿಯಾಗಿ ಬಾ, ಬಾ ಎಂದು, ಮನೆಯ ಒಳಕ್ಕೆ ಹೊರಟುಹೋದ. ಪುನುಗ ಉಸ್ ಉಸ್ ಎನ್ನುತ್ತಾ ಕುರ್ಚಿಯ ಮೇಲೆ ಕುಳಿತುಕೊಂಡ. ಎಷ್ಟೊತ್ತಾದರೂ ಒಬ್ಬರೂ ಈಚೆ ಬರಲೇ ಇಲ್ಲ. ಒಳಗೆ ಹೆಂಡತಿ ಗಂಡನಿಗೆ 'ಏನ್ರಿ ಮೂರು ಮೂರು ದಿನಕ್ಕೂ ಇಂಗೆ ಬರತಾ ಇದ್ದರೆ' ಎಂದಳು. 'ಬಂದಾಗಲೆಲ್ಲಾ ಬನ್ನಿ, ಹೋಗಿ ಅಂತ ಕೈಗೆ ಕಾಸು ಕೊಟ್ಟರೆ ಬರದೆ ಇನ್ನೆಲ್ಲಿಗೆ ಹೊಯತರೆ; ಆಮೇಲೆ ಒಂದು ದಿನ ಇಲ್ಲೇ ಇರತಿನಿ ಅಂತರೆ'. 'ಈಗ ಬರದು ಬಂದವನೆ ಊಟಕ್ಕೆ ಆಕ್ಬುಡು. ಮಧ್ಯಾಹ್ನ ಅವನೇ ಊರಿಗೆ ಹೋಗಬಹುದು' ಎಂದು ಕೆಲಸಕ್ಕೆ ಹೊರಟುಹೋದ.

ಪುನುಗ ಊಟಮಾಡಿ ಶಿವ ಶಿವ ಎಂದು ಕುರ್ಚಿಯ ಮೇಲೆ ಕುಳಿತವನು ಮಧ್ಯಾಹ್ನವಾದರೂ ಜಾಗಬಿಟ್ಟು ಅಲ್ಲಾಡಲಿಲ್ಲ. ಸೊಸೆಗೆ ಇದು ಯಾಕೊ ನೆಟ್ಟಗಾಗುವುದಿಲ್ಲ ಎನಿಸಿತು. ಇನ್ನೂ ಸ್ವಲ್ಪ ಹೊತ್ತು ನೋಡಿದಳು. ಪುನುಗನಿಂದ ಹೊರಡುವ ಸೂಚನೆ ಕಾಣಲಿಲ್ಲ. ಕೊನೆಗೆ ಅವನ ಹತ್ತಿರ ಹೋಗಿ 'ನೋಡಿ, ನಾನು ಸ್ವಲ್ಪ ಸಿಟಿಗೆ ಹೋಗಬೇಕು' ಎಂದಳು. ಬರೋಗವ್ವ ಇಲ್ಲೆ ಇರತಿನಿ ಎಂದ ಪುನುಗ. 'ನಾ ಬರದು ಎಷ್ಟೊತ್ತಯತದೊ ಏನೊ; ನಿಮ್ಮ ಮಗ ಬಸ್ ಚಾರ್ಜಿಗೆ ಕಾಸು ಕೊಟ್ಬುಡು ಅಂತ ಕೊಟ್ಟವರೆ, ತಕಳಿ' ಎಂದು ಹತ್ತು ರೂಪಾಯಿ ಕೊಟ್ಟಳು. ಪುನುಗ ತಲೆ ಎತ್ತಿ, ಒಂದು ಸಲ ಅವಳನ್ನು ನೋಡಿ, ಹಸುಮಗುವಿನಂತೆ ದುಡ್ಡಿಗೆ ಕೈಯೊಡ್ಡಿದ. ಶಿವ ಎಂದು ಎದ್ದವನೆ ಆಚೆಗೆ ಹೊರಟುಹೋದ. ಇವರೆಲ್ಲಾ ಎಲೆಲ್ಲೊ ಸುತ್ತಾಡಿಕೊಂಡು ರಾತ್ರಿ ಮನೆಗೆ ಬಂದಾಗ, ಪುನುಗ ಪಕ್ಕದ ಮನೆಯ ಜಗುಲಿಯ ಮೇಲೆ ಉಟ್ಟಿದ್ದ ಪಂಚೆಯ ಸುತ್ತುಕೊಂಡು ಮಲಗಿದ್ದ. ಆ ಮನೆಯವರು ನಿನ್ನ ಮಗ ಬಂದನಲ್ಲ ಎದ್ದೋಗಯ್ಯ ಎಂದರು. ಅವನು ತಿರುಗಿ ಇಲ್ಲಿಗೆ ಬರಲಿಲ್ಲ.

ಊರಿಗಾದರು ಹೋಗಿ ಏನು ಮಾಡುತ್ತಾನೆ! ಅಲ್ಲಿ ಹೆಂಡತಿ-ಮಕ್ಕಳೇ; ಅಣ್ಣ-ತಮ್ಮಂದಿರೇ; ಆಸ್ತಿಪಾಸ್ತಿ ಏನೂ ಇಲ್ಲ. ತಾಯಿಯ ಸ್ಥಾನದಲ್ಲಿದ್ದ ಅತ್ತಿಗೆ ಖಾಯಿಲೆ ಬಡಿದು ಸತ್ತಾಗಲೇ ಮನೆ ಮುರಿದಂತಾಗಿತ್ತು. ಅಣ್ಣ ಮಂಕಾದ. ಆ ವರುಷವೇ ಬರಗಾಲ. ಕೆರೆಕಟ್ಟುಗಳೆಲ್ಲಾ ಒಣಗಿ ಕುಡಿಯಲು ನೀರಿಗೇ ತುಟುಕಟ್ಟಾಯಿತು. ಅದರಲ್ಲಿದ್ದ ಮೀನು, ಮಿಡಚೆಗಳು ವಿಲವಿಲ ಒದ್ದಾಡಿ ಜೀವ ಬಿಟ್ಟಾಗ ಅವುಗಳನ್ನು ಹದ್ದು, ಕಾಗೆಗಳು, ನಾಯಿ ನರಿಗಳು ತಿಂದು ತಮ್ಮ ಜೀವ ಉಳಿಸಿಕೊಂಡಿದ್ದವು. ನೆಲದ ಬೇರಿಗೆ ಗೆದ್ದಲಿಡಿದು, ಚಿಗುರು ಒಣಗಿ, ಹಸಿರಿಲ್ಲದೆ ಅವುಗಳನ್ನು ನಂಬಿದ್ದ ಹಸುಕರುಗಳು ಬತ್ತೋದವು. ಸೊಪ್ಪು ಸೆದೆ ತಿಂದು ಬದುಕುತ್ತಿದ್ದ ಜನಕ್ಕೂ ಬದುಕು ಕಷ್ಟವಾಯಿತು. ಮಳೆ ಬರಲೇ ಇಲ್ಲ. ಜನ,





ದನಗಳೆಲ್ಲಾ ಒಣಗಿ ಊರು ಸೊಣಗಳ ಬೀಡಾಯಿತು. ಪಕ್ಷಿಗಳು ಸತ್ತರೆ ನಾಯಿಗಳು, ನಾಯಿಗಳು ಸತ್ತರೆ ಪಕ್ಷಿಗಳು ತಿನ್ನುತ್ತಿದ್ದವು. ಹಸುಕರುಗಳು ನೆಲಕೆ ಗೋಣು ಬಿಟ್ಟುಕೊಂಡು ನಿಂತಿದ್ದರೆ ಅವುಗಳ ಮೇಲೆ ಹದ್ದುಗಳು ಹಾರಾಡುತ್ತಿದ್ದವು.

ಇಂಥ ಕಾಲದಲ್ಲಿ ಮನೆಮಂದಿಯನ್ನೊ ಸಾಕಿದ್ದ ಕೆಂದಸು ಮೂಳೆಚಕ್ಕಳವಾಗಿ ಸಾಯುವ ಸರದಿಯಲ್ಲಿತ್ತು. ಅದು ಹಸುವಾಗಿ ಹಾಲು ಕೊಡುತ್ತಾ, ಎತ್ತಾಗಿ ಹೊಲದಲ್ಲಿ ದುಡಿಯುತ್ತಿತ್ತು. ಅದು ತನ್ನ ಕಣ್ಣ ಮುಂದೆ ಸಾಯುವುದನ್ನು ಪುಟ್ಟಗನ ಅಣ್ಣ ಬೋರಣ್ಣ ನೋಡಲಾಗದೆ ಸಂಕಟಪಡುತ್ತಿದ್ದ. ಅದನ್ನು ಕಣ್ಣಿಗೆ ಮರೆಯಾಗಿ, ನಾಕಾರು ಊರುಗಳ ದಾಟಿ, ಹಳ್ಳಕೊಳ್ಳಗಳ ಹತ್ತಿ ಇಳಿದು, ದೂರ, ಬಲುದೂರ ಹೊಡೆದುಬಂದ. ಬಂದವನು ಅದು ಮನೆಯ ಮುಂದೆ ನಿಲ್ಲುತ್ತಿದ್ದ ಜಾಗ, ಅದನ್ನು ಕಟ್ಟುತ್ತಿದ್ದ ಗೂಟ, ಎಲ್ಲವನ್ನೂ ನೋಡಿ ಮುಸು ಮುಸು ಅಳುತ್ತಿದ್ದ. ಅತ್ತೂ, ಅತ್ತೂ ಸಾಕಾಗಿ ಅದು ತನ್ನ ಮುಂದೆ ಸಾಯುವುದು ತಪ್ಪಿತಲ್ಲ ಎಂದು ಸಮಾಧಾನ ಮಾಡಿಕೊಂಡ. ಒಂದು ದಿನ ಮುಂಜಾನೆ ಎದ್ದು ಬಾಗಿಲು ತೆಗೆದಾಗ, ಬಲು ದೂರ ಹೊಡೆದು ಬಂದಿದ್ದ ಕೆಂದಸು ತಿರುಗಿ ಬಂದು ಮನೆಯ ಮುಂದೆ ನಿಂತಿತ್ತು.

ಬೋರಣ್ಣ ಓಡೋಡಿ ಕೆಂದಸುವನ್ನು ತಬ್ಬಿಕೊಂಡು ಬಿಕ್ಕಿ ಬಿಕ್ಕಿ ಅತ್ತ. ನಿನ್ನ ನಿಯತ್ತಿನ ಮುಂದೆ ನಾನು ಸಣ್ಣವನಾದೆ ಎಂದ. ಸತ್ತರೆ ಒಟ್ಟಿಗೆ ಸಾಯುವ ಅನ್ನೋ ನಿನ್ನ ನಿಯತ್ತು ನನಗೆ ಬರನಿಲ್ವಲ್ಲ? ನಾನು ದ್ರೋಹಿ, ನಾನು ದ್ರೋಹಿ ಕಣವ್ವ ಎಂದು ನೇಣು ಬಿಗಿದುಕೊಂಡು ಸತ್ತೋದ. ಈ ಬೋರಣ್ಣನ ಮಗಳೇ ದೇವಮ್ಮ ಊರಿನಲ್ಲಿರುವವಳು, ಮಗ ದೇವರಾಜನೇ ಮೈಸೂರಿನಲ್ಲಿರುವವನು. ಊರಿನಲ್ಲಿ ಉಳಿದದ್ದು ಒಂದೇ, ಪುಟ್ಟಗನ ಸಂಸಾರ. ಒಂದಷ್ಟು ದಿನ ಜೀವ ಹಿಡಿದುಕೊಂಡಿತ್ತು. ಸ್ವಲ್ಪ ದಿವಸಕ್ಕೆ ಪುಟ್ಟಗನ ಹೆಂಡತಿಗೆ ಹೆರಿಗೆಯಾಯ್ತು, ಗಂಡು ಮಗು. ದೊಡ್ಡಪ್ಪನೇ ಮನೆಗೆ ಬಂದ ಎಂದುಕೊಂಡರು. ಹೆರಿಗೆಯಾದ ಮಾರನೆಗೆ ಆ ಮಗುವೂ ಸತ್ತೋಯಿತು. ಹಸಿಬಾಣಂತಿ ತಲೆಗೆ

ಅಂಟಿತು ಯೋಚನೆ, ಮೈಗೆ ಅಂಟಿತು ನಂಜು. ಖಾಯಿಲೆ ಹಿಡಿದು ಮಲಗಿಬಿಟ್ಟಳು.

ಔಷಧಿ ಕಷಾಯ ಮಾಡಿಸಿದರು, ಮೈಗೆ ಅಂಟಲಿಲ್ಲ. ಅವಳ ಬಾಯಿ ಒಣಗುತ್ತಿತ್ತು, ಗಂಟಲು ಆರುತ್ತಿತ್ತು. ನೀರಾಕಿದರೆ ಒದ್ದೆ ಉಳಿಯುತ್ತಿರಲಿಲ್ಲ. ಜನ, ಒಂದು ಚೂರು ಉಪ್ಪನ್ನೂ, ಮೆಣಸನ್ನೂ ಹರದು ಬಾಯಿಗೆ ಒತ್ತರಿಸಿದರೆ ಬಾಯಿಲಿ ನೀರಾಡತದೆ ಎಂದರು. ಅದರಂತೆ ಅವಳ ಬಾಯಿಗೆ ಉಪ್ಪು-ಮೆಣಸು ತುಂಬಿದರು. ಮೊದಲೇ ನಂಜು ಮುತ್ತಿದ್ದ ಆ ಬಾಯಿಗೆ, ಉಪ್ಪು ಮೆಣಸು ಸೇರಿಕೊಂಡು ಅವಳ ಬಾಯಿಯಲ್ಲಾ ಸುಲಿದೋಯ್ತು. ಬಾಯೆಲ್ಲಾ ಹುಣ್ಣಾಗಿ, ಮುಖವೆಲ್ಲಾ ಊದಿ, ಒಂದಕ್ಕೊಂದು ಕೂಡಿ ಒಂದು ದಿನ ಅವಳೂ ಸತ್ತಳು. ಒಂದರ ಮೇಲೊಂದು ಹೊಡೆತಗಳನ್ನು ಗಟ್ಟಿಮುಟ್ಟುಗಿದ್ದ ಪುನುಗ ತಡೆದುಕೊಳ್ಳಲಾರದೆ ನಲುಗಿದ. ಇದ್ದ ಜಮೀನನ್ನು ವತ್ತೆ ಇಟ್ಟು ಎಲ್ಲರ ಕ್ರಿಯೆಗಳನ್ನೂ ಮುಗಿಸಿದ.

ಇನ್ನು ಪುನುಗನಿಗೆ ಇದ್ದವಳು ಒಬ್ಬಳೇ ಮಗಳು. ಪಡ್ಡೆ ಹುಡುಗಿ. ತಲೆ ನೆಟ್ಟಗೆ ಇರಲಿಲ್ಲ. ಅವಳಿಗೆ ಯಾವುದಕ್ಕೂ ಗ್ಯಾನ ಬರಬೇಕಿತ್ತು. ಅದು ಬಂದರೆ ಅವಳು ಮಾಡುತ್ತಿದ್ದ ಕೆಲಸವನ್ನು ದೊಡ್ಡವರು ಮಾಡಲಾಗುತ್ತಿರಲಿಲ್ಲ. ಇಲ್ಲದಿದ್ದರೆ ಏನೂ ಇಲ್ಲ, ಸುಮ್ಮನೆ ಬೀದಿ ಬೀದಿ ಸುತ್ತುತ್ತಿದ್ದಳು. ಅವಳಿಗೆ ಇಂತವರೆ ಎಂದೇನು ಇಲ್ಲ, ಯಾರ ಮುಂದಾದರೂ ಹೋಗಿನಿಂತು, ತನ್ನ ಬಲಗೈಯ್ಯನ್ನು ಅವರ ಮುಂದೆ ನೀಡಿ, ಅವಳು ಎತ್ತಲೋ ನೋಡುತ್ತಾ ನಿಲ್ಲುತ್ತಿದ್ದಳು. ಅವಳ ಈ ಅವತಾರವನ್ನು ನೋಡಿ ಜನ ನಗುತ್ತಿದ್ದರು. ಒಡ್ಡಿದ ಅವಳ ಕೈಗೆ ಕಲ್ಲನ್ನೋ, ಕಸಕಡ್ಡಿಯನ್ನೋ, ಬೀಡಿ ತುಂಡುಗಳನ್ನೋ ಹಾಕಿ ಖುಷಿಪಡುತ್ತಿದ್ದರು. 'ಮಗ ನೆನ್ನೆ ಹಬ್ಬವಲ್ಲ, ನಿಮ್ಮನೇಲಿ ಏನು ಮಾಡಿದ್ರಿ, ಹೇಳು, ಕಾಸು ಕೊಡ್ತಿನಿ' ಅಂದರೆ, 'ತಂಗಳಿಟ್ಟು, ಬಿಸಿಟ್ಟು' ಎನ್ನುತ್ತಿದ್ದಳು. ಹೀಗೆ ಹೇಗೋ ಇದ್ದ ಹುಡುಗಿ, ಕಾಯಿಲೆ ಕಸಾಲೆ ಏನೂ ಇಲ್ಲ, ಒಂದು ದಿನ ಮಲಗಿದವಳು ಏಳಲೇ ಇಲ್ಲ. ಬಂದವಳು ಬಂದಂಗೆ ಹೊರಟು ಹೋದಳು. ಒಂದು ಲೋಟ ಬಿಸಿನೀರನ್ನಾದರು ಕಾಯಿಸಿ ಕುಡಿಸಿದ್ದರೆ ನನ್ನ ಕರ್ಮ ಕಳದೊಯ್ತಿತ್ತಲ್ಲ ಎಂದು ಪುನುಗ ಬಹಳ ವರ್ಷ ಅತ್ತ. ಆಮೇಲೆ ಸುಮ್ಮನಾದ.

ಹೀಗೆ ಎಲ್ಲವನ್ನು ಕಳೆದುಕೊಂಡ ಪುನುಗನಿಗೆ ಎಲ್ಲಿದ್ದರೇನು ಎನಿಸಿತು. ಮೈಸೂರಿನಲ್ಲೆ ಇದ್ದುಬಿಟ್ಟ. ಅಲ್ಲಿ, ಇಲ್ಲಿ ಬೇಡುತ್ತಾ ಬಂದವನಿಗೆ ಅದೇ, ಆ ಗಿಡ ಕಟ್ಟಿದ ಗೂಡೇ ನೆಲೆಯಾಯ್ತು. ಅಲ್ಲೆ ಕತ್ತಲನ್ನೂ, ಬೆಳಕನ್ನೂ ನೋಡುತ್ತಾ ಕಾಲ ಕಳೆಯುತ್ತಿದ್ದ. ಇವನ ಗೂಡಿನ ಎದುರಿಗೆ ಒಂದು ದೊಡ್ಡ ಹಳ್ಳವಿತ್ತು. ಅಲ್ಲಿಗೆ ಮೈಸೂರಿನ ರೇಜಿಗೆಯಲ್ಲಾ ಬಂದು ಬೀಳುತ್ತಿತ್ತು. ಅಲ್ಲಿಗೆ ಕಸ ಆಯಲು ಜನ ಬಂದರು. ಇವನೂ ಅವರ ಜೊತೆ ಸೇರಿಕೊಂಡ. ಹೆಂಗಸರು ತಲೆ ಬಗೆಯುವಂತೆ ತನ್ನ ಕೈಯ್ಯ ಬೆರಳುಗಳಿಂದ ಕಸದ ಗುಡ್ಡೆಯನ್ನು ಬಗೆದೂ, ಬಗೆದೂ ಏನೇನನ್ನೋ ಆಯ್ದು, ಕಡಲೆಯವನಿಗೆ ಮಾರುತ್ತಿದ್ದ.

ಒಂದು ದಿನ ಇವನು ಮಣ್ಣುಗುಡ್ಡೆ ಬಗೆಯುವಾಗ ಬೆರಳುಗಳಿಗೆ ಸೈಜುಕಲ್ಲು ಸಿಕ್ಕಿತು. ತೆಗೆದ. ಮತ್ತೆ ಬಗೆದ, ಹತ್ತಾರು ಕಲ್ಲುಗಳು ಸಿಕ್ಕಿದವು. ಅವುಗಳನ್ನು ಹೊತ್ತು ಮೇಲಕ್ಕೆ ತಂದು ಗುಡ್ಡೆ ಮಾಡಿದ. ಅವುಗಳಿಗೆ ಯಾರೊ ಬೆಲೆ ಕೊಟ್ಟು ಕೊಂಡುಹೋದರು. ಪುನುಗನಿಗೆ ಇದೇ ಕೆಲಸವಾಯಿತು. ಅವುಗಳನ್ನೆ ಸಣ್ಣದು, ದಪ್ಪದು ಮಾಡಿ ಸಾಲು, ಸಾಲು ಗುಡ್ಡೆಗಳ ಮಾಡಿದ. ಅವಕ್ಕೂ ಬೆಲೆ ಬರಬಹುದೆಂದು ಕಾಯುತ್ತಾ ಕುಳಿತ. ಆ ಮುಖವಿಲ್ಲದ ಮುರುಕುಗಳಿಗೆ ಬೆಲೆ ಬರಲೇ ಇಲ್ಲ. ಆ ಗುಡ್ಡೆಗಳ ಸುತ್ತ ಗರಿಕೆ ಹುಲ್ಲು ಚಿಗುರಿ ಗುಡ್ಡೆಗಳನ್ನು ಮರೆಸುತ್ತಿತ್ತು. ಪುನುಗ ಆ ಗರಿಕೆಯನ್ನೂ ಪರಪರನೆ ಕಿತ್ತು, ಗುಡ್ಡೆ ಕಾಣುವಂತೆ ಮಾಡುತ್ತಲೇ ಇದ್ದ. ಬೆಲೆ ಬರಲೇ ಇಲ್ಲ.

ಈಗ ಆ ಗೂಡು ತನ್ನ ಮನೆ. ಆ ಅರ ಮನೆಯ ಮುಂದೆ ಕುಳಿತು ಆ ಗುಡ್ಡೆಗಳನ್ನು ಕಾಯುತ್ತಿದ್ದಾನೆ. ಕಾಯುತ್ತಾ, ಆಕಳಿಸುತ್ತಾ ಎಳೆ ಬಿಸಿಲಿಗೆ ಬರುತ್ತಿದ್ದ ಮಂಪರು ನಿದ್ದೆಗೆ ತೇಲುತ್ತಾ, ವಾಲುತ್ತಾ, ಕಾಲುನೀಡಿ ಕುಳಿತಿದ್ದಾನೆ. ಯಾರೂ, ಏನೊ ತಿಂದು, ಉಂಡೆಮಾಡಿ ಬಿಸಾಕಿದ್ದ ಪೇಪರಿನ ಉಂಡೆ, ಅದೆಷ್ಟು ದಿನವಾಯ್ತೊ, ತನ್ನ ಜಾಗವನ್ನು ಬಿಟ್ಟು, ತನ್ನ ಹಾದಿಗೆ ಬಂದ ಗಂಡಾಂತರಗಳನ್ನೆಲ್ಲಾ ದಾಟುತ್ತಾ ಬಂದು ಪುನುಗನ ಪಾದವನ್ನು ಮುಟ್ಟಿ ನಿಂತಿತು. ಪುನುಗ ಅದನ್ನು ನೋಡುವ ಗೋಜಿಗೆ ಹೋಗಲಿಲ್ಲ. ಪೇಪರಿನ ಉಂಡೆ ಅಲ್ಲೆ ನಿಂತಿದ್ದಾಗ ಅದೇನು ನೋಡುವ ಎನಿಸಿತು. ಮೈಮುರಿದು, ಆಕಳಿಸಿ, ಪೇಪರಿನ ಉಂಡೆಯನ್ನು ಕೈ ನೀಡಿ ತೆಗೆದು ಕೊಂಡ. ಪೇಪರನ್ನು ಬಿಡಿಸಿ ತೊಡೆಯ ಮೇಲೆ ಇಟ್ಟುಕೊಂಡು, ಅದನ್ನು ತೀಡಿ, ಎರಡೂ ಕೈಗಳಿಂದ ಅದನ್ನು ಬಿಡಿಸಿ ಹಿಡಿದು, ತನ್ನ ಕಣ್ಣುಗಳಿಗೆ ಕಟ್ಟಿಕೊಂಡ. ನೋಡುತ್ತಲೇ ಇದ್ದ. ಅಲ್ಲೇನು ಅವನ ಕಲ್ಲುಗುಡ್ಡೆಗಳ ಧಾರಣೆ ಇತ್ತ? ಅಕ್ಷರ ಬಾರದ ಅವನಿಗೆ ಅದೇನು ಹೇಳುತ್ತದೆ? ಆದರೆ ಅಲ್ಲೊಂದು ಫೋಟೋ ಇತ್ತು. ಕಾರ್ಗಿಲ್ ಯುದ್ಧದಲ್ಲಿ ಸತ್ತನೆಂದು ಬೇಯಿಸಲು ಬೆಂಕಿ ಯಲ್ಲಿಟ್ಟಿದ್ದ ಹೆಣದ ಚಿತ್ರ. ಅದಕ್ಕೆ ಆ ಹೆಣದ ಪುಟ್ಟ ಹುಡುಗ, ಬೆಂಕಿ ಇಡಲು ಬೆಂಕಿಕೊಳ್ಳಿ ಹಿಡಿದು ನಿಂತಿದ್ದ. ಆ ಹೆಣದ ಪಕ್ಕದಲ್ಲಿ ರೋದಿ ಸುತ್ತಿದ್ದ ಹೆಣದ ಹೆಂಡತಿ ಇದ್ದಳು. ಪುನುಗನಿಗೆ ಅದು ಹೆಂಡತಿ ಮಕ್ಕಳ ನೆನಪು ತಂದಿರಬೇಕು. ಆ ಪೇಪರನ್ನು ಎದೆಗೆ ಅಂಟಿಸಿಕೊಂಡು ಇರುವ ಯಂತೆ ಮಾತಾಡುತ್ತಿದ್ದ.





ಚಿತ್ರವನ್ನು ಬಿಡಿಸಿ ನೋಡುತ್ತಲೇ ಇದ್ದ ಅಲ್ಲೇನು ಅವನ ಕಲ್ಲುಗುಡ್ಡೆಗಳ ಧಾರಣೆ

ಅದೇನು ಹೇಳುತ್ತದೆ.

ಇತ್ತ? ಅಕ್ಷರ ಬಾರದ ಅವನಿಗೆ

– ಬಸವರಾಜು ಕುಕ್ಕರಹಳ್ಳಿ

ಶ್ರೀಧರ ಬಳಗಾರ

ಭಾವ ಬಿಂದು



# ಹೃದಯಕ್ಕೊಂದು ಹರಿಗೋಲು

ಹಟಮಾಡಿ ಪಡೆದ ಆಟದಲ್ಲಿ ಬಾಲ್ಯವನ್ನು ಚಿಗುರಿಸುವ ಮಗು ದಿನವಿಡೀ ಕುಣಿದು, ಹಠಾತ್ತನೆ ರಾತ್ರಿಯ ಅಂಕದಪರದೆ ಎಳೆದುಕೊಂಡು ನಿದ್ದೆಹೋಗಿದೆ. ಅದರ ಅಸಾಧ್ಯ ಆತಂಕಕಾರಿ ತುಂಟತನಕ್ಕೆ ತಾಳ್ಮೆಗೆಟ್ಟು, ಸಿಟ್ಟಿನಿಂದ ಬೆದರಿಸಿ, ಪೆಟ್ಟುಕೊಟ್ಟು, ಈಗ ತಣ್ಣಗಾದ ತಂದೆ, ಉಣ್ಣದೆ, ಮೂಲೆಯ ಚಾಪೆಯ ಮೇಲೆ ಅನಾಥವಾದಂತೆ ಮುದುಡಿ ಮಲಗಿದ ಮಗುವಿನ ಪಾದದ ಬಳಿ, ತಾನು ಅದನ್ನು ದಂಡಿಸಿದ್ದಕ್ಕೆ ಪ್ರತಿಯಾಗಿ ಪಶ್ಚಾತಾಪದಿಂದ ಪ್ರಾಯಶ್ಚಿತ ಮಾಡಿಕೊಳ್ಳುವವನಂತೆ, ದುಃಖದ ಲಯ ಹಿಡಿದು ಕುಳಿತಿದ್ದಾನೆ. ಹಗಲಿಡೀ ಭಯಂಕರ ಅವಾಂತರದಂತೆ ಕಂಡ ಮಗುವಿನ ವರ್ತನೆಗಳು ಸಂಜೆಯ ನೆಸಪಿನ ಓಣಿಯಲ್ಲಿ ಲೀಲೆಯಂತೆ ಹೊಳೆಯುತ್ತವೆ. ಪ್ರಾರ್ಥನೆಯ ಭಂಗಿಯಲ್ಲಿ, ಕ್ಷಮೆಯ ಭಾವದಲ್ಲಿ, ಹೃದಯ ಶುದ್ಧೀಕರಣಕ್ಕಾಗಿ ಕುಳಿತ ತಂದೆಯ ದೀನ ಸ್ಥಿತಿಯನ್ನು ಮಗು ನೋಡದು. ನೀರವ ರಾತ್ರಿಯ ವಾತಾವರಣದಲ್ಲಿ, ಧ್ಯಾನದ ತೀವ್ರತೆಯಲ್ಲಿ ಹುರಿಗೊಳ್ಳುತ್ತ, ಮನಸಿನ ಕೇಂದ್ರಕ್ಕೆ ಜಗಿಯುವ ಅನುರಕ್ತಿಯೇ ಆತನದು? ದೈಹಿಕವಾಗಿ ಹತ್ತಿರವಿದ್ದೂ ಮಾತು ತಲುಪದ ಅಮೂರ್ತ ದೂರಕ್ಕೆ ಪಯಣಿಸಿದ ಜೀವ, ಅನಂತ ಏಕಾಂತದಲ್ಲಿ ಒಂಟಿಯಾಗಿದೆ ಎಂದೆ? ಮುಗ್ಧ, ನಿಶ್ಶಬ್ದ ಮುಖದ ಅಲೌಕಿಕ ಸೌಂದರ್ಯದೆದುರು ತನ್ನ ಕ್ರೌರ್ಯ ಪ್ರಕಟವಾಯಿತೆಂದೆ? ಇಷ್ಟು ದಿನಗಳ ತನಕ ಹಸಿವಿನಂತೆ, ತನ್ನೊಳಗೆ ಸುಪ್ತವಾಗಿದ್ದ ತನ್ನದೆಂಬ ಪದಾರ್ಥವೇ ಇದು ಎಂಬ ಕರುಳಿನ ಮಿಡಿತವೆ? ಯಾತನೆಯ ಯಜ್ಞದಲ್ಲಿ ಆತ್ಮ ನಿರ್ಮಲವಾಯಿತೆಂದೇ ಮಗು ಪ್ರಶಾಂತವಾಗಿ ಮಲಗಿದಂತಿದೆ. ಶಬ್ದದಾಚೆಯ ತೀರದಲ್ಲಿರುವ ಎಳೆಯ ಜೀವ, ನಿರಾಳ ಉಸಿರಾಡುತ್ತ, ತನ್ನ ಶ್ವಾಸದ ಕೊನೆಯಲ್ಲಿ, ಹೃದಯ ಅಂತಃಪುರದಲ್ಲಿ ಸ್ವಪ್ನಸಂಗೀತ ನುಡಿಸುತ್ತ, ಗಾಳಿಪಟದ ಮೇಲೆ ಕುಳಿತು ನಕ್ಷತ್ರಗಳನ್ನು ಆಡುತ್ತ, ಬಲೂನಿನಂಥ ನೀರಿನ ಬಣ್ಣದ ಗುಳ್ಳೆಗಳ ಮೇಲೆ ಕೂತು ಆಕಾಶದಲ್ಲಿ ವಿಹರಿಸುತ್ತ ಇದ್ದಿರಬಹುದು. ನೆರಳ ಹಿಡಿದೇ, ಎಳೆದು ಕಂಬಕ್ಕೆ ಕಟ್ಟುವ ಮೀಸೆಯ ರಾಕ್ಷಸರಿಲ್ಲ ಅಲ್ಲಿ; ಕಾಲದ ಸ್ವಚ್ಛಂದವಾದ ಇನ್ನರ್ಥ ಲೋಕವದು.

ಮಗುವಿನ ಮೈಯಿಂದ ಹೊರಸೂಸುವ ಬೆಚ್ಚನೆಯ ಅಕ್ಕರೆಯನ್ನು ಹೀರಿ, ಬಾಗಿ ಗಲ್ಲಕ್ಕೆ ಮುತ್ತಿಡುವ ಕ್ರಿಯೆ ಮೌನವಾಗಿ ಅಂತರಂಗವನ್ನು ತೊಳೆದುಕೊಳ್ಳುವ ಪವಿತ್ರ ವಿಧಿಯಂತಿರುತ್ತದೆ. ಸಂಸಾರದ ಜಂಜಾಟದಲ್ಲಿ ಸಿಲುಕಿದ ಎಲ್ಲ ತಂದೆ-ತಾಯಂದಿರು ಪಶ್ಚಾತ್ತಾಪದ ನದಿಯಲ್ಲಿ ಅನುದಿನವು ಮಾಡುವ ತೀರ್ಥಸ್ನಾನವಿದು. ಮೌನದ ದಾರಿಯಲ್ಲಿ ಹುಟ್ಟುವ ಇಂಥ ನಿರಹಂಕಾರಿ ಪ್ರೀತಿ, ಪ್ರೀತಿಸುವ, ಪ್ರೀತಿಸಲ್ಪಡುವ ವ್ಯಕ್ತಿಗಿಂತಲೂ ಉದಾತ್ತವಾಗಿ ಬೆಳೆಯಬಲ್ಲದು. ಅದೆಷ್ಟು ಎತ್ತರದ ಶಕ್ತಿಯಾಗಿ ನಿಲ್ಲುತ್ತದೆಂದರೆ ನಮ್ಮನ್ನು ನಿಯಂತ್ರಿಸುವ ಸ್ವತಂತ್ರ ವ್ಯಕ್ತಿತ್ವವೇ ಅದಕ್ಕೆ ಪ್ರಾಪ್ತವಾಗಿಬಿಡುತ್ತದೆ. ನಮಗಿರುವ ಏಕೈಕ ದಾರಿಯೆಂದರೆ ಅದರ ಸಾರ್ವಭೌಮತೆಯನ್ನು ಒಪ್ಪಿಕೊಂಡು, ಶರಣಾಗಿ, ಬಿಡುಗಡೆಯ ಸಂತಸದಲ್ಲಿ ಹಗುರಾಗಿ ಅರಳುವುದು. ■

‘ಮುತ್ತಿನಹಾರ’ದಂಥ, ‘ಮಾಣಿಕ್ಯದ ದೀಪ್ತಿ’ಯಂಥ, ‘ಸ್ಫಟಿಕದ ಶಲಾಕೆ’ಯಂಥ ಶಬ್ದಚಿತ್ರಗಳು ನಮ್ಮ ಒಳಗನ್ನು ಉಜ್ವಲವಾಗಿ ಉದ್ದೀಪಿಸಿ, ಹಿಗ್ಗಿಸಬಲ್ಲವು. ಮುಟ್ಟಿದರೆ ಸಾಕು, ಸ್ವರಗಳನ್ನು ಸೂಸುವ, ಶೃತಿ ಮಾಡಿಟ್ಟ ತಂತಿಗಳಂತೆ ‘ಚಾರ್ಜ್ಡ್’ ಆಗಿರುವ ನುಡಿಚಿತ್ರಗಳಿಗೆ ‘ಭಾವಬಿಂದು’ ಮೀಸಲು. ಸ್ವಂತ ರಚನೆಗಳ ಜೊತೆ ಕಥೆ, ಕಾದಂಬರಿಗಳಿಂದ ಹೆಕ್ಕಿದ ಪರಿಚ್ಛೇದಗಳಿಗೂ ಸ್ವಾಗತ.



ಕೋಕಾಕೋಲಾದಲ್ಲಿ ಸೋಡಾ ಬೆರೆಸಿದಂತಹ ಅರ್ಧಂಬರ್ಧ ನೊರೆನೊರೆಯಾದ ಸಾಯಂಕಾಲ. ಸಿಗರೇಟಿನ ಹೊಗೆ ತುಂಬಿದಂತಹ ವಾತಾವರಣ. ಮೂಲೆಯಲ್ಲಿ ಉರುಟು ಚಹರೆಗೆ ಚಪ್ಪಟೆ ಮೂಗಿನಂತಿರುವ 'ಕೆಫೆ ರೋಶನ್' ಹೋಟೆಲು. ಅಂದಗೆಟ್ಟ ಕೈಗಳುಳ್ಳ ಕಪ್ಪು ಖುರ್ಚಿಗಳು. ಅರ್ಧವಷ್ಟೆ ಎದ್ದು ಕಾಣುವ ಅಂಚೆಯ ಮೊಹರಿನಂತಹ ವೇಟರುಗಳು. ಗಲ್ಲೆಯಲ್ಲಿ ಕುಳಿತವ, ನೀರಿಗೆ ಬಿದ್ದ ಬನ್‌ಪಾವ್‌ನ ಚಹರೆಯ ಯುಸುಫ್. ಗೋಡೆಯ ಮೇಲೆ ತೂಗುಹಾಕಿದ ಗಡಿಯಾರಕ್ಕೆ ಕಾಮಾಲೆಯಾದ, ಶೀರ್ಷಾಸನ ಮಾಡಿ ಎದ್ದು ನಿಂತಂತಹ ಮುಳ್ಳುಗಳು! ಸಿಂಹಾಸನದ ಮೇಲೆ ಕಿರೀಟ ಧರಿಸಿ ಕುಳಿತ ಇರಾಣದ ಬಾದಶಹಾ ಮತ್ತು ಕಲ್ಲಿನ ಮೇಲೆ ಕುಳಿತ ಸಾಯಿಬಾಬಾ ಇವರ ಫೋಟೋಗಳನ್ನು ಎದುರಿನ ಗೋಡೆಯಲ್ಲಿ ನೇತುಹಾಕಲಾಗಿದೆ. ಮೂಲೆಯೊಂದರಲ್ಲಿ ಬೆವರೊಡೆದ ರಿಫ್ರಿಜರೇಟರ್. ಕಾಗೆಯಂತೆ ಫಡಫಡವೆನ್ನುವ ವಿದ್ಯುತ್ತಿನ ಫ್ಯಾನುಗಳು ತಲೆಯ ಮೇಲಿದ್ದರೆ ಅವುಗಳ ಅಡಿಯಲ್ಲಿ ಪ್ರತಿಯೊಂದು ಟೇಬಲ್ಲಿನ ಸುತ್ತು ಜನರ ಗುಂಪುಗಳು ಕೂತು, ಧ್ವನಿಯೆತ್ತಿ, ನಿರರ್ಥಕ ಉಪದೇಶದ ಮಾತುಗಳನ್ನಾಡುತ್ತಿದ್ದಂತೆ ಅದಕ್ಕೆ ರೇಡಿಯೋಗ್ರಾಮಿನಲ್ಲಿಯ ಅಪಸ್ವರವೂ ಬೆರೆತುಕೊಂಡಿದೆ.

ಕೌಂಟರಿನಲ್ಲಿ ಕೆಂಪಾದ, ಕೆನೆಬಣ್ಣದ, ಕಪಾಳಕ್ಕೆ ಕೈಯಿಟ್ಟು ಕುಳಿತ ಯುಸುಫ್. ಅವನಿಂದ ತುಸುವೇ ಅಂತರದಲ್ಲಿ ನಸುಗೆಂಪು ಮೋಡವು ಮೊಣಕಾಲ ಕೆಳಗೆ ಸುರಿದಂತೆ, ಅದೇ ಬಣ್ಣದ ಗೌನ್ ಹಾಕಿಕೊಂಡು, ಸ್ವೆಟರ್ ನೇಯುತ್ತ ಕುಳಿತ ಅವನ ಮಡದಿ ರೋಶನ್.

ಯುಸುಫ್‌ನ ಒಂದು ಕೈ ಎಂದಿನ ಅಭ್ಯಾಸದಂತೆ ಗಲ್ಲೆಯೊಳಗಿನ ನಾಣ್ಯಗಳೊಂದಿಗೆ ಆಟವಾಡುತ್ತಿತ್ತು. ಬೆಣ್ಣೆಯನ್ನು ಕುಯ್ಯುವ ಮೊಂಡಾದ ಚೂರಿಯಂತಿರುವ ಅವನ ದೃಷ್ಟಿ, ಕುಳಿತ ಗಿರಾಕಿಗಳ ಮೇಲೆ ತಿರುಗುತ್ತಿತ್ತು. ಆದರೆ ಯುಸುಫ್‌ನ ದೃಷ್ಟಿ ಇಂದು ಉದಾಸವಾಗಿತ್ತು. ದಿನವಹಿಯ

ಗಿರಾಕಿಗಳ ಕಡೆ ನೋಡುತ್ತ, ಬಂಗಾರದ ನಗೆ ಸೂಸುವ ರೋಶನ್ ಕೂಡ ಇಂದು ತಲೆ ತಗ್ಗಿಸಿ ಸ್ವೆಟರ್ ನೇಯುತ್ತಿದ್ದಳು.

ಚಪ್ಪಟೆ ಮೂಗಿನ, ಗಿಡ್ಡವಿದ್ದು, ದಪ್ಪವಿರುವ ಆ ಹೋಟೆಲ್ ಇಂದು ಉದಾಸವಾಗಿತ್ತು. ಮೂವತ್ತು ವರ್ಷಗಳ ಹಿಂದೆ ರೋಶನ್ ಮತ್ತು ಯುಸುಫ್ ಇರಾನ್‌ನಿಂದ ಮುಂಬಯಿಗೆ ಬಂದರು. ಕೆಲವೇ ದಿನಗಳಲ್ಲಿ, ಜನನಿಬಿಡವಾದ ವ್ಯಾಪಾರಕ್ಕೆ ಒಳ್ಳೆ ಸಂಧಿಯ ಸ್ಥಳದಲ್ಲಿ ಅವರು ಹೋಟೆಲ್ ಪ್ರಾರಂಭಿಸಿದರು. ಯುಸುಫ್ ಮತ್ತು ಆಕೆಯ ವಿವಾಹ ಆಗಷ್ಟೆ ಆಗಿತ್ತು. ಯುಸುಫ್ ಉದ್ದ ಮೂಗಿನ, ಎತ್ತರವಾದ, ದಪ್ಪ ಶರೀರವುಳ್ಳವನಾಗಿದ್ದರೆ, ರೋಶನ್ ಗಿಡ್ಡಾಕೃತಿಯವಳು! ಚಪ್ಪಟೆ ಮೂಗುಳ್ಳವಳು, ಗಜ್ಜರಿಯಂತೆ ಕೆಂಪುಕೆಂಪಾಗಿದ್ದವಳು. ಹೋಟೆಲ್ಲಿಗೆ ಜಾಗ ಸಿಕ್ಕ ಮೇಲೆ ಅದಕ್ಕೆ ಯಾವ ಹೆಸರು ಕೊಡುವುದು ಎಂಬ ವಿಚಾರ ಯುಸುಫ್‌ನಿಗೆ ಬೀಳಲಿಲ್ಲ. ಅವನ ಮನಸ್ಸಿನಲ್ಲಿ ಅದು ಆಗಲೇ ಫಿಕ್ಸ್ ಆಗಿತ್ತು. 'ಕೆಫೆ ರೋಶನ್' ಈ ಹೆಸರಿನ ಬೋರ್ಡು ಹೋಟೆಲ್ಲಿನ ಮೇಲೆ ಝಳಪಿಸತೊಡಗಿತು. 'ನಿನಗೆ ರೋಶನ್ ಹಿಡಿಸುತ್ತಾಳಾ, ಇಲ್ಲ, ಈ ಹೋಟೆಲಿನ ದಂಧೆ ಹೆಚ್ಚು ಇಷ್ಟವಾ,' ಎಂದೇನಾದರೂ ಯುಸುಫನಿಗೆ ಕೇಳಿದಲ್ಲಿ ಆತನಿಗೆ ನೇರವಾಗಿ ಉತ್ತರಿಸಲು ಬರುವಂತಿರಲಿಲ್ಲ.

ಹೋಟೆಲಿನ ದಂಧೆಯ ಮೇಲೆ ಅವನಿಗೆ ಹೆಚ್ಚು ಪ್ರೀತಿ ಇದ್ದಂತೆಯೇ, 'ಕೆಫೆ ರೋಶನ್', ರೋಶನಳ ಜೀವನದ ಒಂದು ಪ್ರತೀಕವಾಗಿ ಸ್ಥಾಪಿತವಾಗಿತ್ತು. ಸಣ್ಣದಾದ, ಮಾಟವಾದ, ಆ ಹೋಟೆಲ್ ಗಜಬಿಜಗುಟ್ಟುವ ಅಲ್ಲಿಯ ವಸ್ತಿಯೊಡನೆ ಏಕರೂಪವಾಗಿಬಿಟ್ಟಿತ್ತು. ರೋಶನ್, ಹೋಟೆಲ್ಲಿನ ರೂಪದಲ್ಲಿ ಆ ವಸ್ತಿಯಲ್ಲಿ ಬೆರೆತು ಹೋಗಿದ್ದಳು. ಹೋಟೆಲ್ಲಿನೊಳಗೆ ಯಾವಾಗಲೂ ಗಜಬಿಜಿ ಇರುತ್ತಿತ್ತು. ಅದು ರೋಶನಳ ಸಂಸಾರವೇ! ಕೆಳಗೆ ಜನರಿಂದ ತುಂಬಿದ ರಸ್ತೆಯ ಕಾಟಕೋನದಲ್ಲಿ ಸಮರ್ಪಕವಾಗಿ ಕೂತ ಆ ಹೋಟೆಲ್ ಮತ್ತು ಮೇಲೆ ಅಟ್ಟದಲ್ಲಿ ರೋಶನಳು ಸಜ್ಜುಗೊಳಿಸಿದ ಸಂಸಾರ!

ಕಳೆದ ಮೂವತ್ತು ವರ್ಷಗಳಲ್ಲಿ 'ಕೆಫೆ ರೋಶನ್'ನ ಅಂತರಂಗ ಹೆಚ್ಚೇನೂ ಬದಲಾಗಿರದಿದ್ದರೂ ಕಾಲದ ಚಿಹ್ನೆಗಳು ಅದರ ಮೇಲೆ ಅಚ್ಚೊತ್ತಿದ್ದುವು. ಫರ್ನಿಚರ್‌ನ ಬಣ್ಣ ಕಪ್ಪಗೆ ತಿರುಗಿತ್ತು. ಅವು ಮುರಿಯುವ ಅವಸ್ಥೆಯಲ್ಲಿದ್ದುವು. ಗೋಡೆಯ ಮೇಲಿನ ಗಡಿಯಾರದ ಚಹರೆ ಹಳದಿ ಬಣ್ಣಕ್ಕೇರಿತ್ತು. ರೋಶನಳ ಚಹರೆಯ ಮೇಲೂ ಸುಕ್ಕುಗಳು ಕಾಣಹತ್ತಿದ್ದುವು. 'ಕೆಫೆ ರೋಶನ್' ದಿನವಿಡೀ ಗೌಜಿ-ಗದ್ದಲದಲ್ಲಿರುತ್ತಿತ್ತು. ಗಿರಾಕಿಗಳ ಉತ್ಸಾಹ ಎಂದೂ ಸೋರಿರಲಿಲ್ಲ. ಅವರಿಗೆಲ್ಲ ಅದು ಪ್ರೀತಿಯ ಠಿಕಾಣೆಯಾಗಿತ್ತು. ಅಲ್ಲಿಗೆ ಬಂದು ಐದು-ಹತ್ತು ನಿಮಿಷ ಅವರು ಕೂತರೆಂದರೆ ಶ್ರಮ ಪರಿಹಾರವಾಗುತ್ತಿತ್ತು.

ಇವತ್ತಿನ ಈ ಸಂಜೆ, 'ಕೆಫೆ ರೋಶನ್'ನ ಆಯುಷ್ಯದಲ್ಲಿಯ ಉದಾಸ ಮತ್ತು ಅಮಂಗಳ ಸಂಜೆಯಾಗಿತ್ತು. ನಗರಪಾಲಿಕೆಯ ಇನ್‌ಸ್ಪೆಕ್ಟರ್ ಈಗತಾನೇ ಯುಸುಫನನ್ನು ಭೇಟಿಮಾಡಿ ಹೋಗಿದ್ದಾನೆ. ಆತನ ಸ್ವಾಗತ ಮಾಡುತ್ತ ಯುಸುಫ್ ಅವನಿಗೆ ಚಹಾ, ಮಸ್ಕಾಸ್ಲೈಸ್ ತಿನ್ನಲು ಕೊಟ್ಟಿದ್ದ. ಅವನು ಕೊನೆಗೆ ಹೋಗುವಾಗ ಯುಸುಫ್‌ನ ಕಿವಿಯಲ್ಲಿ ಏನೋ ಉಸುರಿದ್ದ. ಈಗ ಯಾವುದೂ ಪ್ರಯೋಜನವಿಲ್ಲ. ಎಲ್ಲ ಪ್ರಯತ್ನಗಳೂ ನಿಷ್ಫಲವಾಗಿದ್ದುವು. ರಸ್ತೆ ಅಗಲಗೊಳಿಸುವ ಯೋಜನೆಯಡಿ 'ಕೆಫೆ ರೋಶನ್' ಹೋಗುವುದು ನಿಶ್ಚಿತವಾಗಿತ್ತು. ನಾಳೆ ಬೆಳಿಗ್ಗೆಯೇ ಹೋಟೆಲ್ ಖಾಲಿ ಮಾಡಬೇಕಿತ್ತು. ನಾಡಿದ್ದು ನಗರಪಾಲಿಕೆಯ ಜನ ಕೆಡವಲು ಬರುವವರಿದ್ದರು. ಇನ್‌ಸ್ಪೆಕ್ಟರ್ ಒಂದು ಹಳದಿ ಕಾಗದವನ್ನು ಯುಸುಫನ ಕೈಯಲ್ಲಿಟ್ಟಿದ್ದ. ನಡುಗುವ ಕೈಗಳಿಂದ ಯುಸುಫ್ ಸಹಿ ಮಾಡಿ ಕೊಟ್ಟಿದ್ದ. 'ಕೆಫೆ ರೋಶನ್'ನ ಆಯುಷ್ಯದಲ್ಲಿ ಇದು ಕೊಟ್ಟ ಕೊನೆಯ ಸಂಧ್ಯಾ ಕಾಲ.

ಕಳೆದ ಮೂವತ್ತು ವರ್ಷಗಳಲ್ಲಿ, ಗಜಬಿಜಿಯ ಆ ವಸ್ತಿಯ ಬದುಕಿನ ಅವಿಭಾಜ್ಯ ಘಟಕವಾಗಿ ಹೋಗಿದ್ದ ಈ ಹೋಟೆಲ್, ಕಾಲನ ಉದರದಲ್ಲಿ ಸೇರಿಹೋಗಲಿತ್ತು. ರೋಶನ್‌ಗೆ ಅದಕ್ಕಾಗಿ ಅತಿಶಯ ದುಃಖವಾಗುತ್ತಿದೆ. ಕಳವಳವಾಗುತ್ತಿದೆ. ಯಾವಾಗಲೂ ಗಿರಾಕಿಗಳ ಕಡೆ ನೋಡುತ್ತ, ಸ್ಮಿತ ವದನಳಾಗುತ್ತಿದ್ದ ರೋಶನ್ ಇಂದು ಹತಾಶಳಾಗಿದ್ದಳು. ಆಕೆಯ ಕಣ್ಣುಗಳಲ್ಲಿ ಅಶ್ರು ತೇಲಾಡುತ್ತಿತ್ತು. ಯುಸುಫನಿಗೆ ಕೆಟ್ಟೆನಿಸುತ್ತಿತ್ತೆ ಅಥವಾ ಇನ್ನೇನು ಎಂಬುದನ್ನು ಹೇಳುವುದು ಕಠಿಣವಾಗಿತ್ತು! ಆತನಿಗೆ ಬೇರೆ ದೊಡ್ಡದಾದ ಜಾಗ, ಈ ಜಾಗದ ಬದಲಿಗೆ ಸಿಕ್ಕಿತ್ತು. ಅವನು ಅಲ್ಲಿ ತನ್ನ ಹೊಸ ಹೋಟೆಲಿನ ಸಂಸಾರವನ್ನು ಹೂಡುವವನಿದ್ದ. ಈ ವಾಸ್ತುವಿಗಿಂತಲೂ ಯುಸುಫನಿಗೆ ಗಲ್ಲೆಯ ಮೇಲೆ ಅಧಿಕ ಒಲವು. ಬದುಕಿನಲ್ಲಿ ಆತನಿಗೆ ಹಣದ ಹೊರತಾಗಿ ಇನ್ಯಾವುದರಲ್ಲೂ ಹೆಚ್ಚಿನ ಆಸಕ್ತಿ ಉಂಟಾಗಿಲ್ಲ. ರೋಶನಳ ಸ್ಥಿತಿ ಅದಕ್ಕೆ ತದ್ವಿರುದ್ಧ. ಈ ಜಾಗೆಯ ಮೇಲೆ, ಈ ವಾಸ್ತುವಿನ ಮೇಲೆ ಈ ರಹದಾರಿಯ ಮೇಲೆ, ಎದುರಿನ ಉದ್ದೋ ಉದ್ದ ಚಾಳ್‌ನ ಮೇಲೆ, ಆ ಚಾಳ್‌ನಲ್ಲಿ ಬಿಡಾರ ಹೂಡಿದವರ ಮೇಲೆ, ಅವಳಿಗೆ ತೂಗಲಾರದಷ್ಟು ಪ್ರೇಮವಿತ್ತು. ಅವಳ ಜೀವವೇ ಅಲ್ಲಿ ಬೇರೂರಿತ್ತು.



ಮುಂಬಯಿಯ ಆ ಜನದಟ್ಟಣೆಯ ಚೌಕದಲ್ಲಿ, ಎರಡು ರಸ್ತೆಗಳ ಕಾಟಕೋನದಲ್ಲಿ 'ಕೆಫೆ ರೋಶನ್' ಮುಕುಟದ ಮೇಲೆ ತುರಾಯಿಯೆಂಬಂತೆ ಎದ್ದುಕಾಣಿಸುತ್ತಿತ್ತು. ಗಿಡ್ಡವಾದ, ಚಪ್ಪಟೆ ಮೂಗಿನ, ಬೆಳ್ಳಗಿನ, ಸುಟಿಸುಟಿಯಾದ ಹುಡುಗಿಯಂತೆ. 'ಕೆಫೆ ರೋಶ'ನ್‌ಗೆ ಮೂರು ಬಾಗಿಲುಗಳು. ಒಂದು ಬಾಗಿಲು, ಎಡ ರಸ್ತೆಯ ಒಂದು ಬದಿಗಿತ್ತು. ಇನ್ನೊಂದು, ಸರಿಯಾಗಿ ಎರಡು ರಸ್ತೆಗಳನ್ನು ಜೋಡಿಸುವ ಕಾಟಕೋನದಲ್ಲಿದ್ದರೆ ಮೂರನೆಯ ಬಾಗಿಲು ಬಲ ರಸ್ತೆಯ ಬದಿಗಿತ್ತು. ಎರಡು ರಸ್ತೆಗಳ ನಟ್ಟ ನಡುವೆ ಬೀಳುವಂತಿದ್ದ ಕೌಂಟರಿನಲ್ಲಿ ಯುಸುಫ್ ಕೂತಿರುತ್ತಿದ್ದ. ಅವನ ಮುಖ ಯಾವಾಗಲೂ ಮೂರನೆಯ ಬಾಗಿಲ ಕಡೆ ಇರುತ್ತಿತ್ತು. ಅದರಿಂದಾಗಿ ಅವನ ದೃಷ್ಟಿಯಿಂದ ಒಳಗೆ ಬರುವ ಮತ್ತು ಹೊರ ಹೋಗುವ ಯಾವುದೇ ಗಿರಾಕಿಯು ತಪ್ಪಿಸಿಕೊಳ್ಳಲಾಗುತ್ತಿದ್ದಿಲ್ಲ. ಅವನ ದೃಷ್ಟಿ ನಾಲ್ಕು ಸುತ್ತೂ ಇರುತ್ತಿದ್ದರೆ, ರೋಶನಳ ಗಮನವೆಲ್ಲಾ ಇರುತ್ತಿದ್ದುದು ಒಂದನೆಯ ಬಾಗಿಲ ಮೇಲೆ. ಕಾರಣ, ಆ ಬಾಗಿಲಿಗೆ ತಗುಲಿ ಇರುವ ರಸ್ತೆದಾಟಿದಂತೆಯೇ ಇದ್ದ, ಬಹಳಷ್ಟು ದೊಡ್ಡದಾದ ಉದ್ದಾನುದ್ದ ಚಾಳ್. ಹೋಟೆಲಿನ ಬಾಗಿಲ ಮೇಲೆ, ಅಟ್ಟದಲ್ಲಿಯೇ ರೋಶನಳ ಸಂಸಾರ ಇತ್ತು. ಕೆಳಗೆ ಹೋಟಿಲಿನಲ್ಲಿದ್ದರೆ ಆ ಬಾಗಿಲ ಮೂಲಕ ಇಲ್ಲವೆ ಮೇಲಿದ್ದಾಗ ಅಟ್ಟದ ಮನೆಯ ಕಿಟಕಿಯಿಂದ, ಎದುರಿನ ಚಾಳ್‌ನಲ್ಲಿಯ ಮಂದಿಯ ಚಟುವಟಿಕೆಗಳನ್ನು ಆಕೆ ತಾಸುಗಟ್ಟಲೆ ನೋಡುತ್ತ ಕುಳಿತಿರುತ್ತಾಳೆ. ಅದರಲ್ಲಿಯೇ ಆಕೆಗೆ ವೇಳೆ ಹೇಗೆ ಕಳೆಯುತ್ತಿತ್ತೋ ತಿಳಿಯುತ್ತಿರಲಿಲ್ಲ.

ರೋಶನಳಿಗೆ, ಕಳೆದ ಮೂವತ್ತು ವರ್ಷಗಳಿಂದ ಅದು ಇಷ್ಟವಾದ ಹವ್ಯಾಸವಾಗಿತ್ತು. ಆ ಚಾಳ್‌ನಲ್ಲಿಯ ಎಲ್ಲ ಜನರನ್ನೂ ಆಕೆ ವರ್ಷಾನುವರ್ಷ ನೋಡುತ್ತಲೇ ಬಂದಿದ್ದಾಳೆ. ಹೋಟೆಲ್ ಪ್ರಾರಂಭವಾದಾಗ ಎದುರಿನ ಚಾಳ್‌ನ ಸುರಂಗಾ ಒಂದೂವರೆ-ಎರಡು ವರ್ಷದವಳಿದ್ದಿರಬೇಕು. ತನ್ನ ತಂದೆಯ ನಡುವಿನಲ್ಲಿ ಕೂತು

ಅವಳು ಆಗಾಗ ಹೋಟೆಲ್ಲಿಗೆ ಬರುತ್ತಿದ್ದಳು. ರೋಶನ್‌ಗೆ ಅವಳೆಂದರೆ ತುಂಬ ಇಷ್ಟ. ಸುರಂಗಾಗೆ ಕೇಕ್ ತಿನ್ನಲು ಕೊಡುವಳು. ಅವಳ ಸಿಹಿ ಮುತ್ತನ್ನು ಪಡೆಯುವಳು. ಯುಸುಫ್‌ನೊಡನೆ ಲಗ್ನವಾಗಿ ರೋಶನ್ ಮುಂಬಯಿಗೆ ಬಂದಂದೆಯೇ 'ಕೆಫೆ ರೋಶನ್'ನಲ್ಲಿ ತನ್ನ ಸಂಸಾರವನ್ನು ಹೂಡಿದ್ದಳಷ್ಟೆ. ಈಗ ಈ ಸುರಂಗಾಳನ್ನು ನೋಡಿದಾಗಲಿಂದ ಆಕೆಗೆ ತಾನೂ ತಾಯಿ ಆಗಬೇಕೆಂದು ತುಂಬ ಅನ್ನಿಸ ತೊಡಗಿತು. ತನಗೆ ಒಂದು ಹೆಣ್ಣು ಮಗುವಾಗಬೇಕು, ಆದಾಗ ಅದಕ್ಕೆ ಸುರಂಗಾ ಎಂದು ಹೆಸರಿಡಬೇಕು ಎಂದು ರೋಶನ್ ಮನಸ್ಸಿನಲ್ಲಿ ಪಕ್ಕಾ ಮಾಡಿಕೊಂಡಿದ್ದಳು. ಸುರಂಗಾಳ ಆ ಬಾಲ ಮೂರ್ತಿಯನ್ನು ರೋಶನ್ ತನ್ನ ಕಣ್ಣುಗಳೊಳಗೆ ಕೂಡಿಸಿಡತೊಡಗಿದಳು. ಸುರಂಗಾಳ ತಂದೆ ಬೆಳಗ್ಗೆ ಅವಳನ್ನು ಹೋಟೆಲ್ಲಿಗೆ ಕರೆತಂದನೆಂದರೆ ರೋಶನ್, ಲಗುಬಗೆಯಿಂದ ತನ್ನ ಕೈಗೆ ಎತ್ತಿಕೊಳ್ಳುವಳು. ಸುರಂಗಾಳ ಸ್ಪರ್ಶದಿಂದ ರೋಶನಳ ಅಂಗಗಳಲ್ಲಿ ರೋಮಾಂಚನವಾಗುತ್ತಿತ್ತು. ಅವಳ ಮಿದುವಾದ ಗಲ್ಲದ ಚುಂಬನ ತೆಕ್ಕೊಳ್ಳದೆ, ಆಕೆಗೆ ಕೇಕ್ ಇಲ್ಲವೆ ಬಿಸ್ಕಿಟ್ ಕೊಡದೆ ರೋಶನಳಿಗೆ ಸಮಾಧಾನವಾಗುತ್ತಿದ್ದಿಲ್ಲ. ಒಂದೊಮ್ಮೆ ಸುರಂಗಾ ಬಾರದಿದ್ದರೆ ಅವಳಿಗೆ ಏನೋ ಕಳೆದುಕೊಂಡಂತೆ ಆಗುತ್ತಿತ್ತು. ಅಸ್ವಸ್ಥಗೊಂಡು ಆ ಚಾಳ್‌ನೆಡೆ ಕಣ್ಣಿಟ್ಟು ಕೂರುವಳು. ಆ ಧೀರ್ಘವಾದ ಚಾಳ್‌ನೆಡೆ ಆಕೆಯ ಎಲ್ಲ ಲಕ್ಷ್ಯವೂ ಇರುತ್ತಿತ್ತು. ಯಾರ ಬಳಿಯಲ್ಲಿ ಸುರಂಗಾ ಕಂಡರೂ ಆಕೆ, ಅವಳನ್ನು ಕೂಗಿ ಕರೆವಳು. ಆಗ ಚಾಳ್‌ನಲ್ಲಿಯ ಯಾರಾದರೂ ಸುರಂಗಾಳನ್ನು ಕೆಳಗೆ ತರುತ್ತಿದ್ದರು. ಈಗ ಸುರಂಗಾ ರೋಶನಳನ್ನು ಸರಿಯಾಗಿ ಗುರುತು ಹಿಡಿದಿದ್ದಾಳೆ. ರೋಶನಳನ್ನು ಕಂಡಾಗ ಸುರಂಗಾ ಆಕೆಯ ಕಡೆ ಜಗಿಯುವಳು. ರೋಶನ್ ಆಕೆಯನ್ನು ಹಿಡಿದು, ಎದೆಗೆ ಗಟ್ಟಿಯಾಗಿ ಒತ್ತಿಕೊಳ್ಳುವಳು, ತಿನ್ನಲು ಕೊಡುವಳು. ವೇಳೆ ಸಿಕ್ಕಾಗೆಲ್ಲ ಯುಸುಫ್‌ನಿಂದ ತುಸು ಅಂತರದಲ್ಲಿ ಖುರ್ಚಿಯ ಮೇಲೆ ಕೂತು ಆಕೆ ಸ್ವೆಟರ್ ನೇಯುತ್ತಾ ಇರುತ್ತಿದ್ದಳು. ಅಲ್ಲಿಂದಲೇ ಆಕೆಗೆ ಎದುರಿನ ಚಾಳ್ ಕಾಣಸುತ್ತಿತ್ತು. ಗೆಲರಿಯಲ್ಲಿ ಸುರಂಗಾ ಎಲ್ಲಿ ಕಾಣಸುವಳೋ ಎಂಬ ಕಡೆ ಆಕೆಗೆ ಸತತ ಲಕ್ಷ್ಯವಿರುತ್ತಿತ್ತು. ಈ ಕಾರ್ಯಕ್ರಮ ಅನೇಕ ವರ್ಷ ನಡೆದಿತ್ತು.

ಸುರಂಗಾಗೆ ಈಗ ಎಂಟು ವರ್ಷ. ಬಣ್ಣ ಬಣ್ಣದ ಫ್ರಾಕ್ ಧರಿಸಿ, ಕುಣಕುಣಿಯುತ್ತಾ ಅವಳು ಬಂದಾಗೆಲ್ಲ ರೋಶನ್ ಅವಳನ್ನು ತನ್ನ ಹತ್ತಿರ ತೆಗೆದುಕೊಳ್ಳುವಳು. ಸುರಂಗಾಳನ್ನು ಭೇಟಿಯಾಗದೆ ರೋಶನಳಿಗೆ ಸಮಾಧಾನವೇ ಇಲ್ಲ. ಈ ಮೃದುವಾದ ಸಿಹಿಯಾದ ಹುಡುಗಿಗೆ ಒಂದು ಸುಂದರವಾದ ಸ್ವೆಟರ್ ನೇಯಬೇಕು ಎಂದು ರೋಶನಳ ಮನಸ್ಸಿನಲ್ಲಿ ವಿಚಾರ ಬಂತು. ಮರುದಿನದಿಂದಲೇ ರೋಶನ್ ಕೈ ಉಣ್ಣೆಯ ನೂಲನ್ನು ನೇಯುವುದರಲ್ಲಿ ತಲ್ಲೀನವಾಯಿತು. ಏಳೆಂಟು ದಿನಗಳಾದುವು. ಸುರಂಗಾ ಬಂದಿರಲೇ ಇಲ್ಲ. ರೋಶನ್ ತುಂಬ ಅಸ್ವಸ್ಥಗೊಂಡಳು. ಸುರಂಗಾಳಿಗಾಗಿ ಹೆಣೆಯುತ್ತಿದ್ದ ಸ್ವೆಟರ್ ಇನ್ನೇನು ಸಿದ್ಧವಾಗುವುದರಲ್ಲಿದೆ. ಆದರೆ ಸುರಂಗಾ ಎಲ್ಲಿ? ಅವಳಿಗೆ ಜ್ವರ ಬಂದಿತ್ತಂತೆ.

ಒಂದುದಿನ ಎದುರಿನ ಆ ಚಾಳ್‌ನಲ್ಲಿ ಏನೋ ಗಡಿಬಿಡಿಯಾಗುತ್ತಿರುವಂತೆ ಕಂಡಿತು. ರೋಶನ್ ಯಾರನ್ನೋ ವಿಚಾರಿಸಿದಳು. ಸುರಂಗಾ ದೇವರ ಮನೆಗೆ ಹೊರಟು ಹೋಗಿದ್ದಳು. ಈ ಸಂಗತಿಯಿಂದಾಗಿ ರೋಶನ್‌ಗೆ ತುಂಬಾ ಆಘಾತವಾಯಿತು. ಅವಳಿಗೆ ಅನ್ನ ಸೇರದು. ಸುರಂಗಾ ಆಕೆಯ ಮನಸ್ಸಿನಲ್ಲಿ ಕಾಯಮ್ಮಾಗಿ ಬೀಡುಬಿಟ್ಟಿದ್ದಳು. ಸುರಂಗಾಳ ಮೂರ್ತಿಯನ್ನು ಕಣ್ಣೆದುರು ತಂದುಕೊಂಡು, ವರ್ಷಾನುವರ್ಷ ಪರಮೇಶ್ವರನಿಗೆ ಅವಳು ಪ್ರಾರ್ಥನೆ ಸಲ್ಲಿಸುತ್ತಾ ಬಂದಿದ್ದಳು. ಆದರೆ ದುರ್ದೈವ, ರೋಶನಳಿಗೆ ಮಾತೃತ್ವ

ಲಭಿಸಲೇ ಇಲ್ಲ. ಅದು ಶಲ್ಯದಂತೆ ಯಾವಾಗಲೂ ಮನಸ್ಸನ್ನು ಚುಚ್ಚುತ್ತಿತ್ತು. ಎದುರಿನ ಆ ಚಾಳ್‌ನಲ್ಲಿ, ಪ್ರತಿವರ್ಷ ಅನೇಕ ಮಕ್ಕಳು ಜನ್ಮ ತಳೆಯುತ್ತಿದ್ದರು. ಬೆಳೆದು ದೊಡ್ಡವರಾಗುತ್ತಿದ್ದರು. ಅವರ ಮದುವೆ, ಅವರ ಸಂಸಾರ, ಅವರಿಗೆ ಮಕ್ಕಳು. ಸ್ವತಃ ತಾಯಿಯಾಗದೆ ಇದ್ದರೂ ರೋಶನ್, ಆ ಮಕ್ಕಳನ್ನು ತಾಯಿಯ ಮಮತೆಯ ದೃಷ್ಟಿಯಿಂದ ನೋಡುತ್ತಿದ್ದಳು. ಅವಳ ಜೀವ ಅವರಲ್ಲಿ ಸೇರಿಕೊಂಡಿತ್ತು. ಚಾಳ್‌ನ ಮಕ್ಕಳು ಹೋಟೆಲಿಗೆ ಬಂದರೆ ಆಕೆ ತಿನ್ನಲು ಏನಾದರೂ ಕೊಡದಿರುತ್ತಿದ್ದಿಲ್ಲ. ಆ ಚಾಳ್ ಮತ್ತು ಅಲ್ಲಿಯೇ ಚಿಕ್ಕವರಿದ್ದು ದೊಡ್ಡವರಾದವರು, ಅವರ ಸಂಸಾರ, ರಸ್ತೆಯ ಮೇಲೆ ಯಾವಾಗಲೂ ಕಾಣುತ್ತಿರುವ ಅವೇ ದೃಶ್ಯಗಳು, ಅವಳ ಹೆಸರಿನ ಈ 'ಕೆಫೆ ರೋಶನ್' ಹೋಟೆಲು-ಈ ಎಲ್ಲದರ ಮೇಲೆ ಆಕೆಗೆ ವಾತ್ಸಲ್ಯವಿತ್ತು. ಅವಳ ಜೀವ ಕೂಡಿಕೊಂಡಿತ್ತು. ಎಲ್ಲ ವಾಸ್ತುಗಳಿಗೆ ಅವಳು 'ತಾಯಿ' ಆಗಿಹೋಗಿದ್ದಳು.

ಮದುವೆಯಾಗಿಬಂದ ಕೂಡಲೆ ಇದೇ ಹೋಟೆಲಿನಲ್ಲಿ ಆಕೆ ತನ್ನ ಸಂಸಾರ ಹೂಡಿದ್ದಳು. ಕಳೆದ ಅನೇಕ ವರ್ಷ ಇದೇ ಜಾಗದಲ್ಲಿ ಅವಳು ಮಾತೃತ್ವದ ನಿರೀಕ್ಷೆಯಲ್ಲಿದ್ದವಳು. ನಿಜಾರ್ಥದಲ್ಲಿ ತಾಯಿ ಆಗಿರದಿದ್ದರೂ ಇಲ್ಲಿಯ, ಸುತ್ತಲಿನ ಎಲ್ಲ ಸಂಗತಿಗಳ ಮೇಲೆ ಅವಳಿಗೆ 'ಮಾತೃವತ್ ಪ್ರೇಮ'ವು ಇತ್ತು. ಇವತ್ತಿನ ಈ ಸಂಜೆ ಹಾಗೂ ರಾತ್ರಿ, 'ಕೆಫೆ ರೋಶನ್'ನ ಆಯುಷ್ಯದಲ್ಲಿಯ ಕೊನೆಯ ಸಂಜೆ ಹಾಗೂ ಕೊನೆಯ ರಾತ್ರಿ! ನಾಳೆ ಕೆಫೆ ರೋಶನ್ ಖಾಲಿಯಾಗುವುದರಲ್ಲಿದೆ. ಸದಾ ಗಿಜಗುಟ್ಟುವ ಈ ವಾಸ್ತು ಖಾಲಿಯಾಗಲಿದೆ, ಉಧ್ವಸ್ತಗೊಳ್ಳಲಿದೆ. ರಸ್ತೆಯು ಅಗಲಗೊಳ್ಳುವಾಗ ಅದರ ಅವಶೇಷವೂ ಉಳಿಯಲಾರದು. ವಾಸ್ತು ಇಲ್ಲವಾಗಿ ಹೋಗಿ, ಅಲ್ಲಿ ರಸ್ತೆ ಆಗಲಿತ್ತು. ಅದರ ಮೇಲೆ ಮನುಷ್ಯರು, ವಾಹನಗಳು ಹೋಗಲಿದ್ದುವು.



ಗಾಗಿನ್ ತೈಲಚಿತ್ರ

ಸ್ವೆಟರ್ ನೇಯುತ್ತ ಕುಳಿತ ರೋಶನ್‌ಗೆ ಯಾವುದರ ಮೇಲೂ ಲಕ್ಷ್ಯವಿರಲಿಲ್ಲ. ಹೋಟೆಲಿನಲ್ಲಿ ಗಿರಾಕಿಗಳ ಗದ್ದಲವಿತ್ತು. ಎಲ್ಲರೂ ಎಂದಿನವರೇ, ಪರಿಚಯವಿರುವವರೇ. ಈ ಚಹರೆಗಳು ನಾಳೆಯಿಂದ ಕಾಣಲಾರವು. ನಾಳೆ ಎಲ್ಲ ಕಾರುಭಾರೂ ಮುಗಿಯಲಿದೆ. ಆ ಚಾಳ್, ಚಿರಪರಿಚಿತರಾದ ಮಂದಿ, ನಾಳೆಯಿಂದ ಅವರೆಲ್ಲರ ಸಂಬಂಧ ತನ್ನೊಂದಿಗೆ ಮುಗಿಯುತ್ತದೆ. ಅವರಿಗೆಲ್ಲ ಕಾಯಮ್ಮಾಗಿ ಅಪರಿಚಿತಳಾಗಿ ಹೋಗುವವಳಿದ್ದಳು. ಆ ಚಾಳ್ ಆದರೂ ಎಂತ ಹದ್ದು? ಪುಟ್ಟ ಸುರಂಗಾಳ ನೆನಹುಗಳ ಪ್ರತೀಕ. ಅದರಿಂದ ಆಕೆ ದೂರ ಹೋಗಲಿದ್ದಳು.

ಬೆಳೆಯುತ್ತಿರುವ ನಗರಜೀವನಕ್ಕೆ ರಸ್ತೆಗಳು ಅಗಲವಾಗುವುದು ಅಗತ್ಯವಾಗುತ್ತದೆ. ರಸ್ತೆಯನ್ನು ಅಗಲಗೊಳಿಸುವಾಗ ಹಳೆಯ ವಾಸ್ತುಗಳನ್ನು

ಕೆಡವಲೇಬೇಕಾಗುತ್ತದೆ. ಯಾವ ವಾಸ್ತುವಿನೊಡನೆ ಅನೇಕ ವ್ಯಕ್ತಿಗಳ ಪ್ರದೀರ್ಘ ಸ್ಮೃತಿಗಳು ಸೇರಿಕೊಂಡಿರುತ್ತವೆಯೋ ಅದು ನಾಮಶೇಷವಾಗುತ್ತದೆ. 'ಕೆಫೆ ರೋಶನ್', ರೋಶನಳಿಗೆ ಮೂವತ್ತು ವರ್ಷಗಳ ಅಮೂಲ್ಯ ಸ್ಮೃತಿಗಳ ಒಂದು ಖಜಾನೆಯಾಗಿತ್ತು. ಆಯುಷ್ಯದ ಬಹುಮೂಲ್ಯ ವರ್ಷಗಳನ್ನು ಆಕೆ ಇಲ್ಲಿ ಕಳೆದಿದ್ದಳು. ಎದುರಿನ ಚಾಳ್‌ನಲ್ಲಿ, ಈ ಮೂವತ್ತು ವರ್ಷಗಳಲ್ಲಿ, ಸಣ್ಣವರು, ದೊಡ್ಡವರಾದ ಎಲ್ಲ ಬಾಲಕ-ಬಾಲಕಿಯರನ್ನು ಆಕೆ ಬಲ್ಲಳು. ಅವರನ್ನೆಲ್ಲ ಮರೆಯಲು ಆಕೆಗೆ ಶಕ್ಯವಿರಲಿಲ್ಲ. ಅವರ ಬಾಲರೂಪಗಳನ್ನೆಲ್ಲ ಆಕೆ ತನ್ನಲ್ಲಿ ಜತನ ಮಾಡಿಟ್ಟುಕೊಂಡಿದ್ದಳು. ಅತ್ಯಂತ ಪ್ರೀತಿಯ ಸುರಂಗಾಳಂತೂ ಅವಳ ಹೃದಯದಲ್ಲಿ ಕಾಯಮ್ಮಾಗಿ ಉಳಿದುಕೊಂಡವಳು. ಸುರಂಗಾ ಹೋದನಂತರ ರೋಶನ್, ಪರಮೇಶ್ವರನಲ್ಲಿ ಸದಾ ಪ್ರಾರ್ಥನೆ ಮಾಡುತ್ತ, 'ದೇವರೆ ಸುರಂಗಾಳನ್ನು ನನ್ನ ಹೊಟ್ಟೆಯಲ್ಲಿ ಹುಟ್ಟುವಂತೆ ಮಾಡು!' ಎಂದಿದ್ದಳು. ಆದರೆ ಪರಮೇಶ್ವರನಿಗೆ ಆಕೆಯ ಗೋಳಿನ ಮನವಿ ಕೇಳಿಸಿರಲಿಲ್ಲ.

ಸಂಧ್ಯಾಕಾಲ ಮೆಲ್ಲಗೆ ಸರಿಯಿತು. ರಾತ್ರಿಯಾಗಹತ್ತಿದೆ. ವೇಳೆ ಕಳೆದುದು ಹೇಗೆ ಎಂಬುದೇ ರೋಶನಳಿಗೆ ಅರಿವಾಗಲಿಲ್ಲ. ಸ್ವೆಟರ್ ಹೆಣೆಯುತ್ತಿದ್ದ ಆಕೆ ಗಡಿಯಾರದ ಕಡೆ ನೋಡಿದಳು. ರಾತ್ರಿಯ ಹತ್ತು ಗಂಟೆ. ಎಡ ಬದಿಯ ಚರ್ಚ್‌ನಲ್ಲಿ ಕೆಲವರು ಮೊಣಕಾಲೂರಿ ಪ್ರಾರ್ಥನೆ ಮಾಡುತ್ತಿದ್ದರು. ಎದುರಿನ ಚಾಳ್ ತೇಜೋಹೀನವಾಗಿತ್ತು. ಗಿರಾಕಿಗಳ ಸಂದಣಿ ಕಡಿಮೆಯಾಗಿತ್ತು. ಯುಸುಫ್ ಗಲ್ಲೆಯ ಹಣವನ್ನು ಕೊನೆಯ ಬಾರಿಗೆ ಎಣಿಸತೊಡಗಿದ್ದ. ಅವನ ಚಹರೆಯ ಭಾವವನ್ನು ಗುರುತಿಸಲು ಕಷ್ಟವಾಗುತ್ತಿತ್ತು. ಹೊಸ ಹೋಟೆಲಿನ ಮನೋಮಿನಾರುಗಳನ್ನು ಆಗಲೇ ಕಟ್ಟುತ್ತಿದ್ದಾನೋ ಯಾರಿಗೆ ಗೊತ್ತು! ರಾತ್ರಿ ಹೋಟೆಲ್ ಮುಚ್ಚಿದ ಮೇಲೆ, ನೌಕರರಿಗೆ ಸೂಟಿ ಇತ್ತು, ಅವರಿಬ್ಬರೂ ಊಟ ಮಾಡುತ್ತಿದ್ದರು. ರೋಶನಳಿಗೆ ಇಲ್ಲಿಯ, ಇಂದಿನ ಊಟವು ಕೊನೆಯದ್ದು! ನಾಳೆ ಬೆಳಿಗ್ಗೆ ಟ್ರಕ್ ಮಾಡಿ, ಇಲ್ಲಿಯ ಎಲ್ಲ ಸಾಮಾನುಗಳನ್ನು ಎತ್ತುವುದು! ಅಂದರೆ, ಇವತ್ತಿನದ್ದು ಕೊನೆಯ ರಾತ್ರಿ ಎನ್ನುವುದು ಅರಿವಿಗೆ ಬಂದು ಸ್ವೆಟರ್ ಹೆಣೆಯುವುದನ್ನು ನಿಲ್ಲಿಸಿದಳು. ಊಟ ಸಿದ್ಧಪಡಿಸಲೆಂದು ಎದ್ದಳು. ಹೋಟೆಲಿನ ಬಾಗಿಲು ಮುಚ್ಚಲಾಯಿತು. ಅವರಿಬ್ಬರೂ ಒಂದು ಟೇಬಲ್ ಮೇಲೆ ಊಟಕ್ಕೆಂದು ಕುಳಿತರು. ರೋಶನಳ ಗಂಟಲಲ್ಲಿ ತುತ್ತು ಇಳಿಯುತ್ತಿರಲಿಲ್ಲ. ಕಣ್ಣುಗಳು ತುಂಬಿ ಬಂದವು. ಯುಸುಫ್‌ಗೆ ಮಾತ್ರ ಅದು ಗಮನಕ್ಕೆ ಬರಲಿಲ್ಲ. ಆತ ಮೌನವಾಗಿ ಉಣ್ಣುತ್ತಿದ್ದ.

ಇಡಿಯ ರಾತ್ರಿ ರೋಶನಳಿಗೆ ನಿದ್ರೆ ಬರಲಿಲ್ಲ. ಅವಳ ಕಣ್ಣೆದುರು ಸುರಂಗಾ, ಎದುರಿನ ಚಾಳ್, ಅಲ್ಲಿಯ ಜನ, ಆಚೆಕಡೆಯ ಚರ್ಚ್ ಮತ್ತು ಈ ಹೋಟೆಲ್ ಒಂದರ ಹಿಂದೊಂದರಂತೆ ಬರುತ್ತಲೇ ಇದ್ದುವು. ಮೂವತ್ತು ವರ್ಷಗಳ ಚಿತ್ರಪಟ ಅವಳ ಮನಃಪಟಲದಲ್ಲಿ ಸರಿಯುತ್ತಿತ್ತು. ನಾಳೆಯಿಂದ ಈ ಎಲ್ಲವೂ ನೋಡಲು ಸಿಗಲಾರವು. ಇವತ್ತಿನದ್ದು ಕೊನೆಯ ರಾತ್ರಿ!

ರಾತ್ರಿ ತಡವಾಗಿ ಅವಳಿಗೆ ನಿದ್ದೆ ಹತ್ತಿತ್ತು. ಯಾವಾಗಲೋ ಎಚ್ಚರವಾದಂತಾದಾಗ, ಯುಸುಫ್ ಆಕೆಯನ್ನು ಎಬ್ಬಿಸುತ್ತಿದ್ದ ಮತ್ತು ರಸ್ತೆ ಅಗಲಮಾಡುವ ಕೆಲಸ ಒಂದು ವರ್ಷ ಮುಂದೆ ಹಾಕಿದ್ದಾರೆ ಎಂದು ಹೇಳುತ್ತಿದ್ದ. ಇನ್ನು 'ಕೆಫೆ ರೋಶನ್' ಇಲ್ಲೇ ಉಳಿಯುವುದಿತ್ತು; ಕನಿಷ್ಠ ಒಂದು ವರ್ಷ. ರೋಶನಳಿಗೆ ಅತ್ಯಾನಂದವಾಯಿತು. ಹರ್ಷದಿಂದ ತನಗೆ ಹುಚ್ಚು ಹಿಡಿಯುವುದೋ ಏನೋ ಎಂದು ಭಾಸವಾಗತೊಡಗಿತು. ಆನಂದದಭರದಲ್ಲಿ ಆಕೆ ಹಾಸಿಗೆಯಿಂದ ಮೇಲೇಳತೊಡಗಿದಳು. ಆದರೆ ಏಳಲೇ

ಆಗುತ್ತಿರಲಿಲ್ಲ. ತಲೆಸುತ್ತು ಬಂದಹಾಗೆ ಆಯಿತು. ಅವಳ ಲಕ್ಷ್ಯಕ್ಕೆ ಒಮ್ಮೆಲೆ ಬಂದುದೆಂದರೆ ತನಗೆ ಮುಟ್ಟು ನಿಂತಿದೆ ಎಂಬುದು. ಆಕೆಯ ಇಡಿಯ ಶರೀರ ಎಷ್ಟು ಜಡವಾಯಿತೆಂದರೆ ಮಗ್ಗುಲು ಬದಲಿಸಲೂ ಆಗಲಿಲ್ಲ. ಆದರೆ ಆ ಅವಸ್ಥೆಯಲ್ಲೂ ಆಕೆಗೆ ತೃಪ್ತಿಯೆನಿಸತೊಡಗಿತ್ತು.

ಅವಳ ಕಣ್ಣುಗಳಲ್ಲಿ ವಿಚಿತ್ರ ಮಬ್ಬು ಕವಿದಿತ್ತು. ಗ್ಲಾನಿಯಿಂದಾಗಿ ಅತಿಶಯ ದಣಿವು ಆಗುತ್ತಿದೆ. ಇದೆಲ್ಲವನ್ನು ಯುಸುಫ್‌ಗೆ ಹೇಳಬೇಕು. ಆದರೆ ಅವನು ಆಗಲೇ ಎಲ್ಲೋ ಹೊರಟು ಹೋಗಿದ್ದಾನೆ. ಈಗ ಕೆಲವೇ ತಿಂಗಳುಗಳ ಅವಧಿ ಉಳಿದಿದೆ. ಎಲ್ಲಿ ಇಷ್ಟೆಲ್ಲ ದಿನಗಳನ್ನು ಕಳೆದಳೋ ಆ ವಾಸ್ತು ಈಗ ಫಲಿತವಾಗುತ್ತಿದೆ. ಸುರಂಗಾ ಈಗ ತನ್ನ ಹೊಟ್ಟೆಯಲ್ಲಿ ಜನ್ಮತಾಳಿದ್ದಾಳೆ ಎನ್ನುವುದರ ಖಾತ್ರಿ ಅವಳಿಗಾಯಿತು. ಅವಳು ಹಾಗೆಯೇ ತಡವರಿಸುತ್ತ ಎದ್ದಳು ಮತ್ತು ಅಟ್ಟದ ಮೂಲೆಯಲ್ಲಿ ಇಟ್ಟಿದ್ದ ಪೆಟ್ಟಿಗೆಯ ಬಳಿ ಹೋದಳು. ಆದರೆ ಆಕೆಗೆ ಸ್ವಲ್ಪವೂ ನಡೆಯಲು ಆಗುತ್ತಿಲ್ಲ. ಆ ಪೆಟ್ಟಿಗೆಯಲ್ಲಿ ಶೇಖರಿಸಿಟ್ಟ ಪ್ರಾಣಕ್ಕಿಂತಲೂ ಮಿಗಿಲಾದ ಬಹುಮೂಲ್ಯ ವಸ್ತುಗಳಿದ್ದವು. ಅವಳು ಹೆಣೆದ, ಚಿಕ್ಕ ಸುರಂಗಾಳ ಅಳತೆಯ ಸ್ವೆಟರೂ ಇತ್ತು. ಆ ಪೆಟ್ಟಿಗೆಯನ್ನು ಆಕೆ ಖಾಲಿ ಮಾಡಿದಳು ಮತ್ತು ಆ ಪುಟ್ಟ ಉಣ್ಣೆಯ ಸ್ವೆಟರ್ ಕಡೆ ನೋಡಹತ್ತಿದಳು. ಮಾತೃವಾತ್ಸಲ್ಯದಿಂದ ಅದರ ಮೇಲೆ ಮೃದುವಾಗಿ ಕೈಯಾಡಿಸಿದಳು. ಆದರೆ ಹೆಚ್ಚು ಹೊತ್ತು ಆಕೆಗೆ ಕುಳಿತಿರಲಾಗಲಿಲ್ಲ. ಹೊಟ್ಟೆ ಹಿಂಡಿದಂತೆ ಆಗಿ ವಿಲಕ್ಷಣ ನೋವು ಉಂಟಾಗತೊಡಗಿತು. ಅಸಹ್ಯವಾಗತೊಡಗಿತು. ಹೇಗೋ ಎದ್ದಳು. ಹೋಗಿ ಹಾಸಿಗೆಯ ಮೇಲೆ ಬಿದ್ದುಕೊಂಡಳು. ಹಾಗೆಯೇ ಎಷ್ಟು ಹೊತ್ತು ಸರಿಯಿತೋ ಏನೋ? ಆಕೆಗೆ ಒಮ್ಮೆಲೆ ಎಚ್ಚರವಾಯಿತು. ಜಾಗ್ರತಾವಸ್ಥೆಯಲ್ಲಿ ಇರುವೆನೋ, ಭ್ರಮಾವಸ್ಥೆಯಲ್ಲಿರುವೆನೋ ಅವಳಿಗೆ ತಿಳಿಯದಾಯಿತು. ಆದರೆ ಅವಳಿಗೆ ವಿಚಿತ್ರವಾದ ಹಗುರುತನದ ಭಾಸವಾಯಿತು. ಬದಿಗೆ ಕೈಯಾಡಿಸಿದಳು. ಅವಳ ಕೈಗೆ ಏನೋ ತುಂಬು ಜೀವದ ಸ್ಪರ್ಶವಾಯಿತು.

ಆ ಸ್ಪರ್ಶದಿಂದ ಅವಳು ಒಮ್ಮೆಲೆ ಹೌಹಾರಿದಳು. ಅದ್ಯಾವ ಸ್ಪರ್ಶಕ್ಕೆಂದು ಆಕೆ ಇಷ್ಟೆಲ್ಲಾ ವರ್ಷ ಕಾದಿದ್ದಳೋ ಅದೇ ಸ್ಪರ್ಶವಾಗಿತ್ತದು. ಅವಳ ಮಗ್ಗುಲಲ್ಲಿ ದುಪಟ್ಟಾದಲ್ಲಿ ಸುತ್ತಲ್ಪಟ್ಟ ಮಗುವಿತ್ತು. ಸುರಂಗಾ? ಹೌದು, ನಿಜಕ್ಕೂ ಸುರಂಗಾಳೇ. ಅವಳು ಸಟಕ್ಕನೇ ತನ್ನ ಮಡಿಲಲ್ಲಿ ಎತ್ತಿಕೊಂಡಳು. ಅವಳ ಜೀವನವು ಸಾರ್ಥಕವಾಯಿತು.

ಬೆಳಿಗ್ಗೆ ಟ್ರಕ್‌ನ ಶಬ್ದದಿಂದ ರೋಶನ್ ಎಚ್ಚರಕೊಂಡಳು. ಯುಸುಫ್ ಆಕೆಯನ್ನು ಎಬ್ಬಿಸುತ್ತಿದ್ದ. ಅವಳು ಬೆಚ್ಚಿದವಳಾಗಿ ಎದ್ದಳು. ಇದುವರೆಗೆ ಏನೆಲ್ಲವನ್ನು ಅನುಭವಿಸುತ್ತಿದ್ದಳೋ ಅವೆಲ್ಲ ಬರೀ ಕನಸುಗಳೇ! ಎಲ್ಲಾ ಆಭಾಸ-ಎಲ್ಲವೂ ಭ್ರಮೆ. ಆ

ರಂಗಾ ಮರಾಠೆ, ಮರಾಠಿಯ ಮುಂಚೂಣಿ ಕತೆಗಾರರಲ್ಲಿ ಒಬ್ಬರು. ಬೇರು ಕಿತ್ತುಕೊಂಡು ಮಹಾನಗರಕ್ಕೆ ಬಂದು ಹಣ್ಣಾದ ಜೀವಿಗಳ ತಲ್ಲಣಗಳನ್ನು ಇವರ ಕತೆಗಳು ಹೇಳುತ್ತವೆ. ಮೇಲ್ನೋಟಕ್ಕೆ ಶುಷ್ಕ, ಧೂಳು ಕೂತ ವಿಗ್ರಹಗಳಂತೆ ತೋರುವ ಮರಾಠೆಯವರ ಪಾತ್ರಗಳಲ್ಲಿ ಬೆಚ್ಚಗಿನ ಜೀವನದಿ ಗುಪ್ತವಾಗಿ ಹರಿಯುತ್ತದೆ.

ಸಂತೆಯೊಳಗಿನ ಏಕಾಂತದ ರಾಗದಂತಿರುವ 'ಕೆಫೆ ರೋಷನ್' ಕತೆಯನ್ನು ಕನ್ನಡಕ್ಕೆ ತಂದಿರುವ **ರತ್ನಾಕರ ಶೆಟ್ಟಿ** ಮೂರು ದಶಕಗಳಿಂದ ಮುಂಬೈಯಲ್ಲಿ ಕನ್ನಡದ ಕೆಲಸವನ್ನು ಮಾಡಿಕೊಂಡುಬಂದಿರುವ ಬರಹಗಾರ.

ಸ್ಪರ್ಶ-ಆ ಸುರಂಗಾ - ಎಲ್ಲವೂ ಕನಸೇ? ನಿನ್ನೆಯ ರಾತ್ರಿ, ಕೊನೆಗೂ ಕೊನೆಯ ರಾತ್ರಿಯೇ ಆಗಿ ಹೋಯಿತಾ? ಈ ವಾಸ್ತು, ಈ ಜಾಗೆಯಲ್ಲಿ ಅವೆಲ್ಲ ಮುಗಿದುಹೋದವೇ? ಆಕೆಯ ದೃಷ್ಟಿ ಮೂಲೆಯಲ್ಲಿಯ ಪೆಟ್ಟಿಗೆಯತ್ತ ಹೋಯಿತು. ಅದು ಇದ್ದಲ್ಲೇ ಇದೆ. ಆಕೆಯ ಅಮೂಲ್ಯ ವಸ್ತು, ಆ ಉಣ್ಣೆಯ ಸ್ವೆಟರ್ ಇದ್ದಲ್ಲಿಯೇ ಇದೆ.

ಟ್ರಕ್ ಜೊತೆ ಬಂದವರು, ಸಾಮಾನುಗಳನ್ನೆತ್ತಿ ಭರಭರನೆ ಗಾಡಿಯ ಮೇಲೆ ಹೇರುತ್ತಿದ್ದರು. ಅವರಲ್ಲಿ ಒಬ್ಬ ಬಂದು, ಪೆಟ್ಟಿಗೆಯನ್ನೆತ್ತಿ, ಅಟ್ಟದಿಂದ ಮೆಟ್ಟಿಲನ್ನು ಇಳಿದುಹೋಗಿ ಅದನ್ನು ಟ್ರಕ್ಕಿನಲ್ಲಿಟ್ಟ.

ಬೆನ್ನು ಮಾಡಿಹೋದ ಆ ಮನುಷ್ಯನನ್ನೇ ರೋಶನ್ ದಿಟ್ಟಿಸಿದಳು. ಸತ್ಯ ಮತ್ತು ಆಭಾಸಗಳ ವಿಲಕ್ಷಣ ಕತ್ತರಿಯಲ್ಲಿ ಸಿಕ್ಕಿಕೊಂಡವಳಂತೆ ಅವಳ ಸ್ಥಿತಿ ಆಯಿತು. ಆಗ ಘಟಿಸಿದೆಲ್ಲವೂ ಸತ್ಯವೇ, ಆಭಾಸವೇ? ಈಗ ಕಾಣುತ್ತಿರುವುದೆಲ್ಲ ನಿಜವೇ, ಅಲ್ಲ ಸುಳ್ಳೇ?

ಮಾನಸಿಕ ಒತ್ತಡದಿಂದ ಅವಳಿಗೆ ವಿಲಕ್ಷಣ ದಣಿವಾಯಿತು. ಅಟ್ಟದ ಮೆಟ್ಟಲುಗಳಿಂದ ಕೆಳಗಿಳಿದುಬಂದಳು. ಅವಳಿಗೆ ಈಗೆಲ್ಲ, ಎಲ್ಲವೂ ಹಾಳುಸುರಿಯುವಂತೆ ಕಾಣಿಸತೊಡಗಿತು. ಹೋಟೆಲು ಹೆಚ್ಚಿನ ಮಟ್ಟಿಗೆ ಖಾಲಿಯಾಗಿತ್ತು. ಅದೆಲ್ಲ ನೋಡಿ ಅವಳ ಕಾಲುಗಳಿದ್ದ ಎಲ್ಲ ಶಕ್ತಿ ಇಲ್ಲವಾಗಿಹೋಯಿತು. ಜಾತ್ರೆಯ ತೊಟ್ಟಿಲುಗಳಂತೆ ಇಡಿಯ ಜಗತ್ತು ಅವಳ ಸುತ್ತ ವೇಗದಿಂದ ಸುತ್ತತೊಡಗಿತು. ಗಟ್ಟಿಯಾಗಿ ಕಣ್ಮುಚ್ಚಿಕೊಂಡಳು, ಅಲ್ಲೇ ಕುಸಿದು ಬಿದ್ದಳು.

ಅದೇ ವೇಳೆ ಹೋಟೆಲ್ 'ಕೆಫೆ ರೋಶನ್'ನ ಬೋರ್ಡನ್ನು ತೆಗೆಯುವುದರಲ್ಲಿ ಯುಸುಫ್ ಮಗ್ನನಾಗಿದ್ದ.

ಮರಾಠಿಯಿಂದ ಕನ್ನಡಕ್ಕೆ: **ರತ್ನಾಕರ ಶೆಟ್ಟಿ**








ನೀವು ಓದಿದ ಕೃತಿಯ ಪಾತ್ರವೊಂದು ಇಷ್ಟ ದೇವತೆಯಾಗಿ ನಿಮ್ಮನ್ನು ಕಾಡಿರಬಹುದು. ರೋಲ್ ಮಾಡೆಲ್ ಆಗಿ ನಿಮ್ಮನ್ನು ರೂಪಿಸುತ್ತಿರಬಹುದು. ನಿಮ್ಮನ್ನು ಕಲಕಿ, ಮನದಲ್ಲಿ ನೆಲೆಯೂರಿದ ಇಂತಹ ಸ್ಫೂರ್ತಿದೇವತೆಗಳ ಬಗ್ಗೆ, ಅವರು ನಿಮ್ಮ ನಿಲುವನ್ನು, ದಾರಿಯನ್ನು ಪ್ರಭಾವಿಸಿದ ಬಗ್ಗೆ ಒಂದು ಫುಲ್‌ಸ್ಕೇಪ್ ಹಾಳೆಗೆ ಮೀರದಂತೆ ಬರೆದು ಕಳುಹಿಸಿ. ನಿಮ್ಮ ಈ ಪುಟ, ಸಾಹಿತ್ಯ ಮತ್ತು ಬದುಕಿನ ವಿಶಿಷ್ಟ ಗುಣಾತ್ಮಕ ಸಂಬಂಧದ ಮೇಲೆ ಬೆಳಕು ಚೆಲ್ಲಬಹುದು.

# 'ಅಳಿದ ಮೇಲೆ'
# ಕಾದಂಬರಿಯ ಯಶವಂತರಾಯ

ಶಿವರಾಮ ಕಾರಂತರ 'ಅಳಿದ ಮೇಲೆ' ಕಾದಂಬರಿಯ ನಾಯಕ ಯಶವಂತರಾಯ ಸದಾ ಕಾಡುವ ಕನಸಿನಂತೆ, ಮನಸಿನಲಿ ಹಸಿರಾಗಿದ್ದಾನೆ.

ಮನುಷ್ಯ, ಜೀವನದಲ್ಲಿ ಬೆಳೆದು ವ್ಯಕ್ತಿಯಾಗುವಲ್ಲಿ, ಸಮಾಜದಿಂದ ನೀರು ಗೊಬ್ಬರಗಳನ್ನು ಪಡೆದೇ ಬೆಳೆಯಬೇಕು. ಅಂಥ ಸಮಾಜಕ್ಕೆ ಹಣ್ಣು, ನೆರಳು ಕೊಡುವುದು ಬೆಳೆದ ಮರದ ಕರ್ತವ್ಯವೂ ಹೌದು. ಮನುಷ್ಯ ಬೆಳೆಯಲು ಕುಟುಂಬ, ಬಂಧುಗಳು, ಸ್ನೇಹಿತರು, ಅಪರಿಚಿತರು ಕಾರಣೀಕರ್ತರಾಗಿರುತ್ತಾರೆ, ಭಾವಬುದ್ಧಿ ವಿಕಾಸ ಹೊಂದಿದ ಮನುಷ್ಯ ಅವರೆಲ್ಲರ ಋಣಭಾರ ಇಳಿಸುವುದು ಅಪೇಕ್ಷಣೀಯ.

ಯಶವಂತರಾಯ ತನ್ನ ಭಾವಪ್ರವಾಹದಲ್ಲಿ ಬುದ್ಧಿ, ವಿವೇಕ, ವೈಚಾರಿಕತೆಯ ಬಾಗಿಲುಗಳನ್ನು ಎಂದಿಗೂ ಮುಚ್ಚಿರಲಿಲ್ಲ. ಜೀವನದ ಮುಸ್ಸಂಜೆಯಲ್ಲಿ ಪರಾವಲಂಬಿಯಾಗದೆ, ಜೀವನಶ್ರದ್ಧೆ ಉಳಿಸಿಕೊಂಡು ಹೆಂಡತಿ, ಮಕ್ಕಳು, ಬಂಧುಗಳಿಂದ

ದೂರವಾದ ಮುಂಬೈಯಲ್ಲಿ ವಾಸವಾದರೂ ಯಾರ್‍ಯಾರಿಗೆ ಏನು ಸಲ್ಲಬೇಕೋ ಅವುಗಳ ವ್ಯವಸ್ಥೆ ಮಾಡಿಯೇ ಏಕಾಕಿತನಕ್ಕೆ ಹೋದವನು. ಎಂದಿಗೂ ಜೀವನಪ್ರೇಮ ಕಳೆದುಕೊಂಡವನಲ್ಲ.

ಪರರಿಂದ ಕಷ್ಟ ಪಡೆದದ್ದರಲ್ಲಿ, ತಾನು ತೀರಿಸಿದ್ದನ್ನು ಕಳೆದು ಉಳಿಯುವುದೇ ಜೀವನ; ಸಾವು ಮನುಷ್ಯನನ್ನು ವಿಚಲಿತಗೊಳಿಸಬಾರದು. ಬೆಳಗಿನ ಎಲೆಯ ಮೇಲಿನ ಮಳೆಯ ಬಿಂದುವಿನಂತೆ ಸಂಪರ್ಕದಲ್ಲಿದ್ದೂ ತಟಸ್ಥನಾಗಿರಬೇಕು. ಯಾವುದರಲ್ಲಿಯೂ ಕರಗದೆ ನನ್ನಲ್ಲಿಯ ನಾನು, ನನ್ನಿಂದ ಹೊರಬಂದು, ನನ್ನನ್ನೇ ಅವಲೋಕಿಸುವ ಕಲೆಗಾರಿಕೆ ಬೇಕು. ಯಶವಂತರಾಯ ಹಲವು ಸಂಬಂಧಗಳಲ್ಲಿ ಸವೆಯಲಿಲ್ಲ. ಪೂರ್ವಕಲ್ಪಿತ ಮೌಲ್ಯಗಳಿಗೆ ಬಂಧಿಯಾಗದೆ, ದೇಹ ಹಸಿದಾಗ ತಣಿಸಿದವನು, ನಿಸರ್ಗ ಪ್ರವಾಹವನ್ನು ಮನೋಬಲ ತಡೆಯುವುದು ಒಂದು ಮುಖವಾಡವೆನಿಸಬಹುದು.

ಆತ್ಮವ್ಯಾಮೋಹಿಯಾಗದೆ, ಜೀವನ ಪ್ರೇಮಿಯಾಗಿ, ಬದುಕಿನ ನಿಗೂಢ ಭೇದಿಸುವ ಕ್ರಿಯಾಶೀಲ ಗುಬ್ಬಚ್ಚಿಯಂತೆ ಯಶವಂತರಾಯ ನನ್ನ ಬದುಕಿನೊಳಗೆ ಹಾಸು ಹೊಕ್ಕಿದ್ದಾನೆ.

ಬಿಜಾಪುರ

**ಪ್ರಸಾದ ಗೋಖಲೆ**



# ‘ಯಯಾತಿ’ಯ ಖಾಂಡೇಕರ್

ನೆನಪಿನಾಳಕ್ಕೆ ಪಾತಾಳಗರಡಿ ಇಳಿಬಿಟ್ಟು ಗೋರಾಡಿದಾಗ, ಸಿಕ್ಕು ಮೇಲೆ ಬಂದದ್ದು ತ್ರಿವೇಣಿ, ಕಾರಂತ, ತ.ರಾ.ಸು., ಭೈರಪ್ಪ ಮುಂತಾದ ಹಲವು ಲೇಖಕರ ಕಾದಂಬರಿಗಳ ಪಾತ್ರಗಳು; ಆಯ್ಕೆಗಾಗಿ ಮತ್ತೆ ಮತ್ತೆ ಜರಡಿಯಾಡಿದಾಗ ಉಳಿದ ಕೆಲವು ಪಾತ್ರಗಳಲ್ಲಿ ಅಂತಿಮವಾಗಿ ಹಾಗೂ ಅನಿವಾರ್ಯವಾಗಿ ನಾನು ಆರಿಸಿಕೊಳ್ಳುವಂಥಾದ್ದು ಜ್ಞಾನಪೀಠ ಪ್ರಶಸ್ತಿ ವಿಜೇತ ವಿ.ಸ. ಖಾಂಡೇಕರರ ‘ಯಯಾತಿ’ ಪಾತ್ರವನ್ನು! ಆದರೆ ನಾನು ಒಪ್ಪಿಕೊಳ್ಳಬೇಕಾದ ಸತ್ಯವೊಂದಿದೆ; ನನ್ನ ಸ್ಫೂರ್ತಿದೇವತೆ ಯಯಾತಿಯಲ್ಲ, ಖಾಂಡೇಕರ್ ಎಂಬುದನ್ನು!

ಎಲ್ಲ ಯುದ್ಧಗಳ ಕಾರಣ ಅಥವಾ ಎಲ್ಲ ಮಹಾಕಾವ್ಯಗಳ ಮೂಲಸತ್ತ್ವ ಮಾನವನ ಮಹತ್ತ್ವಾಕಾಂಕ್ಷೆ, ಅತೃಪ್ತಿ ಹಾಗೂ ಸುಖಾಪೇಕ್ಷೆ. ನನ್ನನ್ನೂ ಒಳಗೊಂಡಂತೆ ಲೋಕದ ಬಹಳಷ್ಟು ಜನರು , ಅವರು ರಾಜಕಾರಣಿಗಳಿರಲಿ, ಅಧಿಕಾರಿಗಳಿರಲಿ, ವರ್ತಕರಿರಲಿ, ವಿಚಾರವಾದಿ ಪ್ರಾಧ್ಯಾಪಕರಿರಲಿ, ಅಥವಾ ಧರ್ಮಗುರುಗಳಿರಲಿ – ಬೇರೆ ಬೇರೆ ಡಿಗ್ರಿಗಳ ಯಯಾತಿ ಪ್ರತಿನಿಧಿಗಳಾಗಿಯೇ ಕಾಣಿಸುತ್ತಾರೆ; ಏಕೆಂದರೆ ಯಯಾತಿ ಸುಖಮುಖಿ; ಎಂದೂ ತೃಷೆ ಇಂಗದ ವ್ಯಕ್ತಿ; ಸ್ವಂತ ಮಗನಿಂದಲೇ ತಾರುಣ್ಯ ಬಯಸುವಾತ. ಇಂದು ಹಣ, ಅಧಿಕಾರ, ಕೀರ್ತಿಗಳ ಸುತ್ತಲೇ ಬದುಕು ಗಿರಕಿ ಹೊಡೆಯುತ್ತಿದೆ, ಅದಕ್ಕಾಗಿಯೇ ಜನರ ಒಡನಾಟ, ಒಡ್ಡಾಟ ಎಲ್ಲ. ಮಾನವೀಯತೆ ಪ್ರಾಮಾಣಿಕತೆ ಮುಂತಾದ ಮೌಲ್ಯಗಳು ಇಂದು ಗೇಲಿಗೀಡಾಗುತ್ತಿವೆ. ಭಾವನಾಜೀವಿಗಳು ವಾಸ್ತವ ಬದುಕನ್ನು ಎದುರಿಸುವುದು ಕಷ್ಟವೇ.

ಯಯಾತಿ ಕಾದಂಬರಿಯಲ್ಲಿ ಆಂಗೀರಸ ಋಷಿಯ ಮಾತಿದು: ‘‘ಮನುಷ್ಯನ ಜೀವನ ಹಾಗೂ ಮನಸ್ಸುಗಳ ಹೆಣಿಕೆ ವಿಲಕ್ಷಣವಾದದ್ದು. ಆದರಿಂದಾಗಿ ಅನೇಕ ಸಲ, ಸುಖ ಮರೀಚಿಕೆಯ ಶೋಧವಾಗುತ್ತದೆ. ಸುಖ ಎನ್ನುವುದು ದುಃಖದ ನೆರಳಾಗಿದೆಯೋ ಅಥವಾ ದುಃಖ, ಸುಖದ ನೆರಳಾಗಿದೆಯೋ ಎನ್ನುವುದು ಇಷ್ಟು ತಪಸ್ಸಾನ್ನಾಚರಿಸಿದರೂ ನನಗೆ ಸಮಸ್ಯೆಯಾಗಿಯೇ ಉಳಿದಿದೆ.’’

ಯಯಾತಿ ಪೌರಾಣಿಕ ಕಾದಂಬರಿಯಾದರೂ ನನಗೆ ಮತ್ತೆ ಮತ್ತೆ ಓದಬೇಕೆನ್ನಿಸುತ್ತದೆ; ಅದು ಅತ್ಯಂತ ‘ವರ್ತಮಾನ’ ಕಾದಂಬರಿಯಾಗಿ ಕಾಣಿಸುತ್ತದೆ. ದೃಷ್ಟಿ ಹರಿದಲ್ಲೆಲ್ಲ ಯಯಾತಿ ಮನಸ್ಸುಗಳೇ ಕಾಣುತ್ತವೆ! ಒಂದು ನಿತ್ಯನೂತನ ಕಾದಂಬರಿಯನ್ನು ಕೊಟ್ಟ ಖಾಂಡೇಕರರನ್ನು ನಿಬ್ಬೆರಗಿನಿಂದಲೂ, ಗೌರವದಿಂದಲೂ ಕಳೆದ ಎರಡು-ಮೂರು ದಶಕಗಳಿಂದ ನೋಡುತ್ತಿದ್ದೇನೆ. ಅವರ ಪ್ರತಿಭೆ, ಪಾಂಡಿತ್ಯ ಹಾಗೂ ಕಲಾತ್ಮಕತೆ ನನಗೆ ಪ್ರೇರಕ ಶಕ್ತಿಗಳಾಗಿವೆ. ಒಟ್ಟಿನಲ್ಲಿ ನಾನೂ ಕಡಿಮೆ ಯಯಾತಿಯಾಗಲು ನಿತ್ಯ ಹೆಣಗುತ್ತಿದ್ದೇನೆ!

ಮೈಸೂರು **ಎಚ್. ಎಂ. ಎಸ್. ರಾವ್**

ಶತಮಾನದ ಮೆಲುಕು - 5



ಯರ್ಮುಂಜ ರಾಮಚಂದ್ರ

# ಸ್ನೇಹಿತರು

ಕೊಜ್ಜಿ ಆಳುದ್ದ ಬೆಳೆದು ನಿಂತ, ಹಸುರು ಹಸುರಾದ, ತೆನೆ ತುಂಬಿ ಬಳುಕುವ ಬತ್ತದ ಪೈರು; ತೋಟಗಳಲ್ಲಿ ಹಣ್ಣು ಹಣ್ಣಾಗಿ, ಕೆಂಪಾಗಿ ತೊಳೆಯುವ, ಮಣಗಟ್ಟಲೆ ಅಡಿಕೆಗಳನ್ನು ಹೊತ್ತು ಅತ್ತಿತ್ತ ತೂಗುವ ಅಡಿಕೆ ಮರಗಳು; ಹಸುರು ಹಸುರಾದ ತೆಂಗಿನ ಗರಿಗಳ ಎಡೆಯಿಂದ ಇಣುಕುವ, ಎಳೆಗೆಂಪಿನ ನೂರಾರು ಎಳನೀರುಗಳು; ಅವು ಇವು ಎಂದಿಲ್ಲ, ರಾಮಯ್ಯನವರ ಆ ಗೇಣುದ್ದ ಆಸ್ತಿ, ಊರಿನ ಎಲ್ಲರ ಕಣ್ಣುಗಳನ್ನೂ ಆಕರ್ಷಿಸುತ್ತಿತ್ತು. ಕಳೆದ ಸಲ ರಾಮಯ್ಯನವರು ತಮ್ಮ ಆ ಗೇಣುದ್ದದ ಭೂಮಿಯಲ್ಲಿ ಏನೆಲ್ಲ ಬೆಳೆಸಿದ್ದರೋ, ಅವೆಲ್ಲವನ್ನೂ ಎಂದಿಗಿಂತ ಒಂದೂವರೆ ಪಾಲಷ್ಟು ಹಣಕ್ಕೆ ತೆಗೆದುಕೊಳ್ಳಲು ಎಷ್ಟೋ ಗಿರಾಕಿಗಳು ಸಿದ್ಧರಿದ್ದರು. ರಾಮಯ್ಯನವರೂ ತಮ್ಮ ಒಂದು ವರ್ಷದ ಬಾಳ್ವೆಗೆ ಬೇಕಾದಷ್ಟನ್ನು ಇಟ್ಟುಕೊಂಡು, ಉಳಿದುದನ್ನು ಮಾರಿದ್ದರು. ಕೆಲವರು, ''ರಾಮಯ್ಯ ಸುರಿಸಿದ ಬೆವರು ಸಾರ್ಥಕವಾಯಿತು'' ಎಂದರು. ಆದರೆ ಕೆಲವರಿಗೆ ರಾಮಯ್ಯನವರ ಆಸ್ತಿಯನ್ನು ನೋಡುವಾಗ ಮನಸ್ಸು ಹೇಗೆ ಹೇಗೋ ಆಗುತ್ತಿತ್ತು; ಏನೇನೋ ಗಾಳಿಗೋಪುರವನ್ನು ಕಟ್ಟುತ್ತಿತ್ತು.

ಇಂಥವರಲ್ಲಿ ಒಬ್ಬರು ಕೆಳಮನೆ ಶಿವಣ್ಣನವರು; ರಾಮಯ್ಯನವರ ಸಲುಗೆಯ ಸ್ನೇಹಿತರು.



ರಾಮಯ್ಯನವರ ಜೀವದ ಗೆಳೆಯರು ಯಾರು? ಎಂದರೆ, ಮೊದಲು ಕಣ್ಣಿಗೆ ತೋರುವವರು ಶಿವಣ್ಣ. ಶಿವಣ್ಣನವರಿಗೂ ರಾಮಯ್ಯನವರಿಗೂ ಮನಸ್ತಾಪವಾಗಿದೆ ಎಂದರೆ ಊರವರೊಬ್ಬರೂ ಒಪ್ಪಲಾರರು. ಅಡಕೆಯ ವ್ಯಾಪಾರಕ್ಕೆ ಮಂಗಳೂರಿಗೆ, ಸುಬ್ರಹ್ಮಣ್ಯದ ಜಾನುವಾರು ಸಂತೆಗೆ, ಉಡುಪಿಯ ಪರ್ಯಾಯಕ್ಕೆ, ಧರ್ಮಸ್ಥಳದ ಲಕ್ಷದೀಪಕ್ಕೆ - ಎಲ್ಲಿಗೆ ಹೋಗುವುದೇ ಇರಲಿ, ರಾಮಯ್ಯ ಮತ್ತು ಶಿವಣ್ಣ ಜೊತೆಯಾಗಿಯೆ ಹೋಗುತ್ತಿದ್ದರು. ಇವರು ಏನಾದರೂ ಅಂದರೆ, ಅವರು "ಹೂಂ" ಎನ್ನುವರು. ಅವರೇನಾದರೂ ಸೂಚನೆ ತಂದರೆ ಇವರು ಅದಕ್ಕೆ ಒಪ್ಪುವರು. ಯಾವ ಒಂದು ಕಾರ್ಯವಾಗಬೇಕಾದರೂ ಇಬ್ಬರ ಒಪ್ಪಿಗೆಯೂ ಬೇಕಿತ್ತು. ಆದರೆ ಅವರ ಗೆಳೆತನದಲ್ಲಿ ಒಪ್ಪದಿರುವ ಕ್ರಮವೇ ಇರಲಿಲ್ಲ. ಒಬ್ಬರು ಏನಾದರೂ ಹೇಳಿದರೆ, ಅದನ್ನು ಇನ್ನೊಬ್ಬರು ಒಪ್ಪಿಯೇ ಒಪ್ಪುತ್ತಿದ್ದರು. ಇದು ಅವರಿಗೆ ಅಭ್ಯಾಸವಾಗಿತ್ತು.

ಇದೇ ಗೆಳೆತನದ ಕಾಲದಲ್ಲಿ ರಾಮಯ್ಯನವರ ಬಡತನವನ್ನು ಕಂಡು, ತನ್ನ ಬಂಜರು ಭೂಮಿಯಿಂದ ಒಂದು ತುಂಡನ್ನು ಶಿವಣ್ಣ ಅವರಿಗೆ ಕೊಟ್ಟರು. ಕೊಡುವಾಗ, "ಏನು ಮಾಡಲೀ? ನನ್ನ ಆಸ್ತಿಯೆಲ್ಲವೂ ಹೀಗೆಯೇ ಇದೆ" ಎಂದು, "ಈಗ ನಿಮ್ಮಲ್ಲೇನೂ ಇಲ್ಲ; ನನಗೆ ಗೊತ್ತಿದೆ. ಈ ನೆಲದಲ್ಲಿ ಹೊಟ್ಟೆ ತುಂಬಿಸಿಕೊಳ್ಳಲು ಏನಾದರೂ ದಾರಿಯಾದರೆ, ಮತ್ತೆ ನಿಮ್ಮ ನಮ್ಮ ವ್ಯವಹಾರ ನೋಡಿಕೊಳ್ಳುವ!" ಎಂದರು.




ಅದು ನಿಜವಾಗಿತ್ತು. ಶಿವಣ್ಣನವರ ಆಸ್ತಿ ಇದ್ದದ್ದು ಇದ್ದಂತೆಯೇ ಇತ್ತು; ಆದರೆ ರಾಮಯ್ಯನವರದು ಹಾಗಾಗಲಿಲ್ಲ. ಸ್ವತಃ ಬೆವರು ಸುರಿಸಿ ದುಡಿಯತೊಡಗಿದರು. ಗದ್ದೆಯ ಅರ್ಧಭಾಗದಲ್ಲಿ ಅಡಕೆ, ತೆಂಗುಗಳನ್ನು ನೆಟ್ಟರು. ಮನೆಯ ಹಿಂದಿನ ಗುಡ್ಡದಿಂದ ಆಚೆಗೆ, ಕೆಳಗಿಳಿದು ನದಿಯನ್ನು ಸೇರುತ್ತಿದ್ದ ನೀರಿನ ಒರತೆಯನ್ನು ತಮ್ಮ ಗದ್ದೆ ತೋಟಗಳೆಡೆಗೆ ತಿರುಗಿಸಿದರು. ಆಳುಗಳೊಡನೆ ತಾವೇ ಹಾರೆ ಹಿಡಿದು ದುಡಿಯುತ್ತಿದ್ದರು. ಆಳುಗಳಿಗೂ ಅವರೆಂದರೆ ಪ್ರೀತಿ. ಬಿಸಿಲಿನಲ್ಲಿ ಆಯಾಸಗೊಂಡಾಗ, ರಾಮಯ್ಯನವರ ಪತ್ನಿ ಗೌರಮ್ಮ ತಂಪಾದ ಮಜ್ಜಿಗೆನೀರು ಕೊಡುತ್ತಿದ್ದರು. ಆಳುಗಳೂ ಉತ್ಸಾಹದಿಂದ ದುಡಿಯುತ್ತಿದ್ದರು.

ಇವೆಲ್ಲದರ ಫಲವಾಗಿ, ಹಿಂದೆ ಯಾರಿಗೂ ಬೇಡವೆಂದೆನಿಸಿದ್ದ ಆ ಆಸ್ತಿ, ಹತ್ತು ವರ್ಷಗಳಲ್ಲಿ ನಂದನವನದಂತಾಯಿತು. ರಾಮಯ್ಯನವರು ಸ್ವಲ್ಪ ಸ್ವಲ್ಪವಾಗಿ ದುಡ್ಡು ಕೂಡಿಹಾಕಿ, ಎರಡು ಮೂರು ವರ್ಷಗಳಲ್ಲಿ ಸಾವಿರ ರೂಪಾಯಿಗಳನ್ನು ಸಂಗ್ರಹಿಸಿಕೊಂಡು ಶಿವಣ್ಣನವರ ಕೈಯಲ್ಲಿಟ್ಟರು.

"ನಾನು ನಿಮಗೆ ಕೊಟ್ಟದ್ದು ಬಂಜರು ಭೂಮಿ; ಅದಕ್ಕೆ ಸಾವಿರ ರೂಪಾಯಿಗಳೇ!" ಎಂದು ನಗುತ್ತ ಶಿವಣ್ಣ ಅದನ್ನು ತಿರುಗಿ ರಾಮಯ್ಯನವರ ಕೈಯಲ್ಲಿಟ್ಟರು. ರಾಮಯ್ಯನವರು ಎಷ್ಟು ಮಾತ್ರಕ್ಕೂ ಒಪ್ಪಲಿಲ್ಲ. ಎಷ್ಟೋ ಸಮಯ ಬೇಡಿಕೊಂಡ ನಂತರ, ಒಲ್ಲದ

ಮನಸ್ಸಿನಿಂದ ಅದನ್ನು ಹೊತ್ತುಕೊಂಡು ಶಿವಣ್ಣ ಮನೆ ಮುಟ್ಟಿದರು. ''ಅನ್ಯಾಯವಾಗಿ ಸಾವಿರ ರೂಪಾಯಿ ಪಡೆಯುತ್ತಿದ್ದೇನಲ್ಲ...!'' ಎನ್ನುತ್ತಿತ್ತು ಅವರ ಮನಸ್ಸು.

ಆದರೆ ಯಾವುದೋ ಒಂದು ರೀತಿಯ ಅಸೂಯೆ ಶಿವಣ್ಣನವರ ಮನಸ್ಸಿನಲ್ಲಿ ಹೊಗೆಯಾಡುತ್ತಿದ್ದುದರ ಅರಿವು, ಅವರಿಗೇ ಮೊದಲು ಇರಲಿಲ್ಲ. ತಮ್ಮ ಮನೆಯಿಂದ ತುಸು ದೂರದಲ್ಲೇ, ನಳನಳಿಸುವ ರಾಮಯ್ಯನವರ ನಂದನವನದಂತಿರುವ ತೋಟದ, ಕೊಬ್ಬಿರುವ ಭತ್ತದ ಸಸಿಗಳ ಕಡೆಗೆ ಅವರ ಕಣ್ಣುಗಳು ಮತ್ತೆ ಮತ್ತೆ ಹೋಗುತ್ತಿದ್ದುವು; ಅವುಗಳನ್ನೇ ತದೇಕ ದೃಷ್ಟಿಯಿಂದ ನೋಡುತ್ತಿದ್ದರು. ಆದರೆ ಇದರಿಂದಾಗಿ ರಾಮಯ್ಯ-ಶಿವಣ್ಣರೊಳಗಣ ಸ್ನೇಹಕ್ಕೇನೂ ಕೊರತೆಯೆನಿಸುತ್ತಿರಲಿಲ್ಲ. ಎಂದಿನಂತೆಯೇ ಶಿವಣ್ಣ, ರಾಮಯ್ಯನವರ ಮನೆಗೆ ಹೋಗಿ ಹರಟೆ ಹೊಡೆಯುತ್ತಿದ್ದರು. ತುಸು ಹೊತ್ತಾದೊಡನೆಯೇ, ''ಇನ್ನು ತೋಟಕ್ಕೆ ನೀರು ಬಿಡಬೇಕಷ್ಟೆ, ಬರುತ್ತೇನೆ'' ಎಂದು ಕತ್ತಿ ತೆಗೆದುಕೊಂಡು ರಾಮಯ್ಯನವರು ಹೊರಡುತ್ತಿದ್ದರು. ಶಿವಣ್ಣ ಶೂನ್ಯಮನಸ್ಕರಾಗಿ ಎತ್ತಲೋ ನೋಡಿಕೊಂಡು, ಏನೇನನ್ನೋ ಯೋಚಿಸುತ್ತ, ತಮ್ಮ ಮನೆಗೆ ಹೋಗುತ್ತಿದ್ದರು. ದಿನ ಕಳೆದಂತೆ, ಯಾರಾದರೂ ರಾಮಯ್ಯನವರ ತೋಟದ ಸುದ್ದಿ ತೆಗೆದೊಡನೆಯೆ, ಶಿವಣ್ಣ ಯಾವುದಕ್ಕೂ ಮನಕೊಡದೆ, ಒಬ್ಬಂಟಿಗರಾಗಿ ಯೋಚಿಸುತ್ತಿದ್ದರು. ರಾಮಯ್ಯನವರು ತಮ್ಮ ತೋಟದ ಈ ವರ್ಷದ ಬೆಳೆ, ತಾವು ಆಯಾ ದಿನ ಮಾಡಿದ ಕೆಲಸ, ಈ ವರ್ಷ ಸಿಗುವ ಲಾಭದ ಅಂದಾಜು, ಇವುಗಳ ಕುರಿತು ಮಾತನಾಡುತ್ತಿದ್ದರು. ಆದರೆ ತೋಟದ ಸುದ್ದಿ ತೆಗೆದೊಡನೆಯೇ ಶಿವಣ್ಣನವರು ಎತ್ತಲೋ ನೋಡತೊಡಗುವರು. ರಾಮಯ್ಯನವರ ವಿವರಣೆಗಳಿಗೆ ಮಾತ್ರ, ''ಹೂಂ, ಹೂಂ'' ಎನ್ನುವರು. ಮನಸ್ಸಿನಲ್ಲಿ ಏನೇನೋ ಸಾವಿರ ಯೋಚನೆಗಳನ್ನು ಮಾಡುವರು. ರಾಮಯ್ಯನವರು ತೋಟಕ್ಕೆ ಹೊರಟರೆಂದರೆ, ತಾವೂ ಅವರೊಡನೆ ಅಂಗಳಕ್ಕಿಳಿದು, ರಾಮಯ್ಯನವರೂ ಹೋದರೂ ಕೂಡ, ಅಲ್ಲೇ ಅಂಗಳದಲ್ಲಿ ಯೋಚಿಸುತ್ತ ನಿಲ್ಲುವರು. ರಾಮಯ್ಯನವರ ಮಗ ಗೋಪಾಲ ತಮ್ಮನ್ನು ಮಾತನಾಡಿಸಿದರೂ ಅವನೊಡನೆ ಹಿಂದಿನ ಸ್ನೇಹವಿಲ್ಲ. ಮೊದಲು ಊರೂರಿನ ಜಾತ್ರೆಗಳಿಗೆ, ಬಯಲಾಟಗಳಿಗೆ, ಅವನನ್ನು ತಾವೇ ಎತ್ತಿಕೊಂಡುಹೋಗುತ್ತಿದ್ದರು. ಅವನು ಕೇಳಿದುದನ್ನೆಲ್ಲ ತೆಗೆಸಿಕೊಡುತ್ತಿದ್ದರು. ಶಿವಣ್ಣನವರೊಡನೆ ಗೋಪಾಲ ಎಲ್ಲಿಗೆ ಹೋದರೂ, ಮನೆಗೆ ಬರುವಾಗ ಅವನ ಜೇಬು ಖಾಲಿಯಾಗಿ ಇರುತ್ತಿರಲಿಲ್ಲ. ಆದರೂ ಅವನೊಡನೆ ಈಗೇಕೋ ಆ ಮೊದಲಿನ ಆನಂದದ ಆಟಗಳಿಲ್ಲ.

ಗೋಪಾಲ ಒಮ್ಮೊಮ್ಮೆ ಕೇಳುವ, ''ಯಾವುದೋ ಮೇಳಕ್ಕೆ ಆಟ ಇತ್ತಂತಲ್ಲ ಮಾವ, ಮೊನ್ನೆ ಕಬಕದಲ್ಲಿ?''

''ಹುಂ...'' ಎಂದು ಅಷ್ಟರಲ್ಲೇ ನಿಲ್ಲಿಸುವರು ಶಿವಣ್ಣ.

''ಮತ್ತೇಕೆ ಕರೆದುಕೊಂಡು ಹೋಗಲಿಲ್ಲ?,'' ಗೋಪಾಲ ಶಿವಣ್ಣನವರ ಕೈ ಹಿಡಿದು ಕೇಳುವ.

''ಯಾಕೋ... ಯಾವುದೋ ಕೆಲಸ ಇತ್ತು!'' ಎಂದು ಮೆಲ್ಲಮೆಲ್ಲನೆ ಶಿವಣ್ಣ ಕೈ ಬಿಡಿಸಿಕೊಳ್ಳುತ್ತಿದ್ದರು. ಇನ್ನೊಮ್ಮೆ ಗೋಪಾಲ ಯಾವುದೋ ಜಾತ್ರೆಯ ಸುದ್ದಿ ತೆಗೆಯುವ. ಅದಕ್ಕೂ ಏನೇನೋ ಕೆಲಸದ ಕಾರಣಗಳು ಶಿವಣ್ಣನವರದು. ಮತ್ತೆ ಗೋಪಾಲ ಅವರೊಡನೆ ಕೇಳುವುದನ್ನೇ ಬಿಟ್ಟ. ಆದರೂ ತಾನು ಆಡುವಾಗ, ಮನೆಯೆದುರು ಮೌನವಾಗಿ ನಿಂತಿದ್ದ ಶಿವಣ್ಣನವರನ್ನು ಕರೆಯುತ್ತಿದ್ದ. ಎರಡು ಮೂರು ಸಲ ಕರೆದ ನಂತರ ಅವರಿಗೆ ಅದು ಕೇಳಿಸುವುದು. ''ಆಂ...?'' ಎಂದುಕೊಂಡು ತಿರುಗಿ ತಮ್ಮ ಯೋಚನೆಯಲ್ಲಿ ಮಗ್ನರಾಗುವರು. ಗೋಪಾಲ ಮತ್ತೆ ಮತ್ತೆ ಕರೆಯುವ. ಸಾಧ್ಯವಾಗದೆ ಬೇಸರ

ದಿಂದ ಬಂದು ಅವರ ಕೈಹಿಡಿದು ಕರೆದುಕೊಂಡು ಹೋಗುವ. ಆದರೆ ಇದೊಂದರ ಅರಿವೂ ಶಿವಣ್ಣನವರಿಗೆ ಆಗುತ್ತಿರಲಿಲ್ಲ. ತಮಗರಿವಿಲ್ಲ ದಂತೆಯೇ ಗೋಪಾಲ ಎಳೆದ ಕಡೆಗೆ ಅವರು ಹೋಗುವರು. ಅವನು ಕೈ ಹಿಡಿದು ಜಗ್ಗಿದ ಅನಂತರ ಕುಳಿತುಕೊಳ್ಳುವರು. ಮತ್ತೇನಾದರೂ ಗೋಪಾಲ ಹೇಳಿದರೆ, ಎತ್ತಲೋ ನೋಡು ತ್ತಿದ್ದವರು ಗೋಪಾಲನೆಡೆಗೆ ತಿರುಗಿ ಅವನನ್ನೇ ದಿಟ್ಟಿಸಿ ನೋಡುವರು. ಕೊನೆಗೆ ಬೇಸರವಾಗಿ, ಗೋಪಾಲ ಎಲ್ಲಿಯಾದರೂ ಬೇರೆಡೆಗೆ ಎದ್ದು ಹೋಗಿ ಒಬ್ಬನೇ ಆಡುತ್ತಿದ್ದ. ಶಿವಣ್ಣ ಅಲ್ಲೇ ಕುಳಿತುಕೊಂಡು ದೂರದ ದಿಗಂತದತ್ತ ನೋಡುತ್ತಿದ್ದರು. ಕತ್ತಲಾಯಿತೆಂದು ಗೌರಮ್ಮ ನವರು ಗೋಪಾಲನನ್ನು ಕರೆದರೆ, ''ಹಾಂ'' ಎಂದು ಕೊಂಡು ಶಿವಣ್ಣನವರೂ ಅಲ್ಲಿಂದ ಎದ್ದು, ತಮ್ಮ ಮನೆಯ ಕಡೆಗೆ ಮೆಲ್ಲಮೆಲ್ಲನೆ ನಡೆಯುತ್ತಿದ್ದರು.

ದಿನ ಕಳೆದಂತೆ ಶಿವಣ್ಣನವರು ರಾಮಯ್ಯ ನವರ ಮನೆಗೆ ಬರುವುದು ಕಡಿಮೆಯಾಗ ತೊಡಗಿತು. ಹಿಂದಿನ ಶಿವಣ್ಣನವರನ್ನು ನೆನಸಿ ಕೊಂಡು ಗೌರಮ್ಮನವರು, ''ಏಕಪ್ಪ ಹೀಗಾದರು?'' ಎನ್ನುತ್ತಿದ್ದರು. ರಾಮಯ್ಯನವರಿಗೂ 'ಹೀಗೇಕೋ' ಎಂದು ತಿಳಿಯದಾಯಿತು. ಆಗಾಗ ಶಿವಣ್ಣನವರ ಮನೆಗೆ ತಾವೇ ಹೋಗತೊಡಗಿದರು. ಏನಾ ದರೂ ಮಾತಿನ ನಡುವೆ ''ನಿನ್ನೆ ಏಕೆ ಬರಲಿಲ್ಲ?'' ಎಂದರೆ, ''ಹೀಗೇ... ಬೇಸರವಾಯಿತು'' ಎಂದು ಕಾರಣ ಹೇಳುತ್ತಿದ್ದರು, ಶಿವಣ್ಣ. ಉಳಿದ ಎಲ್ಲ ಮಾತುಗಳಿಗೂ 'ಹೂಂ...' ಎಂಬುದು ಮಾತ್ರ ಅವರ ಉತ್ತರ. ರಾಮಯ್ಯನವರ ಪ್ರಶ್ನೆ ಗಳಿಗೆ ಯಾವುದಾದರೂ ಚುಟುಕಿನ ಉತ್ತರ ಹೇಳಿ ಮುಗಿಸುತ್ತಿದ್ದರು. ತೋಟದ ಸುದ್ದಿ ಬಂದೊಡನೆ ಆ 'ಹೂಂ'ಗುಟ್ಟುವಿಕೆಯೂ ನಿಂತು, ದೃಷ್ಟಿಯಲ್ಲೋ ದೂರದಲ್ಲಿ ನೆಲೆಸುತ್ತಿತ್ತು. ಏನಾದರೂ ನೆವ ಹೇಳಿ ಮನೆಯಿಂದ ಹೊರಟು, ದೂರ ಎಲ್ಲಾದರೂ ಹೋಗಿ, ಒಬ್ಬರೇ ಕುಳಿತು



**ಯರ್ಮುಂಜ ರಾಮಚಂದ್ರ**

**(1933-1955)**

ಕನ್ನಡ ಸಾಹಿತ್ಯದಲ್ಲಿ ಕೋಲ್ಮಿಂಚಿನಂತೆ ಮಿಂಚಿ ಮರೆಯಾದ ಅಪರೂಪದ ಪ್ರತಿಭಾವಂತ **ಯರ್ಮುಂಜ ರಾಮಚಂದ್ರ**. ದಕ್ಷಿಣ ಕನ್ನಡದ ಪುತ್ತೂರಿನ ಸಮೀಪ ಕಬಕದಲ್ಲಿ 1933ರಲ್ಲಿ ಹುಟ್ಟಿದ ರಾಮಚಂದ್ರ, ಇಪ್ಪತ್ತೆರಡನೆ ವಯಸ್ಸಿನಲ್ಲೇ ಕ್ಷಯರೋಗಕ್ಕೆ ಬಲಿಯಾದರು. ತಮ್ಮ ಕಿರು ಆಯುಷ್ಯದಲ್ಲೇ ಅಧ್ಯಾಪಕರಾಗಿ, ಪೋಸ್ಟ್‌ಮಾಸ್ಟರಾಗಿ, ಪತ್ರಕರ್ತನಾಗಿ ಕೆಲಸ ಮಾಡಿ ಜನಪ್ರಿಯರಾಗಿದ್ದರು. ''ಯಾರಿಲ್ಲಿಗೆ ಬಂದರು ಕಳೆದಿರುಳು,'' ''ಕಲ್ಪನೆ'', ''ರೋಗಿಯ ಚಿಂತೆ''ಯಂಥಾ ಕವನಗಳಿಂದ ಒಳ್ಳೆಯ ಕವಿಯೆಂದು ಸ್ಮರಣೀಯರಾದರೂ ಯಾಕೋ ಅವರ ಕತೆಗಳು ಮರವೆಗೆ ತುತ್ತಾಗಿವೆ. ಸಾವಿಗೆ ಮುನ್ನ 1954ರಲ್ಲಿ ಪ್ರಕಟವಾದ ಅವರ ''ಚಿಕಿತ್ಸೆಯ ಹುಚ್ಚು ಮತ್ತು ಇತರ ಕತೆಗಳು'' ಸಂಗ್ರಹದಿಂದ ತೆಗೆದುಕೊಳ್ಳಲಾದ 'ಸ್ನೇಹಿತರು' 'ಕತೆ' ಮನುಷ್ಯನ ಭಾವನಾತ್ಮಕ ಸಂಬಂಧಗಳಲ್ಲಿ ಹಣದ ಪಾತ್ರ ಮತ್ತು ಅದರಿಂದ ಮೂಡುವ ಕ್ರೌರ್ಯ, ವಿರೂಪಗಳನ್ನು ಉತ್ಪ್ರೇಕ್ಷೆಯಿಲ್ಲದೆ ಚಿತ್ರಿಸುತ್ತದೆ. ಈ ಅಪರೂಪದ ಕತೆಯನ್ನು ಮಾಹಿತಿಯೊಂದಿಗೆ ದೊರಕಿಸಿ ಕೊಟ್ಟ ಸಾಹಿತಿ **ರಾಮಚಂದ್ರ**ದೇವ ಅವರಿಗೆ ನಾವು ಆಭಾರಿ.





ಶಿಲ್ಪ: ಶಾಂತಲಿಂಗಪ್ಪಾ ಪಾಟೀಲ

ಯೋಚಿಸುತ್ತಿದ್ದರು. ರಾಮಯ್ಯನವರು "ಇವನೇಕೆ ಹೀಗಾದ?" ಎಂದು ಯೋಚಿಸುತ್ತ ಮನೆಗೆ ಮರಳುತ್ತಿದ್ದರು.

ಬರಬರುತ್ತ ಶಿವಣ್ಣನವರ ಯೋಚನೆ ಬಲವಾಗತೊಡಗಿತು. "ನನ್ನ ತೋಟದಲ್ಲಿ ಇವನ ಭಾಗ್ಯ ಇಷ್ಟಾಯಿತೇ?... ಇವನಿಗೆ ಬುದ್ಧಿ ಕಲಿಸುತ್ತೇನೆ" ಎಂದು ಮನಸ್ಸಿನಲ್ಲೇ ಲೆಕ್ಕ ಹಾಕತೊಡಗಿದರು. ರಾಮಯ್ಯನವರ ಮನೆಗೆ ಹೋಗುವುದು ಬರಬರುತ್ತ ಕಡಿಮೆಯಾಗಿ, ಕೊನೆಗೆ ನಿಂತೇ ಹೋಯಿತು. ರಾಮಯ್ಯನವರು ತಮ್ಮೆಡೆಗೆ ಬರುವುದನ್ನು ದೂರದಿಂದ ಕಂಡೊಡನೆಯೇ, ಮನೆಯ ಹಿಂದಿನ ಬಾಗಿಲಿನಿಂದ ಗುಡ್ಡದ ಕಡೆಗೆ ಹೋಗಿಬಿಡುತ್ತಿದ್ದರು. ಎದುರು ಸಿಕ್ಕಿದರೂ 'ಏನು?' 'ಒಳ್ಳೇದು' ಎನ್ನುವಷ್ಟೇ ಮಾತುಕತೆಯಾಗುತ್ತಿತ್ತು. ರಾಮಯ್ಯನವರು ತಿರುಗಿ ಏನನ್ನಾದರೂ ಹೇಳುವಷ್ಟರಲ್ಲೇ, ವೇಗವಾಗಿ ನಡೆದು ಶಿವಣ್ಣ ಎಷ್ಟೋ ದೂರ ಹೋಗಿಬಿಡುತ್ತಿದ್ದರು. ರಾಮಯ್ಯ ಬೆಪ್ಪಾಗಿ, ದೂರದಲ್ಲಿ ಹೋಗುತ್ತಿರುವ ಅವರನ್ನು ನೋಡುತ್ತ ನಿಲ್ಲುವರು.

ರಾಮಯ್ಯನವರ ಮಾಲುಗಳಿಗೆ ತಮ್ಮದರ ಎರಡರಷ್ಟು ಬೆಲೆ ಬಂತು ಎಂಬ ಸುದ್ದಿ ತಿಳಿದ ದಿನವೇ ಶಿವಣ್ಣನವರು ತಮ್ಮ ಮನೆಯಿಂದ ಅದೃಶ್ಯರಾದರು. "ಎರಡು ದಿನ- ಮಂಗಳೂರಿಗೊಮ್ಮೆ ಹೋಗಿ ಬರುತ್ತೇನೆ" ಎಂದು ಮನೆಯಲ್ಲಿ ತಿಳಿಸಿ, ಪುತ್ತೂರಿನ ರಸ್ತೆ ಹಿಡಿದು, ಮುಂದೆ ನಡೆಯತೊಡಗಿದರು. ತಾನು ಎತ್ತ ಹೋಗುತ್ತಿದ್ದೇನೆ ಎಂಬ ಅರಿವಿಲ್ಲದೆ ನಡೆಯುತ್ತಿದ್ದರು. ಇವರ ಪರಿಚಯದ ಬಸ್ಸಿನವನೊಬ್ಬ, ಬಸ್ಸು ನಿಲ್ಲಿಸಿ, 'ಬನ್ನಿ' ಎಂದ. ಶಿವಣ್ಣ ಬಸ್ಸನ್ನೇರಿದರು.

'ಎಲ್ಲಿಗೆ?' ಎಂದ ಬಸ್ಸಿನವ.

ಶಿವಣ್ಣನವರು ಏನೋ ನೆನಪಾದಂತಾಗಿ "ಮಂಗಳೂರು" ಎಂದರು. ಬಸ್ಸಿನವ ಬೆಪ್ಪಾಗಿ ಇವರನ್ನೇ ನೋಡುತ್ತಿದ್ದ. ಜನರೂ ಇವರನ್ನೇ ಮಿಕಿ ಮಿಕಿ ನೋಡುವುದನ್ನು ಕಂಡು, ಏನೋ ತಪ್ಪಾದವರಂತೆ ಸುತ್ತುಮುತ್ತು ನೋಡಿ, "ಆಂ...? ಹೌದು... ಪುತ್ತೂರಿಗೆ!" ಎಂದರು.

ಜನರ, ಬಸ್ಸಿನ, ಯಾವುದರ ಅರಿವೂ ಇಲ್ಲದೆ ಶಿವಣ್ಣ ಹೊರಗೆ ನೋಡುತ್ತಿದ್ದರು. ದೂರದಲ್ಲಿ ಹೋಗುವ ಯಾರನ್ನೋ ರಾಮಯ್ಯನವರೆಂದು ಭ್ರಮಿಸಿ, "ಓಹೋ, ಇಲ್ಲಿಗೂ ಬಂದಿದ್ದೀಯಾ?" ಎಂದು ತಮಗರಿವಿಲ್ಲದೆಯೆ ನುಡಿದರು.

ಬಸ್ಸು ನಿಂತಾಗ ಶಿವಣ್ಣನವರಿಗೆ ಬಡಿದೆಬ್ಬಿಸಿದಂತಾಯಿತು. ಅವರು ಎದ್ದು ಇಳಿಯತೊಡಗಿದರು.

''ಇಲ್ಲ... ಪುತ್ತೂರಿಗಿನ್ನೂ ಎರಡು ಮೈಲು'' ಎಂದ ಬಸ್ಸಿನವ.

ಶಿವಣ್ಣನವರಿಗೆ ಅರಿವಾಯಿತು. ಸುತ್ತುಮುತ್ತು ತಮ್ಮನ್ನೇ ಎಲ್ಲರೂ ನೋಡುತ್ತಿದ್ದುದನ್ನು ಕಂಡು ಅವರಿಗೆ ನಾಚಿಗೆಯೆನಿಸಿತು.

''ಹೂಂ, ಹೌದು, ನಾನಿಲ್ಲೇ ಇಳಿಯುತ್ತೇನೆ'' ಎಂದು ಶಿವಣ್ಣ ಇಳಿದೇಬಿಟ್ಟರು. ಬಸ್ಸು ದೂರದಲ್ಲಿ ಕಣ್ಮರೆಯಾಗಿ ಹೋಯಿತು.

ಶಿವಣ್ಣನವರು ಎಲ್ಲೆಲ್ಲೋ ಅಲೆದರು, ಎರಡು ದಿನ. ಕೆಲವು ನೆಂಟರ ಮನೆಗೆ ಹೋದರು. ಕೆಲವು ಸಲ ಅಪರಿಚಿತರ ಮನೆಗೆ ಹೋದರು. ಹೋದಲ್ಲೆಲ್ಲ ಇವರನ್ನು ಕಣ್ಣರಳಿಸಿ ನೋಡುವವರೇ. ''ಏನು ಬಂದಿರಿ?'' ಎಂದು ಕೇಳಿದಾಗಲೇ, ಇವರು ಅಪರಿಚಿತರು ಎಂದು ತಿಳಿಯುತ್ತಿದ್ದುದು ಶಿವಣ್ಣನವರಿಗೆ. ''ಏನಿಲ್ಲ, ಏನಿಲ್ಲ'' ಎಂದು ಆಗ ಅಲ್ಲಿಂದ ಹೊರಡುತ್ತಿದ್ದರು. ಸಿಕ್ಕಿಸಿಕ್ಕಿದ ದಾರಿಗಳನ್ನೆಲ್ಲ ಅಲೆಯುತ್ತಿದ್ದರು. ಒಮ್ಮೆ ಪೇಟೆಗೆ ಹೋಗಿ, ಕೋವಿಮದ್ದು ತೆಗೆದುಕೊಂಡರು. ಎಷ್ಟರದೋ ರೂಪಾಯಿಯ ಒಂದು ನೋಟನ್ನು ಅವನೆದುರಿಟ್ಟು ಮುಂದೆ ಹೊರಟರು.

ಎರಡು ದಿನ ಎಲ್ಲೆಲ್ಲೋ ಅಲೆದು, ಕೊನೆಗೆ ಶಿವಣ್ಣ ಮನೆ ಸೇರಿದರು. ಅಂದಿನಿಂದ ಮನೆಯ ಹೊರಗೆ ಮುಖ ತೋರಿಸುವುದನ್ನೂ ಬಿಟ್ಟರು. ಒಬ್ಬೊಂಟಿಗರಾಗಿರುತ್ತಿದ್ದರು. ಒಮ್ಮೆ ಕೋವಿಯನ್ನು ಚೆನ್ನಾಗಿ ಒರೆಸಿ, ಹೊಳೆಯುವಂತೆ ಮಾಡುವರು. ಮತ್ತೊಮ್ಮೆ ಸರಿಯಾಗಿದೆಯೇ ಇಲ್ಲವೇ ಎಂದು ಪರೀಕ್ಷಿಸುವರು. ಒಮ್ಮೊಮ್ಮೆ ಅದರೊಳಗೆ ಕೋವಿಮದ್ದು ತುಂಬಿಸಿ ಇಡುವರು. ಮತ್ತೊಮ್ಮೆ ''ಬೇಡ, ಅನ್ಯಾಯ!'' ಎಂದುಕೊಂಡು ಅದನ್ನೆಲ್ಲ ಹೊರಗೆ ತೆಗೆಯುವರು.

ಇರುಳಾಯಿತು. ಗೌರಮ್ಮನವರು ಗಂಡನಿಗೂ, ಮಗನಿಗೂ ಅನ್ನ ಬಡಿಸಿ, ಗೋಡೆ ಗೊರಗಿ ನಿಂತು, ಗಂಡನೊಡನೆ ಏನೇನೋ ಹೇಳತೊಡಗಿದರು. ಗೋಪಾಲ ಥಕ್ಕನೆ ಏನೋ ನೆನಪಾದಂತಾಗಿ, ''ನಾಳೆ ಕಬಕದ ಜಾತ್ರೆ'' ಎಂದ. ಆದರೆ ಅವರಾರೂ ಇದನ್ನು ಕಿವಿಯಲ್ಲಿ ಹಾಕಿಕೊಳ್ಳಲಿಲ್ಲ. ಗೋಪಾಲ ಮತ್ತೆ ಮತ್ತೆ ತನ್ನ ಸಮೀಪ ನಿಂತ ಗೌರಮ್ಮನವರ ಕೈಹಿಡಿದು, ''ಅಮ್ಮ, ಅಮ್ಮ, ನಾಳೆ ಹೋಗಬೇಕು!'' ಎಂದ.

ಗೌರಮ್ಮನವರು ಏನೋ ತುಸು ಕೇಳಿಸಿದವರಂತೆ, ''ಹೂಂ, ಎಲ್ಲಿಗೆ?'' ಎಂದು ಅಷ್ಟಕ್ಕೇ ನಿಲ್ಲಿಸಿ, ತಿರುಗಿ ಗಂಡನೊಡನೆ ಮಾತಿನಲ್ಲಿ ಮಗ್ನರಾದರು.

''ಅಮ್ಮ...'', ಗೋಪಾಲ ಗೌರಮ್ಮನವರ ಕೈಯನ್ನು ತಿರುಗಿ ಜಗ್ಗತೊಡಗಿದ.

''ಹೂಂ, ಹೂಂ,...ಏನು?'' ಎಂದು ಗೌರಮ್ಮ ಮಗನೆಡೆಗೆ ತಿರುಗಿದರು.

''ನಾಳೆ ಜಾತ್ರೆ... ಹೋಗಬೇಕೂ!'' ಗೋಪಾಲ ಕೇಳಿದ.

''ಹೌದು, ಯಾರಿಗೆ ಸಮಯ ಸಿಕ್ಕುತ್ತದೆ ನಿನ್ನನ್ನು ಕರೆದುಕೊಂಡು ಹೋಗಲಿಕ್ಕೇ?'' ಎಂದು ಗೌರಮ್ಮನವರು ತುಸು ದೂರ ಸರಿದು, ತಿರುಗಿ ಏನನ್ನೋ ಪತಿಯೊಡನೆ ಕೇಳಲು ಬಾಯಿ ತೆರೆದರು.

''ಹಾಗಾದರೆ... ಶಿವಣ್ಣ ಮಾವ ಕರೆದುಕೊಂಡು ಹೋಗುತ್ತಿದ್ದ!''

''ಅವರಿಗೇನು? ಮನೆಯ ಕಡೆಯ ಯೋಚನೆಯೇ ಅವರಿಗಿಲ್ಲ. ಎಲ್ಲಿಯಾದರೂ ತಿರುಗಿಕೊಂಡು ಇರುತ್ತಾರೆ. ಒಕ್ಕಲು ತಂದ ಗೇಣಿಯನ್ನು ತೆಗೆದುಕೊಳ್ಳುತ್ತಾರೆ. ಅವರ ಹಾಗೆ ಖರ್ಚುಮಾಡಲು ನಮ್ಮಿಂದ ಹೇಗಾದೀತು? ಹೂಂ, ಇರಲಿ ಉಣ್ಣು ನೀನೊಮ್ಮೆ ಬೇಗ!'' ಎಂದು ಗೌರಮ್ಮನವರು ತಾವು ಕೇಳಬೇಕೆಂದಿದ್ದ ಪ್ರಶ್ನೆಯನ್ನು ಮರೆತು ಪತಿಯ ಮುಖವನ್ನೇ ನೋಡತೊಡಗಿದರು.

''ಅದ್ಯಾಕಮ್ಮ... ನಮಗೂ ತೋಟ ಎಲ್ಲ ಉಂಟಲ್ಲ?'', ಗೋಪಾಲ ಗೌರಮ್ಮನವರ ಮುಖವನ್ನೇ ನೋಡತೊಡಗಿದ.

''ಎಲ್ಲಿದೆ ತೋಟ? ಶಿವಣ್ಣನವರ ತೋಟವನ್ನು ಅವರು ಕೇಳಿದಾಗ ಕೊಡಬೇಕಲ್ಲ! ಇನ್ನಾದರೂ ಕೂಡ ಆ ಸಾವಿರ ರೂಪಾಯಿ ಕೊಟ್ಟು, ತೋಟ ಬಿಡು ಎಂದರೆ ಬಿಡಬೇಕು! ತೋಟ ನಮ್ಮದು ಎನ್ನಲು ನಾವೇನು ಕಾಗದ ಪತ್ರ ಮಾಡಿಕೊಂಡಿದ್ದೇವೆಯೇ?'' ಎಂದು ರಾಮಯ್ಯನವರು ಕೈತೊಳೆಯುತ್ತ ತಮ್ಮೊಳಗೇ ಹೇಳಿಕೊಂಡು, ನಿಧಾನವಾಗಿ ಹೊರಚಾವಡಿಗೆ ಬಂದರು.



ರಾಮಯ್ಯನವರು ಉಂಡು ಹೊರಗೆ ಬಂದು, ವೀಳ್ಯಹಾಕಲು ಕುಳಿತಿದ್ದರಷ್ಟೆ; ಏನನ್ನೋ ಕಿವಿಗೊಟ್ಟು ಆಲಿಸತೊಡಗಿದರು. ಮಡಚಿದ ವೀಳ್ಯವನ್ನು ಅಲ್ಲೇ ಬಿಟ್ಟು, ಬಾಯಿಗೆ ಹಾಕಿಕೊಂಡ ಅಡಕೆಯ ಪರಿವೆಯೂ ಇಲ್ಲದೆ, ಮೆಲ್ಲನೆ ಒಳಗೆ ಹೋಗಿ ಬೆಟರಿ ಲೈಟನ್ನು ಹಿಡಿದುಕೊಂಡು ಹೊರಗೆ ಬಂದರು. ಅಂಗಳಕ್ಕಿಳಿದು ತಿರುಗಿ ಏನನ್ನೋ ಆಲಿಸತೊಡಗಿದರು. ಯಾರೋ ನಡೆಯುವ ಸದ್ದು ಬರಬರುತ್ತ ಕಡಿಮೆಯಾಗುತ್ತಿತ್ತು. ರಾಮಯ್ಯನವರು ದೂರಕ್ಕೆ ಬೆಳಕು ಹಿಡಿದರು. ಕಂಬಳಿ ಹೊದೆದ ಒಂದು ಮನುಷ್ಯಾಕೃತಿ, ಶಿವಣ್ಣನವರ ಮನೆಯ ಕಡೆಗೆ ಹೋಗುತ್ತಿತ್ತು- ರಾಮಯ್ಯನವರ ಮನೆಯ ಕಡೆಯಿಂದ. ರಾಮಯ್ಯನವರು ತುಸು ಹೊತ್ತು ಅಲ್ಲೇ ಕುಳಿತು, ಆ ಕತ್ತಲನ್ನು ನೋಡುತ್ತಿದ್ದರು. ಕೊನೆಗೆ ಒಂದು ಬೆತ್ತ ಹಿಡಿದುಕೊಂಡು, ''ಬರುತ್ತೇನೆ ಈಗ'' ಎಂದು ಹೇಳಿ, ತೋಟದ ಕಡೆಗೆ ಹೊರಟರು. ತೋಟ ನಿಶ್ಶಬ್ದವಾಗಿತ್ತು. ಒಂದೇ ಸವನೆ ಯಾವುದೋ ಒಂದು ಹಕ್ಕಿ ಚೀರಿಡುತ್ತಿತ್ತು. ಆಗಾಗ ಬೀಳುವ ಅಡಕೆ, ಹರಿಯುವ ಜಂತುಗಳ ಸರಸರ ಸದ್ದು - ಇವು ಒಮ್ಮೊಮ್ಮೆ ಮೌನವನ್ನು ಕದಡುತ್ತಿದ್ದುವು. ತುಸು ಹೊತ್ತು ಎಲ್ಲೆಲ್ಲೋ ತಿರುಗಿ ರಾಮಯ್ಯನವರು, ಕೊನೆಗೆ ಮನೆಗೆ ಬಂದು, ನಿದ್ದೆಹೋದರು.

ಆ ದಿನ ರಾತ್ರಿಯಿಡೀ ಯೋಚನೆಗಳಿಂದಾಗಿ ಶಿವಣ್ಣನವರಿಗೆ ನಿದ್ದೆ ಬರಲಿಲ್ಲ. ''ನಾನೆಂಥ

ಕೆಲಸಕ್ಕೆ ಹೋಗಿದ್ದೆ!'' ಎಂದುಕೊಂಡು ಮೂಲೆಯಲ್ಲಿದ್ದ ಕೋವಿಯನ್ನು ನೋಡುವರು. ''ನಾನು ಕೇಳಬೇಕಂತೆ, ಹೇಗೆ ಕೇಳಿಯೇನು? ಸಾವಿರ ರೂಪಾಯಿಗಳನ್ನು ಇದೇ ಕೈಯಿಂದ ತೆಗೆದುಕೊಂಡು, ಇನ್ನು ತಿರುಗಿ ತೋಟವನ್ನು ಹೇಗೆ ಕೇಳಬೇಕು? ಅಥವಾ ಅವನಾಗಿಯೇ ಕೊಟ್ಟರೂ ಕೂಡ ಯಾವ ಮುಖದಿಂದ ತೆಗೆದುಕೊಂಡೇನು? ಅವನೇ ಸಾಕಿದ ಆಸ್ತಿಯನ್ನು?... ಛೇ, ಇನ್ನೇನು ಮಾಡೋಣ? ಬೇಡ, ಅವನಿಗೇ ಇರಲಿ ಆ ತೋಟ, ಅವನೇ ಅಲ್ಲವೆ ಅದನ್ನು ಉತ್ತಮವಾಗಿ ಮಾಡಿದವನು? ಯಾತಕ್ಕೂ ಬೇಡದ ಆ ನೆಲವನ್ನು ಅವನಿಗೆ ಕೊಟ್ಟು, ಇನ್ನು ಯಾವ ನಾಲಗೆಯಿಂದ ಅದನ್ನು ತಿರುಗಿ ಕೇಳಲಿ? ಆದರೆ... ಆದರೆ... ಎಷ್ಟು ಸುಂದರವಾಗಿದೆ ಅದು! ಅವ ಅದನ್ನು ಎಷ್ಟು ಉತ್ತಮವಾಗಿ ಮಾಡಿದರೂ ನನ್ನದೇ ಅಲ್ಲವೆ ಅದು? ಈ ತನಕ ಅದರ ಲಾಭವನ್ನು ಪಡೆದುದಕ್ಕಾಗಿ ಅವನೇ ಅದನ್ನು ತಿರುಗಿ ಕೊಡಬೇಡವೆ? ಆದರೆ... ಕೊಟ್ಟರೆ... ನಾನದನ್ನು ಹೇಗೆ ತೆಗೆದುಕೊಂಡೇನು? ಅವನೆದುರು ಮತ್ತೆ ಮುಖವನ್ನು ಹೇಗೆ ತೋರಿಸಿಯೇನು? ಉಹುಂ, ಇಲ್ಲ, ಇಲ್ಲ; ಅವನನ್ನೇ ದಾಟಿಸಬೇಕು ಮೊದಲು!'', ಆ ದಿನ ಬೆಳಗಾಗುವವರೆಗೆ ಶಿವಣ್ಣ ಅತ್ತಿತ್ತ ಹೊರಳುತ್ತಿದ್ದರು. ಯೋಚನೆಗಳು ಒಂದರ ಮೇಲೊಂದು ಬಂದು ಅವರನ್ನು ಮುತ್ತುತ್ತಿದ್ದುವು.

ಮರುದಿನ ಇರುಳು ಐದಾರು ಜನರನ್ನು ಕೂಡಿಸಿಕೊಂಡು ಶಿವಣ್ಣನವರು ತಮ್ಮ ಮನೆಯಲ್ಲಿ ಮಂತ್ರಾಲೋಚನೆ ನಡೆಯಿಸುತ್ತಿದ್ದರು. ಪ್ರತಿಯೊಬ್ಬರೂ ಅಸಮಾಧಾನದಿಂದ ಎತ್ತಲೋ ನೋಡಿಕೊಂಡು ಯೋಚಿಸುತ್ತಿದ್ದರು. ಆಗಾಗ ಶಿವಣ್ಣನವರು ಏನಾದರೂ ಮಾತನಾಡಿ ಆ ಮೌನವನ್ನು ಕದಡುತ್ತಿದ್ದರು. ಶಿವಣ್ಣನವರ ಮಾತು ಉದ್ದ ಬೆಳೆದಂತೆ, ಕೆಲವರ ದೃಷ್ಟಿಗಳು ಮನೆಯೊಳಗಿನ ತಿಜೋರಿಯ ಮೇಲೆ ನೆಲೆಸುತ್ತಿದ್ದುವು. ಕೊನೆಕೊನೆಗೆ ಎಲ್ಲರೂ ಅವರ ಮಾತನ್ನು ಒಪ್ಪಿದಂತೆ ತಲೆಯಾಡಿಸತೊಡಗಿದರು.

''ಹೇಗೆ?'' ಎಂದರು ಶಿವಣ್ಣ, ಎತ್ತಲೋ ನೋಡುತ್ತ.

ಆದರೆ ಒಬ್ಬರೂ ಉತ್ತರ ಕೊಡಲಿಲ್ಲ. ''ಇದು ತಪ್ಪು... ತಪ್ಪು...!'' ಎನ್ನುತ್ತಿತ್ತು ಪ್ರತಿಯೊಬ್ಬರ ಮನಸ್ಸೂ. ಅವರ ಮನಸ್ಸು ಇನ್ನೂ ಯಾವುದೊಂದು ನಿಶ್ಚಯಕ್ಕೂ ಬಂದಿರಲಿಲ್ಲ. ಆದರೆ ಶಿವಣ್ಣನವರ ಒಳಮನೆಯ ತಿಜೋರಿಯನ್ನು ನೋಡಿದಾಗ ಮಾತ್ರ, ಅವರ ಮನಸ್ಸಿನಲ್ಲಿ ಏನೇನೋ ಆಗುತ್ತಿತ್ತು.

ಕೊನೆಗೆ ಶಿವಣ್ಣ, ''ಯಾವುದಕ್ಕೂ ಮೊದಲು ನಾನೊಮ್ಮೆ ಎಲ್ಲ ನೋಡಿಕೊಂಡು ಬರುತ್ತೇನೆ. ನಾಳೆ ರಾತ್ರಿ ತಿರುಗಿ ಬನ್ನಿ'' ಎಂದು ಬಂದವರನ್ನು ಬೀಳ್ಕೊಟ್ಟರು. ಉಳಿದವರು ಏನೇನೋ ಯೋಚಿಸುತ್ತ, ತಮ್ಮ ತಮ್ಮ ಮನೆಯ ಹಾದಿ ಹಿಡಿದರು.

ಮರುದಿನ ಸಂಜೆ, ಉಲ್ಲಾಸದಿಂದ ಇದ್ದವರಂತೆ ಶಿವಣ್ಣನವರು ಸಿಳ್ಳು ಹಾಕುತ್ತ, ನಗುತ್ತ ರಾಮಯ್ಯನವರ ಮನೆಗೆ ಬಂದರು. ರಾಮಯ್ಯನವರು ಮನೆಯಲ್ಲಿ ಇರಲಿಲ್ಲ. ಸದ್ದು ಕೇಳಿ ಗೌರಮ್ಮನವರು ಹೊರಗೆ ಬಂದರು. ಅವರಿಗೆ ತುಂಬ ಆನಂದವಾಯಿತು. ಶಿವಣ್ಣ ನಗುವುದನ್ನು ಕಾಣದೆ ಎಷ್ಟೋ ತಿಂಗಳು ಕಳೆದಿದ್ದುವು. ಇಂದು ತಿರುಗಿ ಶಿವಣ್ಣನವರು ಮೊದಲಿನವರಾಗಿದ್ದಾರೆ. ಗೌರಮ್ಮನವರು, ''ಏನು...?'' ಎಂದರು-ವೀಳ್ಯದ ತಟ್ಟೆಯನ್ನು ಅವರಿಗೆ ನೀಡುತ್ತ. ''ಹೀಗೆ... ತಿರುಗಾಡಿಕೊಂಡು ಬಂದುಬಿಟ್ಟೆ'' ಎಂದು ಶಿವಣ್ಣ ನಗುತ್ತ, ಅಂಗಳದಲ್ಲಿ ಆಡುತ್ತಿದ್ದ ಗೋಪಾಲನನ್ನು ಕರೆದರು. ಗೋಪಾಲ, ಇತ್ತೀಚೆಗೆ ತುಂಬ ಸಮಯದಿಂದ ಶಿವಣ್ಣನವರೊಡನೆ ಮಾತನಾಡದೆ ಇದ್ದ ಕಾರಣ ಅಪರಿಚಿತರನ್ನು ನೋಡುವಂತೆ, ಅವರ ಮುಖವನ್ನೇ ನೋಡತೊಡಗಿದ. ಶಿವಣ್ಣ ಅವನನ್ನು

ಹತ್ತಿರಕ್ಕೆ ಕರೆದರು. ಅವನು ಶಿವಣ್ಣನವರ ಮುಖವನ್ನೇ ನೋಡುತ್ತ ಮನೆಯೊಳಗೆ ಬಂದ.

"ಬರುವ ವಾರ ಪುತ್ತೂರಿಗೆ ಜಾತ್ರೆಗೆ ಹೋಗುವ, ಏನು?" ಎಂದರು ಶಿವಣ್ಣ.

"ಹೂಂ" ಎಂದಿಷ್ಟೇ ಹೇಳಿ ಗೋಪಾಲ ಒಳಗೆ ನಡೆದ.

ರಾಮಯ್ಯನವರು ತೋಟಕ್ಕೆ ಹೋದುದನ್ನು ತಿಳಿದು ಅತ್ತ ಹೊರಟರು ಶಿವಣ್ಣ. ಗೌರಮ್ಮ ಒಳಗೆ ಹೋದರು. ಶಿವಣ್ಣನವರು ನಗುತ್ತಿದ್ದರೂ, ಗೌರಮ್ಮನವರ ಸೂಕ್ಷ್ಮಬುದ್ಧಿಗೆ, ಏನನ್ನೋ ಅಡಗಿಸಿಕೊಳ್ಳುವವರಂತೆ ತೋರುತ್ತಿದ್ದ ಅವರ ಮುಖವು ಕಾಣಿಸದಿರಲಿಲ್ಲ.

"ಏಯ್, ಎಲ್ಲಿದ್ದೀಯೋ ಮಹರಾಯ?" ಎಂದು ತೋಟಕ್ಕಿಳಿದು, ಮುಖದಲ್ಲಿ ನಗುವನ್ನು ತಂದುಕೊಂಡು ಶಿವಣ್ಣ ಕರೆದರು. ದೂರದಿಂದ "ಓ" ಎಂದುದು ಕೇಳಿಸಿತು. ಶಿವಣ್ಣ ಸಿಳ್ಳು ಹಾಕುತ್ತ ಅತ್ತ ನಡೆದರು. ರಾಮಯ್ಯನವರಿಗೆ ಇವರನ್ನು ನೋಡಿ ಮೊದಲು ಆಶ್ಚರ್ಯ ವಾಯಿತು. ತಮ್ಮ ಗೆಳೆತನ ತಿರುಗಿ ಹೊಂದಿ ಕೊಂಡುದಕ್ಕಾಗಿ ಅವರ ಮನಸ್ಸು ಕುಣಿಯ ತೊಡಗಿತು. ಆನಂದದಿಂದ "ಬಾ, ಮೇಲೆ ಹೋಗುವ" ಎಂದರು. "ಏನು ರಾಯರು, ಭಾರಿ ಅಪರೂಪ?" ಎಂದು ಸಲುಗೆಯಿಂದ ಪ್ರಶ್ನಿಸಿದರೊಮ್ಮೆ. ಶಿವಣ್ಣ ರಾಮಯ್ಯನವರ ಹಿಂದೆ ನಡೆಯುತ್ತಿದ್ದರು. ರಾಮಯ್ಯನವರು ತಮ್ಮ ಮುಖವನ್ನು ನೋಡುವಾಗ ಮಾತ್ರ ಶಿವಣ್ಣ ನಗುತ್ತಿದ್ದರು. ಉಳಿದ ಸಮಯದಲ್ಲೂ ಏನೇನೋ ಸಲುಗೆಯ ಮಾತನಾಡುತ್ತಿದ್ದರು. ಆದರೆ ಅವರ ಮನಸ್ಸು ಯಾವುದೋ ದೀರ್ಘ ಯೋಚನೆಯಲ್ಲಿ ಮುಳುಗಿತ್ತು.

ರಾಮಯ್ಯನವರು ತೋಟದ ತುದಿಯ ವರೆಗೆ ಕರೆದುಕೊಂಡುಹೋಗಿ, ಎರಡು ಎಳ ನೀರುಗಳನ್ನು-ಶಿವಣ್ಣನವರು ಬೇಡ ಬೇಡ ವೆಂದರೂ-ತೆಗೆದು ಕುಡಿಸಿದರು.

ಎಳನೀರನ್ನು ಮುಗಿಸಿ, ಅಡಕೆಯ ಮರದ ಸೋಗೆಯೊಂದನ್ನು ಹಾಸಿ, ಅದರ ಮೇಲೆ ಇಬ್ಬರೂ ಕುಳಿತರು. ರಾಮಯ್ಯನವರು ಏನೇನೊ ಹೊಸ ವಿಷಯಗಳನ್ನು ವಿವರಿಸಿದರು. ಶಿವಣ್ಣ "ಹೂಂ" ಎಂದಿಷ್ಟೇ ಹೇಳುತ್ತಿದ್ದರು. ಅವರು ತೋಟದ ಮೂಲೆಯಲ್ಲಿ ಬೆಳೆದ ಪೊದೆಗಳನ್ನು, ಮೇಲಿನ ಮುಳ್ಳುಬೇಲಿಗಳನ್ನು ನೋಡಿಕೊಂಡು, ಮನಸ್ಸಿನಲ್ಲಿ ಏನೇನೋ ಲೆಕ್ಕ ಹಾಕುತ್ತಿದ್ದರು.

ಕೊನೆಗೆ ರಾಮಯ್ಯನವರು, "ಇರುಳಾಯಿತು, ಹೊರಡುವ" ಎಂದು ಎದ್ದು ಮನೆಯ ಕಡೆಗೆ ಹೊರಟರು. ಶಿವಣ್ಣನವರೂ ಅವರ ಹಿಂದೆಯೇ ಹೊರಟರು. ಇಬ್ಬರೂ ಮೌನವಾಗಿ ಹೋಗುತ್ತಿದ್ದರು. ರಾಮಯ್ಯನವರ ಹೃದಯ, "ನನ್ನ ಶಿವಣ್ಣ ತಿರುಗಿ ಸಿಕ್ಕಿದ" ಎಂದು, ತಿರುಗಿ ತಿರುಗಿ ಅದನ್ನೇ ಜಪಿಸಿಕೊಂಡು ಕುಣಿದಾಡುತ್ತಿತ್ತು. ಶಿವಣ್ಣನವರು ಯಾವುದೋ ಯೋಚನೆಯಲ್ಲಿ ಮುಳುಗಿಕೊಂಡು, ಆಗಾಗ ಹಿಂತಿರುಗಿ ತೋಟದ ಆ ಮೂಲೆಯ ಕಡೆಗೆ, ಆ ಮುಳ್ಳುಬೇಲಿಯ ಕಡೆಗೆ, ನೋಡಿಕೊಂಡು ಮುಂದುವರಿಯುತ್ತಿದ್ದರು. ರಾಮಯ್ಯನವರ ಮನೆ ಮುಟ್ಟಿದಾಗ, "ಕತ್ತಲಾಯಿತು, ಹೋಗುತ್ತೇನೆ!" ಎಂದು ತಮ್ಮ ಮನೆಯ ಕಡೆಗೇ ನೋಡುತ್ತ ವೇಗವಾಗಿ ನಡೆಯತೊಡಗಿದರು.



ಕತ್ತಲಾಯಿತು. ರಾಮಯ್ಯನವರು ಉಂಡು ಹೊರಗೆ ಬಂದರು.

"ಶಿವಣ್ಣ ಮಾವ ಬಂದಿದ್ದ ಇಂದು!", ಗೋಪಾಲ ತನ್ನೊಳಗೇ ಗಟ್ಟಿಯಾಗಿ ಹೇಳುತ್ತಿದ್ದ.

"ಹೂಂ, ಒಳ್ಳೆಯವನಾಗಿದ್ದಾನೆ!", ರಾಮಯ್ಯ ಕತ್ತಲಲ್ಲಿ ಎತ್ತಲೋ ನೋಡುತ್ತ ಹೇಳಿಕೊಂಡರು.

"ನನಗೇನೊ ಅವರ ರೀತಿ ಎಂದಿನಂತೆ ತೋರುವುದಿಲ್ಲ" ಎನ್ನುತ್ತಿದ್ದರು ಗೌರಮ್ಮನವರು.

ಗೋಪಾಲ ನಿದ್ರಿಸತೊಡಗಿದರೂ, ರಾಮಯ್ಯನವರು ಮನೆಯ ಹೊರಬದಿಯಲ್ಲಿ ಕುಳಿತು ಎತ್ತಲೋ ನೋಡುತ್ತಿದ್ದರು. ಎಲ್ಲೋ ದೂರದಲ್ಲಿ ಸರ ಸರ ಸದ್ದು ಕೇಳಿಸಿತು. ಮತ್ತೆ ತಿರುಗಿ ನಿಶ್ಶಬ್ದ. ತುಸು ತಡೆದು ತಿರುಗಿ ಅದೇ ಸದ್ದು. ರಾಮಯ್ಯನವರು ಕಿವಿಗೊಟ್ಟು ಆಲಿಸತೊಡಗಿದರು. ಮೊದಲಿಗಿಂತಲೂ ಹೆಚ್ಚು ಸದ್ದು ಕೇಳಿಸತೊಡಗಿತು. ರಾಮಯ್ಯನವರು ಬೆಟರಿ ಲೈಟು, ಒಂದು ಬೆತ್ತ ಇವುಗಳೊಡನೆ ತೋಟದಲ್ಲಿ ಮುಂದೆ ಮುಂದೆ ನಡೆಯತೊಡಗಿದರು. ಸದ್ದು ಸ್ಪಷ್ಟವಾಗಿ ಕೇಳಿಸುತ್ತಿತ್ತು. ರಾಮಯ್ಯನವರು ಓಡುತ್ತ ಹೋದರು. ಮೂರು ನಾಲ್ಕು ಜನರು ಇವರು ಬರುವ ದಾರಿಯನ್ನೇ ನೆಟ್ಟದೃಷ್ಟಿಯಿಂದ ನೋಡುತ್ತಿದ್ದರು. ರಾಮಯ್ಯ ನಡುಗಿದರು. ಚೀರಬೇಕೆನ್ನುವಷ್ಟರಲ್ಲಿ ಒಬ್ಬ ಅವರ ಬಾಯಿಗೆ ಕೈಮುಚ್ಚಿ ಹಿಡಿದುಕೊಂಡ. ''ಉಃ ಉಃ'' ಎಂಬ ಸದ್ದು ಮೂಗಿನಲ್ಲೇ ಹೊರಡುತ್ತಿತ್ತು. ಸಂಜೆ ಶಿವಣ್ಣ ಮತ್ತು ತಾವು ಕುಳಿತ ಅಡಕೆ ಮರದ ಸೋಗೆಯಲ್ಲೇ ಅತ್ತಿತ್ತ ಮಿಸುಕಾಡತೊಡಗಿದರು. ಅವರು ತಮ್ಮ ಕಣ್ಣುಗಳಿಂದ ಯಾರನ್ನೋ ಅರಸುತ್ತಿದ್ದರು. ಯಾರೋ ಒಬ್ಬರನ್ನು ನೋಡಿ ಅವರ ಕಣ್ಣುಗಳು ಮಂಜಾದುವು. ಆದರೆ ಆ ನಾಲ್ವರು ಇವೊಂದನ್ನೂ ಗಣಿಸದೆ, ಅವರನ್ನು ಕಟ್ಟಿ, ಹೊತ್ತುಕೊಂಡು, ಎತ್ತಲೋ ನಡೆದರು.



ಲಿಥೋಗ್ರಾಫ್ ಬಸವರಾಜು



# ಎಲೆಮರೆಯ 'ಮರ' ಚಿ. ಶ್ರೀನಿವಾಸರಾಜು

**ಡಿ. ವಿ. ಪ್ರಹ್ಲಾದ್**

**ಚಿತ್ರಗಳು: ಶ್ರೀನಿವಾಸರಾಜು ಅವರ ಸಂಗ್ರಹದಿಂದ**

ಚಿ. ಶ್ರೀನಿವಾಸರಾಜು ಪುಸ್ತಕದಂಥ ವ್ಯಕ್ತಿ. ಸಹಜವಾಗಿ ಎಟುಕಬಲ್ಲ ಒಂದು ಪುಸ್ತಕದ ಸರಳತೆ, ಗಹನತೆ ಮತ್ತು ಆಪ್ತಮೌನದ ಪ್ರತಿರೂಪದಂತಿರುವ ''ರಾಜು ಮೇಷ್ಟ್ರು'', ಕಳೆದ ಕಾಲು ಶತಮಾನದಲ್ಲಿ ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ, ಸದ್ದಿರದೆ ಅದ್ಭುತವಾದದ್ದನ್ನು ಸಾಧಿಸಿದವರು.

ಬೆಂಗಳೂರಿನ ಕ್ರೈಸ್ಟ್ ಕಾಲೇಜಿನಲ್ಲಿ ಕನ್ನಡ ಕಲಿಸುತ್ತಲೇ, ಅಲ್ಲಿನ ಕನ್ನಡ ಸಂಘದ ಮೂಲಕ, ವಿಶ್ವವಿದ್ಯಾಲಯಗಳು ಮಾಡಬೇಕಾದಂಥ ಪುಸ್ತಕ ಪ್ರಕಾಶನದ ಕೆಲಸವನ್ನು ವ್ರತದಂತೆ ನಡೆಸಿಕೊಂಡು ಬಂದ ಶ್ರೀನಿವಾಸರಾಜು, ನಾಡಿನ ಹೊಸ ಪ್ರತಿಭೆಗಳನ್ನು ಕಳಕಳಿಯಿಂದ ಬೆಳಕಿಗೆ ತಂದವರು. ಇವರು ಪ್ರಕಟಿಸಿದ ಪುಸ್ತಕಗಳ ಸಂಖ್ಯೆ 170ಕ್ಕೂ ಮಿಗಿಲು. ಇದರಲ್ಲೂ, ಸಾಮಾನ್ಯವಾಗಿ ಪ್ರಕಾಶಕರು ಮುಟ್ಟಲೂ ಹಿಂಜರಿಯುವ ಕಾವ್ಯ, ವಿಮರ್ಶೆಗಳ ಪುಸ್ತಕಗಳದ್ದೇ ಮೇಲುಗೈ!

ಸ್ವತಃ ಕವಿ, ನಾಟಕಕಾರ, ವಿಮರ್ಶಕ - ಆಗಿದ್ದೂ ಅದನ್ನೆಲ್ಲ ಬದಿಗಿಟ್ಟು, ಅವರು ನೂರಾರು ಮುಖ್ಯ ಪುಸ್ತಕಗಳನ್ನು ಪ್ರಕಟಿಸಿದರು. ಶಿವಪ್ರಕಾಶ್, ಪ್ರತಿಭಾ ನಂದಕುಮಾರ್, ಎಸ್. ಮಂಜುನಾಥ್, ಎಚ್.ಎಸ್. ರಾಘವೇಂದ್ರರಾವ್, ಅಬ್ದುಲ್ ರಷೀದ್, ಬಸವರಾಜ ಕಲ್ಗುಡಿ, ಟಿ.ಎನ್. ಸೀತಾರಾಂ, ಅಮರೇಶ್ ನುಗಡೋಣಿ ಮುಂತಾದವರ ಪ್ರಥಮ ಪುಸ್ತಕಗಳು ಬೆಳಕಿಗೆ ಬಂದದ್ದು, ಕ್ರೈಸ್ಟ್ ಕಾಲೇಜು ಕನ್ನಡ ಸಂಘದಿಂದ. ಪುಸ್ತಕ ಪ್ರಕಟಣೆಯಷ್ಟೇ ಅಲ್ಲದೆ ಹೊಸ ವಿದ್ಯಾರ್ಥಿಗಳ ಸಂವೇದನೆಯಲ್ಲಿ ಸಾಹಿತ್ಯಾಭಿರುಚಿಯ ಬೀಜಗಳನ್ನು ಬಿತ್ತಲು ಅನುಕೂಲವಾಗುವಂತೆ, ಬೇಂದ್ರೆ, ಕುವೆಂಪು ನೆನಪಿನಲ್ಲಿ ರಾಜ್ಯಮಟ್ಟದ ಕವನ, ಕಿರುಗತೆ ಸ್ಪರ್ಧೆಗಳನ್ನು ನಡೆಸಿದರು. ಚಿಂತಾಮಣಿ ಕೊಡ್ಲೆಕೆರೆಯಿಂದ ಹಿಡಿದು ಈಗಿನ ವಿಭಾ ತಿರಕಪಡಿಯತನಕ ನಾಡಿನುದ್ದಗಲದ ಎಳೆ ಕವಿಕಂಠಗಳು ಶ್ರೀನಿವಾಸರಾಜು ಅವರ ಬೆಚ್ಚನೆ ಮರದ ಟೊಂಗೆ ಟಿಸಿಲುಗಳಲ್ಲಿ ಕೂತು ಉಲಿದಿವೆ. ಎಳೆಯದರಲ್ಲೇ ಅಕಾಲಮರಣಕ್ಕೀಡಾದ ವೆಂಕಟೇಶ್ ಮತ್ತು ಕ.ಸು. ರಾಮಚಂದ್ರ ಇಂಥ ಶಿಷ್ಯರ ಪುಸ್ತಕಗಳನ್ನು ತಕ್ಷಣ ಪ್ರಕಟಿಸುವ ತೀವ್ರತೆ ಮತ್ತು ಸೂಕ್ಷ್ಮತೆ 'ರಾಜುಮೇಷ್ಟ್ರಿ'ಗೆ ಮಾತ್ರ ಇತ್ತು. ರಾಜಧಾನಿಯ ಸಾಹಿತ್ಯಿಕ ಕಲಾಪಗಳಿಗೆ ಸದಾ ಬೆಂಬಲವಾಗಿರುವ ಶ್ರೀನಿವಾಸರಾಜು, ಪ್ರತಿ ಪುಸ್ತಕವನ್ನೂ ಶ್ರದ್ಧೆಯಿಂದ ಮಾರಾಟಮಾಡಿ, ಬಂದ ಹಣದಿಂದ ಮುಂದಿನ ಪುಸ್ತಕವನ್ನು ಪ್ರಕಟಣೆಗೆ ಎತ್ತಿಕೊಂಡವರು. ಜತೆಗೆ 'ಅಭಿನವ', 'ಸಂಚಯ'ದಂಥ ಎಷ್ಟೋ ಇತರ ಪ್ರಕಾಶನ ಸಂಸ್ಥೆಗಳಿಗೆ ಸ್ಫೂರ್ತಿಯಾದವರು. ಈಗಷ್ಟೆ ತಮ್ಮ ಪ್ರಾಧ್ಯಾಪಕ ವೃತ್ತಿಯಿಂದ ನಿವೃತ್ತರಾಗಿರುವ ಅವರಿಗೆ, ಕಾಕತಾಳೀಯವೋ ಎಂಬಂತೆ ಕರ್ನಾಟಕ ಸರ್ಕಾರದ, ಈ ವರುಷವೇ ಆರಂಭವಾದ 'ಶ್ರೇಷ್ಠ ಪ್ರಕಾಶಕ' ಪ್ರಶಸ್ತಿ ಬಂದಿದೆ. ತೆರೆಮರೆಯಲ್ಲಿದ್ದುಕೊಂಡೇ ಘನವಾದದ್ದನ್ನು ಸಾಧಿಸಿರುವ ಶ್ರೀನಿವಾಸರಾಜು ಅವರನ್ನು ಅವರ ಪ್ರೀತಿಯ ಶಿಷ್ಯ, ಕವಿ, 'ಸಂಚಯ' ಸಾಹಿತ್ಯಿಕ ದ್ವೈಮಾಸಿಕದ ಸಂಪಾದಕ **ಡಿ.ವಿ. ಪ್ರಹ್ಲಾದ್** ಅಕ್ಕರೆಯಿಂದ ಮಾತಾಡಿಸಿದ್ದಾರೆ.



“ನಾನು ಹುಟ್ಟಿದ್ದು ಚಿಕ್ಕ ಬಳ್ಳಾಪುರದಲ್ಲಿ. ಇವತ್ತಿಗೂ ಅಲ್ಲಿನ ಪರಿಸರ ನನಗಿಷ್ಟ. ನಮ್ಮ ತಾಯಿ ಸಾವಿತ್ರಮ್ಮ ತಂದೆ ಚಿಕ್ಕರಾಜು ಆದರೂ ಅಮ್ಮನ ಅಕ್ಕಂದಿರು ಇಬ್ಬರೂ ನನಗೆ ಅಮ್ಮಂದಿರಾಗಿದ್ದರು. ನಾನು ಬೆಳೆದದ್ದೆಲ್ಲಾ ನನ್ನ ದೊಡ್ಡಮ್ಮ ದೊಡ್ಡಪ್ಪನ ಜೊತೆಯಲ್ಲಿ, ನನ್ನ ವ್ಯಕ್ತಿತ್ವದ ಒಂದು ಭಾಗವಾಗಿಬಿಟ್ಟಿದ್ದಾರೆ ಅವರು. ನನಗೆ ತುಂಬ ಸಹನೆ ತಾಳ್ಮೆಗಳಿದೆ ಅಂತಾರಲ್ಲ ಅದು ಬಂದಿದ್ದು ನಮ್ಮ ದೊಡ್ಡಮ್ಮನವರ ಪ್ರಭಾವದಿಂದ. ಅವರು ತುಂಬಾ ದೈವಭಕ್ತರು. ಅವರಿಗೆ ಕೋಪ ಅನ್ನೋದು ಬರುತ್ತಲೇ ಇರಲಿಲ್ಲ, ಅತ್ಯಂತ ತಾಳ್ಮೆಯ ವ್ಯಕ್ತಿ. ನಮ್ಮ ದೊಡ್ಡಪ್ಪ ತೀರಾ ಪ್ರಾಕ್ಟಿಕಲ್ ಮನುಷ್ಯ. ಆಡುತ್ತಿರಲಿಲ್ಲ ಸುಮ್ಮನೆ ಮಾಡಿ ಮುಗಿಸುತ್ತಿದ್ದವರು. ನಾನು ಮಿಡ್ಲ್ ಸ್ಕೂಲು, ಹೈಸ್ಕೂಲು, ಚಿಕ್ಕಬಳ್ಳಾಪುರದಲ್ಲೇ ಓದಿದ್ದು. ಅಲ್ಲಿ ರೋಷನ್ ಬೇಗ್ ಅಂತ ಇಂಗ್ಲಿಷ್ ಅಧ್ಯಾಪಕರು, ಬ.ನಾ. ಗುಂಡೂರಾವ್ ಅಂತ, ವೆಂಕಟಸ್ವಾಮಿ ಅಂತ ಅನೇಕ ಮೇಷ್ಟ್ರುಗಳು ನಮ್ಮ ಆಸಕ್ತಿಗಳಿಗೆ ಪ್ರಭಾವ ಬೀರಿದರು. ನಮ್ಮೂರಿಗೆ ಹತ್ತಿರವಿರೋ ನಂದಿ ಬೆಟ್ಟಕ್ಕೆ ನಾವುಗಳು ಪ್ರತಿ ಭಾನುವಾರ ಅಲೆದಾಡಲು ಹೋಗುತ್ತಿದ್ದೆವು. ಗುಂಡೂರಾಯರು ರನ್ನ, ಪಂಪ, ಕುಮಾರವ್ಯಾಸ, ಬೇಂದ್ರೆ, ಕುವೆಂಪು ಪದ್ಯಗಳನ್ನು ಕ್ಲಾಸಿನಲ್ಲಿ ಓದೋರು, ಆ ಕಾಲಕ್ಕೇ ನಾನು ಒಂದು ನಾಟಕ ಗೀಚಿದ್ದೆ. ಅದರ ಹೆಸರು ಈಗಲೂ ನೆನಪಿದೆ, ‘ಜೋಡಿಶಾಲು’ ಅಂತ. ನನಗೆ ಫುಟ್ ಬಾಲ್ ತುಂಬಾ ಇಷ್ಟ, ನಮ್ಮ ಸ್ಕೂಲ್ ಟೀಮಿಗೆ ನಾನು ಗೋಲ್‌ಕೀಪರ್ ಆಗಿದ್ದೆ. ಈಗಲೂ ನನಗೆ ಫುಟ್‌ಬಾಲ್ ಬಗ್ಗೆ ಆಸಕ್ತಿ.

ಪಿಯುಸಿಗೆ ಬಂದಾಗ ಗೀತೆಗಳನ್ನು ಬರೆಯೋ ಹುಚ್ಚಿತ್ತು ನನಗೆ. ವೆಂಕಟನಾರಾಯಣ ಅಂತ ಒಬ್ಬ ಕ್ಲಾಸ್‌ಮೇಟ್ ಇದ್ದ. ಅವನಿಗೆ ಹೇಮಂತ ಕುಮಾರ್ ಥರ ವಾಯ್ಸ್. ಅದಕ್ಕೆ ತಕ್ಕ ಹಾಡುಗಳನ್ನು ಬರೀತಿದ್ದೆ. ಕಥೆ ಬರೀತಿದ್ದೆ, ಪ್ರಬಂಧ ಬರೀತಿದ್ದೆ... ಊರಿನಲ್ಲಿ 'ಜ್ಞಾನಗಂಗಾ' ಅಂತ ಒಂದು ಅಸೋಸಿಯೇಷನ್ ಮಾಡಿಕೊಂಡು ಬೆಂಗಳೂರಿನಿಂದ 'ಮಂಕುತಿಮ್ಮನ ಕಗ್ಗ', 'ಮೈಸೂರು ಮಲ್ಲಿಗೆ' ಪ್ರತಿಗಳನ್ನು ಕೊಂಡು ತಂದು ಮಾರ್ತಿದ್ವಿ. ಚಿಕ್ಕಬಳ್ಳಾಪುರದಲ್ಲಿ ತಿಂಗಳುಗಟ್ಟಲೆ ನಡೀತಿದ್ದ ಹರಿಕಥೆಗಳು ನನ್ನನ್ನ ತುಂಬಾ ಪ್ರಭಾವಗೊಳಿಸಿವೆ. ಒಂದು ರೀತಿಯಲ್ಲಿ ಕಥನಸಾಹಿತ್ಯಕ್ಕೆ ತಿರುಗುವಂತೆ ಮಾಡಿವೆ. ಆಮೇಲೆ ಅನಕೃ ಮುಂತಾದವರ ತೀವ್ರ ಪ್ರಭಾವಕ್ಕೆ ಒಳಗಾದೆ.

ಪಿಯುಸಿಯಾದ ಕೂಡ್ಲೆ ನನಗೆ ದಾವಣಗೆರೆಯಲ್ಲಿ ಇಂಜನಿಯರಿಂಗ್ ಸೀಟು ಸಿಕ್ತು. ನಮ್ಮ ತಾಯಂದಿರಿಗೆ ನಾನು ಒಬ್ಬನೇ ಮಗ. ಅವರೆಲ್ಲಾ ಸೇರಿ ನೀನು ನಮ್ಮ ಕಣ್ಮುಂದೆ ಇರಬೇಕೆಂದು ಇಲ್ಲೇ ಉಳಿಸಿಕೊಂಡರು. ಆಗ ನಾನು ಬಿ.ಇ ಬಿಟ್ಟೆ. ಆಗಿನ ನನ್ನ ಆಕರ್ಷಣೆ, ಆಸಕ್ತಿಗಳು ಹೆಚ್ಚು ಆಧುನಿಕನಾಗುವುದರ ಕಡೆಗಿತ್ತು. 'ಕಂಟೋನ್ಮೆಂಟ'ನ ಜಗತ್ತು, ಇಂಗ್ಲಿಷ್ ಬಗ್ಗೆ ಕುತೂಹಲ, ಆಸಕ್ತಿಗಳು ಜಾಸ್ತಿಯಾಯ್ತು. ಆ ರೀತಿಯ ಇಂಗ್ಲಿಷ್ ವಾತಾವರಣದ ಕಾಲೇಜಿಗೇ ಸೇರಬೇಕು ಅಂತ ಸೆಂಟ್ ಜೋಸೆಫ್ ಕಾಲೇಜಿನಲ್ಲಿ ಬಿ.ಎಸ್ಸಿಗೆ ಸೇರಿಕೊಂಡೆ. ಅಲ್ಲಿನ ವಾತಾವರಣ ಎಷ್ಟು ದಟ್ಟವಾಗಿ ಜೋರಾಗಿತ್ತು ಅಂದ್ರೆ, ನನ್ನಲ್ಲಿ ಒಂದು ಕೀಳರಿಮೆಯನ್ನು ಅದು ಹುಟ್ಟಿಸಿತು. ಇಂಗ್ಲಿಷ್ ಮಾತನಾಡಲು ಬರದ ನನ್ನನ್ನು, ಅವರ ಡ್ಯಾನ್ಸು, ಓದು, ಮಾತುಗಾರಿಕೆಗಳು ಒಂದು ಮೂಲೆಗೆ ತಳ್ಳಿಬಿಡ್ತು. ಆಗ ಭಾಷೆಯ ಬಗ್ಗೇ ನನಗೆ ದ್ವೇಷ ಹುಟ್ಟಿತು. ಭಾಷೆ ನನ್ನ ವ್ಯಕ್ತಿತ್ವ ಹಾಳು ಮಾಡುತ್ತೆ ಅನ್ನೋ ಸಿಟ್ಟು, ಭಾಷೆಯನ್ನು ಧಿಕ್ಕರಿಸಿ ಬರೆದ ಮೂಕನಾಟಕಗಳಿಗೆ (1977ರಲ್ಲಿ) ಮೂಲ ಬೀಜವಾಗಿರಬಹುದು.



ಬಿ.ಎಸ್ಸಿ ಮುಗಿಸಿ ತುಮಕೂರಿನ ಕಾರೆ ಕುರ್ಚಿ ಐರನ್ ಓರ್ ಮೈನ್ಸ್‌ನಲ್ಲಿ ಟ್ರಾಫಿಕ್ ಸೂಪರ್ ವೈಸರ್ ಆಗಿ ಕೆಲಸ ಮಾಡಿದೆ. ಒಬ್ಬಂಟಿಯಾಗಿ, ದಟ್ಟಕಾಡು, ಗಣಿಗಳ ಮಧ್ಯೆ ಬೇಸರ ಬಂತು. ಬೆಂಗಳೂರಿಗೆ ಎನ್.ಸಿ.ಸಿ. ಆಫೀಸರ್ ಆಗಿ ಹಾಕಿದ್ರು. ನಂತರ ಕುಂದಾಪುರಕ್ಕೆ ಹಾಕಿದರು. ಸರಿಬರದೆ ಆ ಕೆಲಸದಿಂದ ಹೊರಬಂದೆ. ಅಲ್ಲಿ ಮು. ಷಣ್ಮುಗಂ ಎನ್ನುವ ಸಾಹಿತ್ಯ ಮಿತ್ರ ಸಿಕ್ಕಿದರು.

## ಕಂಪಿನ ಕರೆ

ಕನ್ನಡದ ಹುಚ್ಚಿನಿಂದ ಮತ್ತೆ ಬಿ.ಎ ಮಾಡಲು ಆರಂಭಿಸಿದೆ. ಆಗ ಬಿ.ಆರ್. ಲಕ್ಷ್ಮಣರಾವ್, ಬಾಬಯ್ಯ ಇವರೆಲ್ಲಾ ನನ್ನ ಕ್ಲಾಸ್‌ಮೇಟುಗಳಾಗಿದ್ದರು. ಆಧುನಿಕತೆಯ ಹುಚ್ಚು ಇದ್ದೇ ಇತ್ತು. ಬಿ.ಎಗೆ ಬಂದಾಗ ಅದು ಕನ್ನಡದ ಬಗ್ಗೆ ಆಸಕ್ತಿಯಾಗಿ ರೂಪುಗೊಂಡಿತು. ಎಂ.ಎಗೆ ಬಂದಾಗ ಅದು ಹೆಚ್ಚು ಪರಿಷ್ಕೃತಗೊಂಡಿತು. ಅನೇಕ ಗೆಳೆಯರ ಸಂಪರ್ಕ, ವಾತಾವರಣ, ರಾಘವೇಂದ್ರ ರಾವ್, ಕೆ ವಿ ನಾರಾಯಣ ಮುಂತಾದವರ ಜೊತೆಗಾರಿಕೆ ಕನ್ನಡ ಸಾಹಿತ್ಯದ ಬಗ್ಗೆ ಇದ್ದ ನನ್ನ ಆಸಕ್ತಿಗೆ ಸಾಣೆ ಹಿಡಿಯಿತು. ಜೊತೆಗೆ, ಸೆಂಟ್ರಲ್ ಕಾಲೇಜಿನ ಪಿ.ಪಿ. ಕಟ್ಟೆಯ ದಯೆ!

## ಪಿ.ಪಿ. ಕಟ್ಟೆ

ಅದು ಸೆಂಟ್ರಲ್ ಕಾಲೇಜಿನ ಹೊಸ ಲೈಬ್ರರಿ ಮುಂದಿದ್ದ ಕಲ್ಲುಬೆಂಚು. ನಮ್ಮಲ್ಲಿ ಅನೇಕರ ಬದುಕಿನ ಮುಖ್ಯವಾದ ಘಟನೆಗಳಿಗೆ ಸಾಕ್ಷಿಯಾಗಿತ್ತು. ಪಿ.ಪಿ. ಕಟ್ಟೆ ಅಂದರೆ 'ಪೋಲಿ ಪಟಾಲಂ' ಕಟ್ಟೆ ಅಂತ. ಬೇರೆಯೋರಿಗೆ ನಾವು ಪ್ರೋಗ್ರೆಸಿವ್ ಪೇಪರ್ ಅಂತ ಅಥವಾ ಪೆನ್ ಅಂಡ್ ಪೇಪರ್ ಅಂತ ಹೇಳಿದರೂ ಅದರ

ಮೂಲಾರ್ಥ ಪೋಲಿ ಪಟಾಲಂ. ಅದೇ ಸ್ಥಳದಲ್ಲೇ 'ಅಂಕಣ' ಪತ್ರಿಕೆ ರೂಪುಗೊಂಡಿದ್ದು, 'ಶೂದ್ರ' ಪತ್ರಿಕೆ ಹುಟ್ಟಿದ್ದು, 'ಕಾವ್ಯ' ಬೆಳೆದದ್ದು... ಆ ಕಟ್ಟೆಯ ಬಳಿ ವೆಂಕಟರಾಜು, ಮಾಧು, ರಾಘು, ನಾರಾಯಣ, ಕಿ.ರಂ, ಕ.ನಂ. ಬಾಲು, ಶ್ಯಾಮಸುಂದರ, ಶೂದ್ರ, ಪ್ರಸನ್ನ, ಶಿವಪ್ರಕಾಶ್, ಡಿ.ವಿ. ರಾಜಶೇಖರ ಹೀಗೆ ಎಲ್ಲ ಸೇರುತಿದ್ವಿ. ರಾತ್ರಿಯ ಬಹಳ ಹೊತ್ತಿನತನಕ ಚರ್ಚೆ, ಮಾತುಕತೆ, ಕವಿತೆ ಓದೋದು ನಡೀತಿತ್ತು. ಕೆಲದಿನಗಳ ನಂತರ ವೆಂಕಟಗಿರಿ ಗೌಡರಿಗೆ ಹಿಡಿಸದೆ ಆ ಕಟ್ಟೆಯನ್ನು ಕಿತ್ತು ಹಾಕಿಸಿದರು.

## ಕ್ರೈಸ್ಟ್ ಕಾಲೇಜು ಸೇರಿದ್ದು

1969ರಲ್ಲಿ ನಾನು ಕ್ರೈಸ್ಟ್ ಕಾಲೇಜು ಸೇರಿದ್ದು. ಆಗ ಅದು ಹೊಸ ಕಾಲೇಜಾಗಿತ್ತಾದ್ದರಿಂದ ಕೆಲಸ ಮಾಡುವ ಅವಕಾಶವಿತ್ತು. ಸಂದರ್ಶಕರಾಗಿ ಬಂದ ಜಿ.ಎಸ್.ಎಸ್. ಮತ್ತು ಪ್ರೊ. ಜಿ. ವೆಂಕಟಸುಬ್ಬಯ್ಯ ಅವರು ಎರಡು ಕರಾರಿನ ಮೇಲೆ ನನ್ನ ಈ ಕಾಲೇಜಿಗೆ ಆಯ್ಕೆ ಮಾಡಿದರು. ಒಂದು, ಇಲ್ಲೊಂದು ಎನ್.ಸಿ.ಸಿ. ಯುನಿಟ್ ಆರಂಭಿಸೋದು. ಮತ್ತೊಂದು, ಹೊಸ ಕಾಲೇಜಾದ ಇಲ್ಲಿ ಕನ್ನಡವನ್ನು ಕಟ್ಟುವ ಕೆಲಸ ಮಾಡೋದು.

## ಸಂಬಳ ಗೊತ್ತಿದ್ರೆ, ಮದುವೆ ಆಗ್ತಿರಲಿಲ್ಲ.

ನನ್ನ ಮದುವೆಯಾದದ್ದು 1970ರಲ್ಲಿ. ಆಗ ನನ್ನ ಸಂಬಳವೂ ಅವರಿಗೆ ಗೊತ್ತಿರಲಿಲ್ಲ...

(ಸರಸ್ವತಿ ಮೇಡಂ: ಗೊತ್ತಿದ್ರೆ ಮದುವೇನೇ ಆಗ್ತಿರಲಿಲ್ಲ. 150 ರುಪಾಯಿ ಅಂದ್ರೆ, ಏನು ಮದುವೆಯಾಗೋದು (ನಗು)

ಅವರದ್ದು ತುಂಬಾ ಅನುಕೂಲಸ್ಥರ ಮನೆ, ಆ ಕಾಲಕ್ಕೇ ಕಾರ್ ಇತ್ತು.

(ಸರಸ್ವತಿ: ಇವರು ಒಂದಿನ ಬಂದು ಸೆಂಟ್ರಲ್ ಕಾಲೇಜಿಗೆ ಕರೆದುಕೊಂಡು ಹೋದ್ರು. ಅಲ್ಲಿ ಕೂರಿಸಿಕೊಂಡು 'ನಮ್ಮನೆ ಹೆಂಚಿನ ಮನೆ, ನಿಮ್ಮ ಮನೆಯಲ್ಲಿರೋ ಅಷ್ಟು ಸೌಲಭ್ಯ, ಅನುಕೂಲಗಳು ಇರದೇ ಹೋಗಬಹುದು, ನಾಲ್ಕುಜನ ತಂಗಿಯರಿಗೆ ಮದುವೆ ಆಗಬೇಕು. ಇವರೆಲ್ಲರ ಜೊತೆ ಹೊಂದಿಕೊಂಡು ಇರ್ತೀಯಾ?' ಅಂತ ಕೇಳಿದರು. ಮತ್ತೊಂದು ಕಂಡೀಷನ್ ಅಂದ್ರೆ ಆಗ ನಾನು ಬರೇ ಎಸ್.ಎಸ್.ಎಲ್.ಸಿ. ಮಾಡಿದ್ದೆ. ಬಿ.ಎ. ಪೂರ್ತಿ ಮಾಡಬೇಕು ಅಂತ ಹೇಳಿ ಒತ್ತಾಯ ಮಾಡಿದ್ರು. ಆಗಲಿ ಅಂತ ಒಪ್ಪಿಕೊಂಡೆ...)

ನಾನೂ ಮತ್ತು ಶಿವಸ್ವಾಮಿ ಆ ಕಾಲಕ್ಕೆ ಶಾಂತಿನಿಕೇತನದಲ್ಲಿ ಇದ್ದು ಬರಬೇಕು ಅಂತ ಆಸೆಪಟ್ಟಿದ್ವು, ಅಪ್ಲಿಕೇಷನ್ನೂ ಹಾಕಿದ್ವಿ. ಶಾಂತಿನಿಕೇತನಕ್ಕೆ ಹೋಗೋ ಬದಲು ಮದುವೆ ಆಯ್ತು.

1972ರಲ್ಲಿ ಕನ್ನಡ ಸಂಘ ಪ್ರಾರಂಭಿಸೋದಕ್ಕೆ ಮೊದಲು ಒಂದೆರಡು ವರ್ಷ ಇಂಥಾದ್ದೊಂದು ಚಟುವಟಿಕೆ ಮಾಡಲು ತಕ್ಕ ಪ್ರೋತ್ಸಾಹ ದೊರೆಯುತ್ತದೆಯೆ ಅಂತ ಸಾಕಷ್ಟು ಗಮನಿಸಿ, ಕಾದು, ಆಲೋಚಿಸಿದ್ದೆ. ಆ ವರ್ಷ ಅ.ನ.ಕೃ ತೀರಿಕೊಂಡ ವರ್ಷ. ಅವರ ಪ್ರಭಾವ ನನ್ನ ಮೇಲಿದ್ದ ಕಾರಣ ಅ.ನ.ಕೃ. ಸ್ಮಾರಕ ಲೇಖನ ಸ್ಪರ್ಧೆಯ ಮಾಲೆ ಪ್ರಾರಂಭವಾಯ್ತು.



ಪತ್ನಿ ಸರಸ್ವತಿಯವರೊಂದಿಗೆ

## ರಾಜರತ್ನಂ ಪ್ರಭಾವ

ಇವತ್ತು ನಾವು ಒಳ್ಳೆಯ ಮೇಷ್ಟ್ರುಗಳು ಅಂತ ಅನ್ನಿಸಿಕೊಂಡಿದ್ರೆ, ಅದಕ್ಕೆ ರಾಜರತ್ನಂ ಕಾರಣ. ಎಂ.ಎ.ನಲ್ಲಿ ನನಗೆ ಎರಡು ವರ್ಷ ಅವರ ಪಾಠ ಕೇಳುವ ಅವಕಾಶ ಇತ್ತು. ಹಾಗೆಯೇ ನಮಗೆ ಪಾಠ ಮಾಡುತ್ತಿದ್ದ ಎಂ.ವಿ. ಸೀತಾರಾಮಯ್ಯ, ಜಿ.ಎಸ್.ಎಸ್., ರಂ.ಶ್ರೀ ಮುಗಳಿ, ಇವರೆಲ್ಲರೂ ಶ್ರದ್ಧೆಯಿಂದ, ಪ್ರಾಮಾಣಿಕತೆಯಿಂದ ಪಾಠ ಹೇಳುತ್ತಿದ್ದರು. ಮುಗಳಿಯಂಥವರು ಒಂದು ಕ್ಲಾಸನ್ನು ಅಕಾಡೆಮಿ ಮೀಟಿಂಗಿನ ಅನಿವಾರ್ಯ ಕಾರಣಕ್ಕೆ ತಪ್ಪಿಸಿದರೂ ಮರುದಿನ ಅದನ್ನು ತಪ್ಪದೇ ತೆಗೆದುಕೊಳ್ಳೋರು. ಅವರೆಲ್ಲರ ಶಿಸ್ತು, ಪ್ರಾಮಾಣಿಕತೆ, ವಿದ್ಯಾರ್ಥಿಗಳ ಮೇಲಿನ ಪ್ರೀತಿ ನಮ್ಮೆಲ್ಲರನ್ನು ರೂಪಿಸಿದೆ. ನನಗೆ ಸಿಕ್ಕ ಕೆಲ ಶಿಷ್ಯರಂತೂ ಅವಿಸ್ಮರಣೀಯರು. ನನ್ನ ಇಂಗಿತವನ್ನರಿತು ಕೆಲಸಕ್ಕೆ ಮುಂದಾಗುವಂಥವರು. ಅವನೊಬ್ಬನಿದ್ದ, ದೈತ್ಯ ಪ್ರತಿಭೆ. ಅಕಾಲ ಮರಣಕ್ಕೀಡಾದ ವೆಂಕಟೇಶ. ಒಂದು ದಿನ ರಾತ್ರಿ ಹನ್ನೊಂದು ಗಂಟೆಗೆ ಅವನಿಗೆ ಬೆಂಗಳೂರಿನ ವೆಸ್ಟ್ ಆಫ್ ಕಾರ್ಡ್ ರಸ್ತೆಯಲ್ಲಿರುವ ತನ್ನ ಮನೆಯಂಗಳದ ಬಾಳೆಗಿಡದಲ್ಲಿ ಬಿಟ್ಟಿದ್ದ ಮೊದಲ ಗೊನೆ ಕಣ್ಣು ಚುಚ್ಚಿತು. ಸೀದಾ ಬೈಕು ಹತ್ತಿದವನೇ ವಿಲ್ಸನ್ ಗಾರ್ಡನ್‌ನಲ್ಲಿದ್ದ ನಮ್ಮ ಮನೆಗೆ ಬಂದ. ಮಲಗಿದ್ದ ನನ್ನ ಮಗ ಸುಗತನನ್ನು ಎಬ್ಬಿಸಿಕೊಂಡು, ನಿದ್ದೆಗಣ್ಣಿನ ಅವನನ್ನು ಬೈಕಿಗೇರಿಸಿಕೊಂಡು ಸೀದಾ ಹೊರಟ, ತನ್ನ ಮನೆಗೆ. ಬಾಳೆಗೊನೆಯನ್ನು ಕಿತ್ತು ಇಬ್ಬರೂ ಮತ್ತೆ ಮನೆಗೆ ಧಾವಿಸಿ, ಮಲಗಿದ್ದ ನನ್ನನ್ನು ಧಡಬಡ ಎಬ್ಬಿಸಿ 'ಸಾರ್, ಒಪ್ಪಿಸಿಕೊಳ್ಳಿ... ನಮ್ಮ ತೋಟದ ಮೊದಲ ಹಣ್ಣು... ನೀವು ತಿನ್ನಬೇಕು' ಅಂದ! ಈಗ ಅಧ್ಯಾಪಕ-ವಿದ್ಯಾರ್ಥಿಗಳ ನಡುವೆ ಅಂಥಾ ಬಾಂಧವ್ಯ ಇಲ್ಲ.



ಬೇಂದ್ರೆ, ಕುವೆಂಪು ಮತ್ತು ಕೂಡ್ಲಿ ಚಿದಂಬರಂ (ಶ್ರೀನಿವಾಸರಾಜು ಅವರ ಅಚ್ಚುಮೆಚ್ಚಿನ ಚಿತ್ರ)

## ಬಗ್ಗದೆಯೆ ಕುಗ್ಗದೆಯೆ

ನೀವು ಕ್ರೈಸ್ಟ್ ಕಾಲೇಜಿನ ಪುಸ್ತಕಗಳಲ್ಲಿ ವಿಜ್ಞಾನದ ಪುಸ್ತಕಗಳನ್ನು ನಾವು ಹೆಚ್ಚು ಪ್ರಕಟಿಸದೇ ಇರುವುದನ್ನು ಗಮನಿಸಬಹುದು.



ಕೆ.ವಿ. ನಾರಾಯಣ, ಡಿ.ಆರ್. ನಾಗರಾಜ್, ಶೂದ್ರ ಶ್ರೀನಿವಾಸ್ ಮತ್ತು ಗೆಳೆಯರೊಂದಿಗೆ

ಸರ್ಕಾರದ 'ಕಪ್ಪು ಹಲಗೆ' ಅಂತ ಸ್ಕೀಮಿದೆ. ಅದೇ ಒಂದು ದೊಡ್ಡ ರ್‍ಯಾಕೆಟ್ ಆಗಿದೆ, ನಾವು ಅದರ ಭಾಗವಾಗದೆ ದೂರ ಉಳಿದೆವು. ಅಧಿಕಾರ ಅನ್ನೋದು ಅಲ್ಲಿನ ಕಲುಷಿತ ವಾತಾವರಣವನ್ನು ಗೆಲ್ಲಬಲ್ಲ ಸ್ವಾತಂತ್ರ್ಯ ನನಗೆ ಕೊಡಬೇಕು. ಅದಕ್ಕೆ ಒಪ್ಪಿ, ರಾಜಿಮಾಡಿಕೊಂಡು ನಾನು ಕೆಲಸ ಮಾಡಲಾರೆ, ಹಾಗೇ, ಕಥೆ ಕಾದಂಬರಿಗಳನ್ನೂ ನಾವು ಹೆಚ್ಚು ಪ್ರಕಟಿಸಿಲ್ಲ. ಯಾವುದನ್ನು ಇತರ ಪ್ರಕಾಶಕರು ಕಡೆಗಣಿಸಿದರೋ ಅಂಥಾ ಕಾವ್ಯ, ವಿಮರ್ಶೆ ಮುಂತಾದವನ್ನು ಪ್ರಕಟಿಸಿದೆವು.

ಒಂದು ಸಲ frustrate ಆಗಿದ್ದಾಗ ರಾಜರತ್ನಂ ಅವರ ಹತ್ತಿರ ಹೇಳಿಕೊಂಡಿದ್ದೆ. ಅವರು ಒಂದು ಉದಾಹರಣೆ ಕೊಟ್ಟರು: ಒಂದು ಸಂಜೆ ಯಾರೋ ಕ್ರಿಶ್ಚಿಯನ್ ಮಿಷನರಿಯವರು ಒಂದು ಕಾರ್ಡು ಹಾಕಿ ಹೋಗಿದ್ದರಂತೆ. ಅದರಲ್ಲಿ Do not stop, turn towards god ಅಂತ ಒಂದು ಪದ್ಯ ಇತ್ತಂತೆ... ನೀನು ನಿನ್ನ ಕೆಲಸ ಮಾಡು ಅಂದರು. ನಾನೂ ಆಲೋಚಿಸಿದೆ, ಯಾಕೆ ಕೆಲಸ ನಿಲ್ಲಿಸಬೇಕು, ಸ್ವಲ್ಪ ಕಷ್ಟ ಆಗಬಹುದು ಅಷ್ಟೆ...

ನಾನು ಯಾವಾಗಲೂ ಹೇಳೋ ಹಾಗೆ ಮೂರು ಸಂಗತಿಗಳು ನನಗೆ ಸಹಕಾರಿಯಾದ್ವು. ಒಂದು, ನನ್ನ ಕಾಲೇಜು, ನನ್ನ ಸಹೋದ್ಯೋಗಿಗಳು ಮತ್ತು ವಿದ್ಯಾರ್ಥಿಗಳು. ಎರಡನೆಯದು, ನನ್ನ ಅಪಾರವಾದ ಗೆಳೆಯರ ಬಳಗ. ಮೂರನೆಯದು ಮತ್ತು ಮುಖ್ಯವಾದದ್ದು ನನ್ನ ಮನೆ, ತಂದೆ-ತಾಯಿ, ಹೆಂಡತಿ-ಮಕ್ಕಳು ಇವರ ಸಹಕಾರ.

## ಮನೆವಾರ್ತೆ

ಸುಗತ (ಮಗ) ಈಗಲೂ ಹೇಳ್ತಾನೆ, ಬೆಳಿಗ್ಗೆ ಅವನು ಏಳುವುದಕ್ಕೆ ಮುಂಚೆ ಹೊರಡುತ್ತಿದ್ದ ನಾನು, ಅವನು ರಾತ್ರ ಮಲಗಿದ ಮೇಲೇ ಮನೆ ಸೇರುತ್ತಿದ್ದೆ. ಎಷ್ಟೋ ದಿನಗಳು ಅವನು ನನ್ನ ಮುಖವನ್ನೇ ನೋಡಿಲ್ಲ... ನನ್ನ ಯಶಸ್ಸಿನ ಹಿಂದೆ ಮನೆಮಂದಿಯ ನೋವು, ಸಿಟ್ಟು, ಕೋಪ ಮತ್ತು ಸಹನೆ ಎಲ್ಲಾ ಸೇರಿಕೊಂಡಿದೆ. ಕ್ರಿಸ್ತಾಂಜಲಿ ಪ್ರಕಟಣೆ ಸಂದರ್ಭದಲ್ಲಿ ನನ್ನಾಕೆಯ ಒಡವೆ ಬ್ಯಾಂಕಿನಲ್ಲಿಟ್ಟು ಹಣ ಹೊಂದಿಸಿದ್ದೆವು. ಆಗಿನ್ನೂ ನಮ್ಮ ಮದುವೆ ಆದ ಹೊಸದು, ಹೊರಗೆ ಇಂಥಾ ಘಟನೆಗಳು ಗೊತ್ತಾಗೋದಿಲ್ಲ. ನನ್ನ ಒಬ್ಬನ ಹೆಸರು ಕೇಳಿಬರುತ್ತೆ... 'ಕ್ರೈಸ್ಟ್ ಕಾಲೇಜು ಕನ್ನಡ ಸಂಘ' ಕಟ್ಟಿದ್ದು ನಾನೊಬ್ಬನಲ್ಲ. ನನ್ನ ಅನೇಕ ಗೆಳೆಯರು, ಮಕ್ಕಳು, ತಂದೆ, ತಾಯಂದಿರು ಇದಕ್ಕೆ ಕಾರಣರಾಗಿದ್ದಾರೆ. 'ಕನ್ನಡ ಸಂಘ' ನಾನು ಕಟ್ಟಿದೆ ಎನ್ನೋ ಅಹಂಕಾರಕ್ಕಿಂತ ಅದು ನನ್ನ ವ್ಯಕ್ತಿತ್ವ ರೂಪಿಸಿದೆ. ಬೇಂದ್ರೆಯವರ 'ಮರುಳು ಸಿದ್ಧ' ಕವನದಂತೆ ನಾನು ಏನೋ ಮಾಡೋಕೆ ಹೊರಟು ಕನ್ನಡ



ನಾಟಕದಲ್ಲಿ



ಸಂಘದ ಕಿನ್ನರಿಯಾಗಿ ಬಿಟ್ಟೆ!

**ಮೌನ**

ನನಗೆ ಕೋಪ ಬಂದ್ರೆ ನಾನು ಮೌನವಾಗಿಬಿಡ್ತೀನಿ. ನನ್ನ ಕೋಪ, ನೋವು ಇವುಗಳನ್ನು ಮೌನವಾಗಿ ಅನುಭವಿಸುತ್ತೇನೆ. ನನ್ನೊಂದಿಗೆ ಕೆಲಸದಲ್ಲಿ ಬೇರೆಯವರನ್ನೂ Involve ಮಾಡಿಕೊಳ್ತೀನಿ. ಹತ್ತು ಸಲ ಅವರು ನನ್ನೊಟ್ಟಿಗಿದ್ದಾರೆ ಅಂತ ಹೇಳೋದ್ರಿಂದ ಅವರಿಗೂ ಹುಮ್ಮಸ್ಸು ಬರುತ್ತದೆ; ಅವರೂ ನಮ್ಮೊಟ್ಟಿಗೆ ಕೈ ಜೋಡಿಸುತ್ತಾರೆ.

ನನ್ನ ಕಾರ್ಯಾವಧಿಯಲ್ಲಿ ಸುಮಾರು 15 ಜನ ಅರೆಕಾಲಿಕ ಉಪನ್ಯಾಸಕ ಜೊತೆಗಾರರು ಬಂದು ಹೋದರು. ದೀರ್ಘಕಾಲ ಯಾರೂ ಅಲ್ಲಿ ಉಳಿದುಕೊಳ್ಳಲಿಲ್ಲ. ಬೇರೆ ಬೇರೆ ಕೆಲಸ ಸಿಕ್ಕಿ ಹೊರಟುಬಿಡೋರು. ಅವರೆಲ್ಲರ ಸಹಕಾರ ನನಗೆ ಸಿಕ್ಕಿದೆ. ಕಾಲೇಜಿನಲ್ಲಿ ಉಳಿದಿರುವ ಕೆಲ ತರುಣ ಅಧ್ಯಾಪಕರು ಮುಂದೆ ಕನ್ನಡ ಸಂಘವನ್ನು ಇನ್ನೂ ಚೆನ್ನಾಗಿ ಕಟ್ಟಿ ಬೆಳೆಸಬಹುದು.

ಒಬ್ಬರ ಕಮಿಟ್‌ಮೆಂಟು, ವಿಷನ್, ಮತ್ತು ಕೆಲಸದ ಬಗೆಗಿನ ಪ್ರೀತಿ ಇನ್ನೊಬ್ಬರಿಗೆ ಬರೋಕೆ ಸಾಧ್ಯವಿರಲ್ಲ. ರಾಜರತ್ನಂ ಅಥವಾ ಕೃಷ್ಣಶಾಸ್ತ್ರಿಗಳಂಥವರು ಬರೋಕೆ ಇನ್ನೂ ಹತ್ತಾರು ವರ್ಷಗಳ ಕಾಲ ಕಾಯಬೇಕು. ಒಂದು ಸಂಸ್ಥೆಯ ಜೀವಿತದಲ್ಲಿ ಈ ರೀತಿಯ ಏರಿಳಿತಗಳು ಇರುತ್ತವೆ. ಸಾಹಿತ್ಯ ಪರಿಷತ್ತು ಹಿಂದೆ ಬಹಳ ಅದ್ಭುತ ಕೆಲಸ ಮಾಡಿತ್ತು. ಎಂಥೆಂಥಾ ಧೀಮಂತ ವ್ಯಕ್ತಿಗಳಿದ್ದರು ಅಲ್ಲಿ...

ಎಷ್ಟೇ ಆದರೂ ಸಾಹಿತಿಗಳನ್ನು ಸೃಷ್ಟಿಸೋಕೆ ಸಂಸ್ಥೆಗಳಿಂದ ಸಾಧ್ಯವಿಲ್ಲ. ಅದಕ್ಕೆ ಒಂದು ದಿಕ್ಕು ಕೊಡಬಹುದಷ್ಟೆ. ಒಂದು ವಾತಾವರಣ ನಿರ್ಮಿಸಿ, ಆಸಕ್ತಿ, ಅಭಿರುಚಿ ಬೆಳೆಯುವುದಕ್ಕೆ ಪ್ರಯತ್ನಿಸಬಹುದು. ಎಲ್ಲಿ ಕೀರ್ತಿ ಮತ್ತು ಹಣ ಕೇಂದ್ರವಾಗಿರುತ್ತೋ ಅಲ್ಲಿ ಯಾವ ಕೆಲಸವೂ ಸಾಧ್ಯವಾಗುವುದಿಲ್ಲ.

'ಸಾಹಿತ್ಯ ಪರಿಚಾರಿಕೆ'ಯ ಭರದಲ್ಲಿ ನನ್ನ 'ಸಾಹಿತ್ಯ ಸೃಷ್ಟಿ' ಬಡವಾಯ್ತು ಅನ್ನೋ ಆರೋಪ ಇದೆ, ಸರಿ. ಆದರೆ ಇದನ್ನು ಮಾಡೋಕೂ ಒಬ್ಬರು ಬೇಕಲ್ಲ? ನಾನೂ ಬರೆದಿದ್ರೆ ಒಂದೆರಡು ಕಾದಂಬರಿ, ಹತ್ತು ನಾಟಕ, ಒಂದಿಪ್ಪತ್ತು ಸಣ್ಣ ಕಥೆ ಬರೀಬಹುದಾಗಿತ್ತು. ಒಂದು ನಾಲ್ಕೋ ಐದೋ ಪುಸ್ತಕ ಬರ್ತಿತ್ತು, ಆಗ ಒಬ್ಬ ವ್ಯಕ್ತಿ ಹೊರಗೆ ಬರುತ್ತಿದ್ದ. ಈಗಾದರೆ, ಒಂದು ಹತ್ತು ಜನ ಒಳ್ಳೆಯ ಕವಿಗಳು, ಲೇಖಕರು, ವಿಮರ್ಶಕರು, ಪ್ರತಿಭಾವಂತರು ಬೆಳಕು ಕಂಡಿದ್ದಾರೆ. ಅದರಿಂದ No Regrets... ಹಾಗೆ ನನ್ನ ಬರವಣಿಗೆಗೆ ನಿಜವಾದ ಶಕ್ತಿ, ಯೋಗ್ಯತೆಗಳಿದ್ದರೆ ಈಗಲೂ ಬರೆಯಬಹುದಲ್ಲ!

ಸಾಹಿತ್ಯ ಪರಿಚಾರಿಕೆ ಹೆಚ್ಚಾಗಬೇಕು. ಈಗ ನಾನು ಮಾಡಿದ್ದಕ್ಕಿಂತಲೂ ಚೆನ್ನಾಗಿ ಆಗಬೇಕು. ಇದು ನನ್ನ ಕನಸು. ನನಗಿಂತಲೂ ಕನ್ನಡಕ್ಕಾಗಿ ಕೆಲಸ ಮಾಡಿದ ನನ್ನ ಗುರುಗಳು, ಹಿರಿಯರು ನಿವೃತ್ತರಾದಾಗ ಅದು ಅಷ್ಟು ಸುದ್ದಿ ಮಾಡಲಿಲ್ಲ. ನಾನು ಮಾಡಿರೋ ಒಂದು ಸಣ್ಣ ಕೆಲಸಕ್ಕೆ ಇಷ್ಟೊಂದು ಪ್ರಾಮುಖ್ಯತೆ... ಈ ಬಗ್ಗೆ ನನಗೆ ಒಂದು ರೀತಿಯ ಮುಜುಗರ, ಆತಂಕ, ವಿಸ್ಮಯ, ಒಳಗೊಳಗೇ ಸಂತೋಷ, ಎಲ್ಲ ಆಗುತ್ತಿವೆ. ಪ್ರತಿಯೊಬ್ಬ ಕನ್ನಡದ ಮೇಷ್ಟ್ರು ಈ ಕೆಲಸ ಮಾಡಬಲ್ಲ; ಒಂದಷ್ಟು ಶ್ರದ್ಧೆ, ಪ್ರೀತಿ ಮತ್ತು ಪ್ರಾಮಾಣಿಕತೆ ಅಗತ್ಯ, ಅಷ್ಟೆ.

**ಮುಂದೆ**

ಇನ್ನಾರು ತಿಂಗಳು ಝೆನ್ ಸಿದ್ಧಾಂತದಂತೆ ನನ್ನ ಮನಸ್ಸನ್ನು, ತಲೆಯನ್ನು ಖಾಲಿ ಮಾಡಿಕೊಳ್ಳುತ್ತೇನೆ. ನಂತರ ಏನು ಮಾಡಬೇಕು ಅಂತ ನಿರ್ಧರಿಸ್ತೇನೆ. ನಾನು ಹೀಗೆ ಮಾಡಿದೆ, ಹಾಗೆ ಮಾಡಿದೆ ಅಂತ ನಾಸ್ಟಾಲ್ಜಿಯಾದಲ್ಲಿ ಇದ್ದುಬಿಡಬಹುದು. ಹಾಗಾಗಬಾರದು, ಮನಸ್ಸು ಖಾಲಿಯಾಗಬೇಕು. ಕೆಲವು ಅಪೂರ್ಣ ನಾಟಕಗಳಿವೆ. ಅವುಗಳನ್ನು ಪೂರ್ತಿ ಮಾಡ್ತೇನೆ.'' ■



ಮಾನಸೋಲ್ಲಾಸ



ಸಂತೋಷಕುಮಾರ ಗುಲ್ವಾಡಿ

# ಕವ್ವಾಲಿ




ನಂದಲಾಲ್ ಬೋಸ್ ಅವರ
'ಭವಾಲ್ ಹಾಡುಗಾರ' ರೇಖಾಕೃತಿ

ಫಾರ್ಸಿ ಭಾಷೆಯ ಈ ಶಬ್ದದ ಅರ್ಥ ಹೇಳುವುದು, ತಿಳಿಸುವುದು, ಪ್ರಶಂಸೆ ಮಾಡುವುದು ಎಂದಿದೆ. ಅದೊಂದು ಗೀತವಿಶೇಷ. ಪರ್ಸಿಯಾ-ಅಂದರೆ ಈಗಿನ ಇರಾಣದಲ್ಲಿ ಇದರ ಉಗಮ. ಇದೊಂದು ವಿಶಿಷ್ಟ ಹಾಡುಗಾರಿಕೆಯ ಶೈಲಿ.

ಕವ್ವಾಲ್ ಅಂದರೆ ಸೂಫಿ ಸಂತರ ಹಾಡುಗಾರಿಕೆ. ಅದೊಂದು ಬಗೆಯ ರಹಸ್ಯ ಗರ್ಭಿತ, ಆಧ್ಯಾತ್ಮಿಕ ಸಂದೇಶ. ಭಯಭಕ್ತಿ ಪ್ರಚೋದಕ. ಪರಮಾತ್ಮನಲ್ಲಿ ಐಕ್ಯವಾಗಲು, ಸಾಯುಜ್ಯ ಪಡೆಯುವ ಸಂಗೀತಸಾಧನೆ. ಅದರಲ್ಲಿ ಅತೀಂದ್ರಿಯ ಧ್ವನಿ ಹಾಗೂ ಸ್ವರ ವಿಶೇಷಗಳಿವೆ.

ಖ್ವಾಜಾ ಮೊಯಿನುದ್ದೀನ್ ಚಿಸ್ತಿ ಗರೀಬ್ ನವಾಜ್ ಅವರು ಕವ್ವಾಲಿ ಪದ್ಧತಿಯ ಹಾಡುಗಾರಿಕೆಯನ್ನು ಭಾರತಕ್ಕೆ ತಂದು ಜನಪ್ರಿಯಗೊಳಿಸಿದರು ಅನ್ನುತ್ತಾರೆ. ಸೂಫಿ ಪಂಥದಿಂದ ಇದು ಉತ್ತರ ಭಾರತದಲ್ಲೆಲ್ಲ ಪ್ರಚಾರಗೊಂಡಿತು. ಸೂಫಿ ಸಂತರು ಕವ್ವಾಲಿ ಹಾಡುತ್ತ ಹಾಡುತ್ತ ಸಂಚರಿಸುತ್ತಿದ್ದರು. ನಮ್ಮ ದಾಸರು ಭಕ್ತಿಗೀತೆಗಳನ್ನು ಮನೆಮನೆಗೆ ಹೋಗಿ ಹಾಡಿದಂತೆಯೇ ಸೂಫಿ ಸಂತರು ಕವ್ವಾಲಿಗಳನ್ನು ಮನೆಮನೆಗೆ ಹೋಗಿ ಹಾಡುತ್ತಿದ್ದರು.

ಈ ರೀತಿಯಾಗಿ ತಿರುಗಾಡುತ್ತ ಹಾಡುತ್ತಿದ್ದ ಸಮೂಹವನ್ನು 'ಕವ್ವಾಲ್ ಬಚ್ಚೇ' ಅನ್ನುತ್ತಿದ್ದರು. ಇದೊಂದು ರೀತಿಯ ಹರಕೆ, ಸೇವೆ, ಸಾಧನೆ ಎಂದು ಕೂಡ ತಿಳಿದುಕೊಂಡಿದ್ದರು. ಹಜರತ್ ಅಮೀರ್ ಖುಸ್ರೊ, ಕವ್ವಾಲಿ ಹಾಡುಗಾರಿಕೆಯ ತಂಡಗಳನ್ನು ಇನ್ನಷ್ಟು ಜನಪ್ರಿಯಗೊಳಿಸಿದರು. ಶಾಸ್ತ್ರೀಯ ಸಂಗೀತಗಾರರೂ ಅದನ್ನು ಮೆಚ್ಚಿಕೊಂಡು ಹಾಡಲಾರಂಭಿಸಿದರು.

ಸುಮಾರು 13ನೆಯ ಶತಮಾನದಲ್ಲಿ ಕವ್ವಾಲಿ ಹಾಡುಗಾರಿಕೆ ಭಾರತದಲ್ಲಿ ಬಹಳ ಜನಪ್ರಿಯವಾಯಿತು. ಅದೊಂದು ವಿಶಿಷ್ಟ ಬಗೆಯ ಸಂಗೀತ ಎಂದು ಪರಿಗಣಿಸುವಂತಾಯಿತು.

ಖ್ವಾಜಾ ಮೊಯಿನುದ್ದೀನ್ ಚಿಸ್ತಿ ಗರೀಬ್ ನವಾಜ್ ಅವರು ರಾಜಸ್ತಾನದ ಅಜಮೇರ್‌ದವರು. ಅವರ ಶಿಷ್ಯವರ್ಗದವರೆಲ್ಲ ಸಾಮೂಹಿಕವಾಗಿ ಕವ್ವಾಲಿ ಹಾಡುತ್ತಿದ್ದರು. ಅವರನ್ನೆಲ್ಲ ಕವ್ವಾಲ್ ಬಚ್ಚೆ ಎಂದೇ ಜನರು ಗುರುತಿಸುತ್ತಿದ್ದರು. 'ಕವ್ವಾಲ್ ಬಚ್ಚೆ' ಪರಂಪರೆ ಬೆಳೆದು ಬಂದ ಬಗೆಯೇ ಈ ರೀತಿಯದು.

ಈ ಹಾಡುಗಾರರು ಒಂದೆಡೆ ನಿಲ್ಲುತ್ತಿರಲಿಲ್ಲ. ಪರಿವ್ರಾಜಕ ಸನ್ಯಾಸಿಗಳಂತೆ ತಿರುಗಾಡುತ್ತಿದ್ದರು. ಊರೂರು ಸುತ್ತುತ್ತಿದ್ದರು. ಅವರು ಯಾವ ಆಸ್ತಿಪಾಸ್ತಿಗೆ ಕೂಡ ಆಸೆ ಪಡುತ್ತಿರಲಿಲ್ಲ.

ಆರಂಭದಲ್ಲಿ ಸೂಫಿ ಪಂಥದವರು ಕವ್ವಾಲಿ ಗಾಯಕರೆನಿಸಿದರೂ ಕ್ರಮೇಣ ಅವರು ಪೇಶೆವಾರ ಅನಿಸಿಕೊಂಡರು.

ಕವ್ವಾಲಿಯಲ್ಲಿ ಮುಖ್ಯವಾಗಿ ಮೂರು ಭೇದಗಳು-

1. ಹಮ್ದ್- ಇವೆಲ್ಲ ಪರಮಾತ್ಮನ ಪ್ರಶಂಸೆಯ ಗೀತೆಗಳು.
2. ನಾಸ್ತ್- ರಸೂಲನ್ ಪ್ರಶಂಸೆ.
3. ಮನಕವತ- ರಸೂಲರ ವಂಶಜರ ಪ್ರಶಂಸೆ.

ಗಜಲ್, ಕಸೀದಾ, ರೂಬಾಯಿ ಮೊದಲಾದ ಪರ್ಶಿಯಾ, ಉರ್ದು, ಅರೆಬಿಕ್ ಕಾವ್ಯ ಪ್ರಕಾರಗಳನ್ನು ಕವ್ವಾಲಿ ಸ್ವರರಚನೆಯಲ್ಲಿ ಹಾಡಬಹುದು. ಹಾಡಿ ರಸಿಕತನ, ವಿರಹ ಹೆಚ್ಚಿಸುತ್ತಾರೆ.

ಉತ್ತರ ಭಾರತದ (ಅಥವಾ ಹಿಂದುಸ್ಥಾನಿ ಸಂಗೀತ) ಸಂಗೀತ ಪರ್ಶಿಯಾ, ಅರೆಬಿಯಾ ಪ್ರಭಾವಗಳಿಂದ ಹೊಸತನ ಪಡೆಯಿತು. ಶಾಸ್ತ್ರದ ಚೌಕಟ್ಟನ್ನು ಮೀರದೆ, ಆದರೆ ಕೇವಲ ಶಾಸ್ತ್ರದ ವ್ಯಾಕರಣಕ್ಕಷ್ಟೆ ಸೀಮಿತವಾಗದೆ ವೈವಿಧ್ಯಪೂರ್ಣವಾಗಿ ಬೆಳೆಯಿತು. ಈ ಬೆಳವಣಿಗೆಯಲ್ಲಿ ಕವ್ವಾಲಿ ಬಹಳಷ್ಟು ಪ್ರಚೋದನೆ, ಸ್ಫೂರ್ತಿ ಕೊಟ್ಟಿತು. ಒಂದು ಹೊಸ ಗಾಯನ ಪರಂಪರೆಯೇ ಹುಟ್ಟಿತು.

ಇಂದು ನಾವು ಕೇಳುವ ಹಿಂದುಸ್ಥಾನಿ ಸಂಗೀತದಲ್ಲಿ ಕವ್ವಾಲಿಯ ಪ್ರಭಾವ ಬಹಳಷ್ಟು ಆಗಿದೆ. ಅದರ ಅಂಗ ಅಂಗಗಳಲ್ಲೂ ಸಾದರಪಡಿಸುವ ರೀತಿಯಲ್ಲೂ ಕವ್ವಾಲಿ ತನ್ನ ಕರಾಮತ್‌ನ್ನು ಮಾಡಿದೆ.

ತಾನ್‌ಗಳು, ಸರಗಮ್‌ಗಳು, ಮೀಂಡ್, ಬೋಲ್‌ಗಳೆಲ್ಲ ಕವ್ವಾಲಿಯ ಛಾಯೆಯನ್ನು ಒಂದಲ್ಲ ಒಂದು ರೀತಿಯಲ್ಲಿ ತೋರಿಸುತ್ತಿವೆ. ಇವುಗಳೆಲ್ಲದರ ಶಾಂತ, ಸುಂದರ, ಆಕರ್ಷಕ ಸ್ವರೂಪವೇ ಖಯಾಲ್ ಹಾಡುಗಾರಿಕೆ (ಮೇ ಸಂಚಿಕೆಯ ಭಾವನಾ ನೋಡಿ).

ಕವ್ವಾಲಿಯಲ್ಲಿ ಶೃಂಗಾರ-ಅಲಂಕಾರಗಳಿವೆ ಅನಿಸಿದರೂ ತ್ಯಾಗ, ಅಧ್ಯಾತ್ಮಿಕ ಚಿಂತನೆ, ಧ್ಯಾನ, ಸಾಧನೆಗಳ ಹೊಳಕು ಬಹಳಷ್ಟಿದೆ. ಒಂದು ದೃಷ್ಟಿಯಲ್ಲಿ ಕವ್ವಾಲಿ ಹಾಡುಗಾರಿಕೆಯ ಪದ್ಧತಿ ಗಡಿಯಾರದ ಲೋಲಾಕಿನಂತೆ ಎರಡು ತೀವ್ರತಮ ಅಂಚುಗಳಲ್ಲೂ ಆಡಿದೆ. ಅಲ್ಲಿ ಜೀವನ ಸುಖದ ಬಯಕೆಗಳೂ ಇವೆ. ತ್ಯಾಗದ ಸುಖವೂ ಇದೆ. ಯೋಗ-ಭೋಗಗಳ ಈ ಎರಡು ಧ್ರುವದರ್ಶನ ಕವ್ವಾಲಿ ಸಂಗೀತದ ವಿಶೇಷ ಅನುಭವವೂ ಹೌದು.

# ಸಮಯವಿದೆಯೆ ಪಪ್ಪಾ?

ಸವಿತಾ ನಾಗಭೂಷಣ



ಸಮಯವಿದೆಯೆ ಪಪ್ಪಾ?

ಆಚೆ ಗುಡ್ಡದಾಚೆ ಇದೆ ನದಿ
ಆಹಾ! ಎಷ್ಟು ಚಂದ ಅದರ ತುದಿ
ಅಬ್ಬಾ... ಎಷ್ಟು ದೊಡ್ಡ ಸುಳಿ
ಹೇಗೋ ಪಾರಾದೆ ನುಸುಳಿ
ಸರ್ರೆಂದು ಜಾರುವುದು ನುಣ್ಣನೆಯ ಹಾವು
ಎದೆಯೆತ್ತರಕೂ ಹಾರುವುದು ಪುಟಾಣಿ ಮೀನು
ಬಾ ಪಪ್ಪಾ ತೋರಿಸುವೆನು...

ಸಮಯವಿದೆಯೆ ಪಪ್ಪಾ?
ಬೆಟ್ಟವೇರೋಣ ಬಾ ನೀನೂ
ಅಲ್ಲಿಂದ ಮುಟ್ಟೋಣ
ಆಕಾಶ, ಚಂದ್ರನನ್ನು
ಮೆಟ್ಟಿಲುಗಳೇ ಬೇಡ
ಜಾರುಗುಪ್ಪೆಯಾಡುತ್ತಾ
ಉರುಳುರುಳಿ ಸೇರಬಹುದು ನೆಲವನ್ನು
ಬಾ ಪಪ್ಪಾ ತೋರಿಸುವೆನು...

ಕರಿಬೇವಿನ ಮರದಲ್ಲಿ
ಕಟ್ಟಿದೆ ಗುಬ್ಬಿಗೂಡು
ಇಟ್ಟಿದೆ ಪುಟ್ಟ ಮೊಟ್ಟೆ
ನೀನೂ ಬಾ ನೋಡು
ನಿಂಬೆಯ ಎಲೆ ಮೆದ್ದು
ಗಡದ್ದು ನಿದ್ದೆಯಲ್ಲಿದೆ ಕಂಬಳಿಹುಳು
ಬಾ ಪಪ್ಪಾ ತೋರಿಸುವೆನು

ಚಿತ್ರ ಆಚೆ ಇಡು
ಎಲ್ಲಾ ಹೇಳುವೆನು

ನಿಜ ಶಾಲೆ ತಪ್ಪಿಸಿ
ಸಾಬಣ್ಣನ ಹೊಲಕ್ಕೆ ಹೋಗಿದ್ದೆನು
ದೆವ್ವವಲ್ಲ...
ಬೆದರು ಬೊಂಬೆ
ಪರೀಕ್ಷೆ ಮಾಡಿದೆನು

ಚಿತ್ರ ಆಚೆ ಇಡು
ನಿಜವ ಹೇಳುವೆನು

ಪಾಠದ ಪುಸ್ತಕ ತೆರೆದರೆ
ಬರೀ ಗುಡ್ಡ ಬೆಟ್ಟ ನದಿಯೆ
ಕಾಣುವುದು
ಮನ ಅದರ ಹಿಂದೆ-ಮುಂದೆ
ಸುಳಿದಾಡುವುದು



3

ತಂಗಿ ಶಾರಿ ಬಲು ಘಾಟಿ, ಚೂಟಿ
ಖಂಡಿತ ಆಫೀಸರ್ ಆಗಿ
ಹೆಸರು ಮಾಡುವಳು

ಅಣ್ಣಗನಿ, ಗಣಿತದಲಿ ಜಾಣ
ಕಂಪ್ಯೂಟರ್ ಸಾಯನ್ಸ್
ಮುಗಿಸಿ ಖಂಡಿತ
ಅಮೆರಿಕೆಗೆ ಹೋಗುವನು

ನಾನು?!
ನೀನು ಒಪ್ಪಿದರೆ
ಅಜ್ಜ ನಿನಗಿತ್ತ
ತುಂಡು ಭೂಮಿಯನೇ
ಉತ್ತುವೆನು, ಬಿತ್ತುವೆನು
ಈ ಹಳೆಯ ಮನೆಯೇ ಸಾಕು
ಇಲ್ಲೇ ನಿನ್ನೊಂದಿಗೆ ಒಂದು
ತುತ್ತು ಉಣ್ಣುವೆನು

ಛೀ! ಕೂಳಿಗೆ ದಂಡ ಎಂದು
ದೂರದಿರು ಪಪ್ಪಾ....
ಬೇಜಾರಾಗದಿರು.....

ತೆಂಗು ಅಡಿಕೆ, ಬಾಳೆಗೆ
ನೀರೂಡುವುದಿಲ್ಲವೆ ನೀನು?
ಹೇಳಪ್ಪಾ ನಾನು
ಆ ಗಿಡಕ್ಕಿಂತ ಕಡೆಯೇನು?

ನೋಡುತ್ತಾ... ಇರು
ನಿನ್ನ ಮೇಲೆಯೇ ಒಂದು
ಕವಿತೆ ಕಟ್ಟುವೆನು
ಕವಿತೆಯ ಬಲದಿಂದಲೇ
ಕೊನೆತನಕ ಬಾಳುವೆನು



# ಬೆಕ್ಕು ಅಡ್ಡ ಹೋಯಿತು....

ಗಕ್ಕೆಂದು ನಿಂತೆ ಒಂದು ಕ್ಷಣ
ಶುರುವಾಯಿತು ಅನುಮಾನ

ಅವೊತ್ತು ಇಡೀ ದಿನ
ಬೆಕ್ಕಿನದೇ ಧ್ಯಾನ

2

ಮೀನು ಮಾರುವವಳಿಗೆ
ಮಾಯೆ ಕವಿದಿರಲು

ಒಣ ಮೀನಿಗೂ
ಜೀವ ಬಂದಿರಲು

ಘಮಘಮಿಸಿ ಅದು
ಲೋಕವನೆ ಸೆಳೆದಿರಲು

ಪರಿಮಳದ ಜಾಡುಹಿಡಿದು
ಮೂಗರಳಿಸಿ ಬೆಕ್ಕು-

ಅಡ್ಡ ಹೋಯಿತು!



ಜಿ.ಕೆ. ರವೀಂದ್ರಕುಮಾರ್

# ತೀರವಿಲ್ಲದ ಮೇಲೆ

ಹೊಲಿಯದ ರೆಪ್ಪೆಯೊಳಗೆ ನಿಲ್ಲದ ನೋಟ
ನಿನ್ನ ಬಿಂಬವ ನೀನು ಗುರುತಿಸಬೇಕು।

ಅಂಟದ ತುಟಿಯೊಳಗೆ ಹರಿಯುವ ಮಾತು
ನಿನ್ನ ಪ್ರೀತಿಯ ನೀನು ತುಂಬಿಕೊಳಬೇಕು।

ಊರಿದ ಹೆಜ್ಜೆಯೊಳಗೆ ಕ್ಷಣ ನಿಲ್ಲದ ಪಾದ
ನಿನ್ನ ದಿಕ್ಕನು ನೀನು ತೊಡಿಸಬೇಕು।

ಮುತ್ತಿಡುವ ಮೋದದಲಿ ಹಾತೊರೆವ ಉಸಿರು
ಕಣ್ಣಹನಿಗಳ ಒಡ್ಡಿ ಆವಿಯಾಗಿಸಬೇಕು।

ಕಳೆ ಬೆಳೆದ ಎದೆಯಲ್ಲಿ ಕಾಳು ಕಟ್ಟದ ತೆನೆ
ಕಳೆ ತೊಡೆವ ಬೆರಳಲ್ಲಿ ಬಸಿರ ಬಲವಿರಬೇಕು।

ಅವರವರ ನೋಟದಲಿ ಸುತ್ತಿ ಹೋಗುವ ಸುಳಿ
ತೀರವಿಲ್ಲದ ಮೇಲೆ ತೀರದಂತಿರಬೇಕು।

ಅವನಿರುವಾಗ ಇಷ್ಟು ಅವನ ಕೊರಳಿಗಾಗಿ
ಅವನಿಲ್ಲದಿರುವಾಗ ಇನ್ನೆಷ್ಟು ಅವನ ಮುರಲಿಗಾಗಿ।

# ಪಾತ್ರ

ಮನದ ನದಿ
ಎದೆಯ ನದಿ

ಪಾತ್ರಗಳು ಎದುರು ಪಾತ್ರಗಳಂತೆ
ದಿಕ್ಕು ತಪ್ಪಿ ದಿಕ್ಕು ಹಿಡಿದು

ಮಣ್ಣ ಸಮುದ್ರ
ಬೆಂಕಿ ಸಮುದ್ರ

ಸೇರುವ ಮೊದಲು
ಪಾತ್ರಗಳ ಜೊತೆ ಒಂದು ಮಾತಾದರೂ

ಬಲೆ ತಪ್ಪಿಸಿಕೊಂಡು ಉಳಿದೀತೆ
ಸೆಳೆದಂತೆ ಎಳೆದಂತೆ
ಉತ್ತ ಬೀಜಕ್ಕೆ ಮೊಲೆಯುಣಿಸಿ
ಬಿದ್ದ ಶವದ ಕನಸ ತೇಲಿಸಿ

ಅಲೆಗಳು ಅರ್ಥವಾಗಲೇ ಇಲ್ಲ
ಹೋಗಿ ಕರೆಯುವುದೇ
ಬಂದು ಮರುಗುವುದೇ

ಅವಳ ಉಂಗುರ ಹೆಕ್ಕಿ ಎಷ್ಟೆಂದು ಅಳಲಿ?







# ಕಣ್ಣಾ ಮುಚ್ಚಾಲೆ

ಬೆಳಕಿಲ್ಲದೆ ಹೊಳೆಯಲಾಗದ ಕಾಯ
ಕತ್ತಲ ಆಗಸದಲ್ಲಿ ಹೊಳೆಯುತ್ತ ನಿಂತಲ್ಲಿ
ಬೆಳಕ ಕೊಡುವವನು ಕಾಣಲಿಲ್ಲ

ಬೆಳಕ ಕೊಡುವವನು
ಬೆಳ್ಳಿಯಾಗಸದಲ್ಲಿ ಉರಿಯುತ್ತ ನಿಂತಲ್ಲಿ
ಕೊಳೆವವರು ಕಾಣಲಿಲ್ಲ.

ಕೊಟ್ಟು ಪಡೆಯುವ ಕಣ್ಣಾಮುಚ್ಚಾಲೆಯಲಿ
ೀಗುವವರೆಲ್ಲೋ
ಾಗುವವರೆಲ್ಲೋ
ಲದ ನೆಲೆ ಮುಗಿಯದ ಸುತ್ತು

ಅವಳ ಕಣ್ಣು ಹೊಳೆಯುವಾಗ

# ತೊಟ್ಟಿಲು

ಬೇಡವೇ ನಮಗೂ ತೊಟ್ಟಿಲು ಮಕ್ಕಳಂತೆ?

ಬಳ್ಳಿ ಕತ್ತರಿಸಿಕೊಂಡ ಕರುಳಿಗೂ ದಣಿವು
ಅಟ್ಟದ ಮೇಲಿಟ್ಟ ತೊಟ್ಟಿಲು
ಮುರಿದ ಕಾಲಿನ ಏಣಿ

ಬಿದ್ದರೆ ಇದೆಯೇ ನೋವು ಹೀರುವ ಮಡಿಲು
ಹೆತ್ತ ಕತೆಗಳ ಸಂತೆ
ಯಾವ ಕತೆಗೆ ಪೆಟ್ಟಾಗುವುದೋ

ಹುಡುಕುತ್ತ ನಡೆವಲ್ಲಿ ಸಿಗುವ ತೋಳು
ಇರುವುದೇ ಜೋಗುಳದ ಒಲುಮೆ
ನಲವಿಗೆ ಒಪ್ಪಿಕೊಂಡ ಕನಸು
ತೋಳ
ಬಂಧಿ

ಮೇಲೆ ಸಾವಿರ ಕಣ್ಣು ಅಂತರಗಣ್ಣು
ಕೂತ ಉಯ್ಯಾಲೆಗೆ
ಮಾತು ಮೌನದ ಸೂಜಿಗಲ್ಲು

ತೊಡೆದು ಆಸೆಯಳಿದು ಅಸೂಯೆ ಕಳೆದು
ನಾಚುಗೆಯ ಹೊರೆ ಕಳಚಿ
ನೇವರಿಸುವ ಕ್ಷಣದಲ್ಲಿ
ಸಂತೈಸುವ ಮನದಲ್ಲಿ

ಹೊಳೆಯುವ ಕಣ್ಣ ಬೆಳಕು
ಗಂಡಾದಲ್ಲಿ ತಂದೆ
ಹೆಣ್ಣಾದಲ್ಲಿ ತಾಯಿ

ಕಣ್ಣ ತೊಟ್ಟಿಲಲಿ ಧರೆ ತೊಟ್ಟಿಲ ತೂಗಿ
ಅರಳಲಾರದೇ ಮಮತೆಯ ಹೊಕ್ಕಳು

ಆಗ
ಬೇಡವೇ ಕಣ್ಣು ತೊಟ್ಟಿಲು
ಜಗದ ರಚ್ಚೆಯ ತೂಗಿಕೊಳ್ಳಲು





ಅಶೋಕ ಹೆಗಡೆ

# ಒಳ್ಳೆಯವನು

ಭಾವನಾ ಜೂನ್, 2000

ಆವನೊಬ್ಬ ಒಳ್ಳೆಯವನು. ಊರಿನ ಜನರೆಲ್ಲರು ಅವನನ್ನು ಹಾಗೆ ಕರೆಕರೆದು, ಅವನಿಗೆ ತನ್ನ ಹೆಸರೆ ಮರೆತುಹೋಗಿತ್ತು. ಅವನ ಖ್ಯಾತಿ ಆ ಭಾಗದಲ್ಲೆಲ್ಲ ಎಷ್ಟು ಸಮಗ್ರವಾಗಿ ಹಬ್ಬಿತ್ತೆಂದರೆ, ಮುಂದೆ ಆ ಭಾಗದಲ್ಲಿ ಹುಟ್ಟಿದ ಮಕ್ಕಳಿಗೆಲ್ಲಾ ಒಳ್ಳೆಯವನು ಎಂದೆ ನಾಮಕರಣ ಮಾಡತೊಡಗಿದ್ದರು.

ಅಂತಹ ಒಳ್ಳೆಯವನು ಈಗ ಆ ಸಮುದ್ರದ ದಂಡೆಯಲ್ಲಿ ಅಂಗಾತ ಸತ್ತು ಬಿದ್ದಿದ್ದ. ಸಮುದ್ರದ ಉಪ್ಪು ನೀರು ಕುಡಿದು, ಅವನ ಹೊಟ್ಟೆ ಉಬ್ಬರಿಸಿಕೊಂಡಿತ್ತು. ಕಣ್ಣು ಗುಡ್ಡೆಯೊಂದನ್ನು ಕಾಗೆಗಳು ಕುಕ್ಕಿ ಹೊರತೆಗೆದುದರಿಂದ ಅದು ಮರಳ ಮೇಲೆ ಬಿದ್ದಿತ್ತು. ಸಾಯುವ ಮೊದಲು ಆತ ಬಟ್ಟೆಗಳನ್ನೆಲ್ಲಾ ಸಮುದ್ರದ ದಂಡೆಯ ಮೇಲೆ ಬಿಚ್ಚಿಟ್ಟು ಹೋಗಿದ್ದನೆ? ಯಾಕೆಂದರೆ ಆತನ ಮೈಮೇಲೆ ಒಂದಿಂಚು ಬಟ್ಟೆ ಇರಲಿಲ್ಲ.

ಬದುಕಿದ್ದಾಗ ಆತನೇ ಪ್ರತಿಪಾದಿಸಿದ ಒಳ್ಳೆಯತನಗಳು ಆ ಊರಿನಲ್ಲಿ ಬೇರುಬಿಟ್ಟಂತೆ ಕಾಣುತ್ತಿದ್ದವು. ಹಾಗಾಗಿಯೇ ಅಂತಹ ಹೊತ್ತಿನಲ್ಲಿ, ಸಮುದ್ರದ ಆ ತುದಿ ದಂಡೆಯಲ್ಲಿ ಯಾರೂ ಓಡಾಡುತ್ತಿರಲಿಲ್ಲ. ಮೊದಮೊದಲು ಪ್ರೇಮಿಗಳು ಆ ಜಾಗದಲ್ಲಿ ಕುಳಿತಿರುತ್ತಿದ್ದರು. ಅವರ ಪ್ರೀತಿಗೆ ಭಂಗ ಬಂದೀತೆಂದು ಒಳ್ಳೆಯವರೆಲ್ಲರೂ ಅವರಿಂದ ದೂರವಿರತೊಡಗಿದರು. ಕ್ರಮೇಣ ಜನರೇ ಓಡಾಡದಂತಾಗಿ, ಅಂತಹ ಏಕಾಂತದಲ್ಲಿ ಪ್ರೇಮಿಗಳು ಇರಲು ಹೆದರತೊಡಗಿದರು. ಕ್ರಮೇಣ, ಅಲ್ಲಿ ಬಂದು ಕುಳಿತುಕೊಳ್ಳುವ ಪ್ರೇಮಿಗಳ ಸಂಖ್ಯೆ ಕೂಡಾ ಕಡಿಮೆಯಾಯಿತು. ಹಾಗೆ ಕಡಿಮೆಯಾಗುತ್ತಾ ಮುಂದೊಂದು ದಿನ ನಿಂತೇ ಹೋಯಿತು.

ಈಗ, ಈ ಸಮುದ್ರದ ದಂಡೆಯಲ್ಲಿ, ಹೀಗೆ ಅನಾಥವಾಗಿ ಸತ್ತು ಬಿದ್ದಿದ್ದ 'ಒಳ್ಳೆಯವನು' ಒಳ್ಳೆಯವನಾಗಿಯೇ ಹುಟ್ಟಿದವನೇನೂ ಆಗಿರಲಿಲ್ಲ. ಆತ ಹುಟ್ಟಿದಾಗ, ಅತಿ ಕೆಟ್ಟದಾಗಿ, ಎಲ್ಲಾ ಮಕ್ಕಳು ಕಿರುಚಿಕೊಳ್ಳುವಂತೇ ಕಿರುಚಿಕೊಂಡಿದ್ದ. ಆದರೂ ಅವನ ತಂದೆತಾಯಿಗಳು 'ನಮ್ಮ ಮಗು ಎಷ್ಟು ಮುದ್ದಾಗಿ ಅಳುತ್ತದೇರಿ' ಎಂದುಕೊಂಡು ಲಲ್ಲೆ ಹಾಡಿ ಆತನನ್ನು ಮಲಗಿಸುತ್ತಿದ್ದರು. ಪಾಪ, ಮಕ್ಕಳೆಂದರೆ ಪಂಚಪ್ರಾಣವಾದ ಅವರು, ಅವನ ತುಂಟಾಟಗಳನ್ನೆಲ್ಲ 'ಎಷ್ಟು ಒಳ್ಳೆಯದು' ಎಂದೇ ಸ್ವೀಕರಿಸಿದರು. ಒಮ್ಮೆ ಒಳ್ಳೆಯವನು ತನ್ನ ಸ್ನೇಹಿತರ ಜೊತೆಗೆ ಜಿದ್ದಿಗೆ ಬಿದ್ದು, ಅವರು ಪೂಜಿಸುವ ದೇವರ ಮೂರ್ತಿಯ ಮೇಲೆ '**ಚೋಳ್**' ಎಂದು ಉಚ್ಚೆ ಹಾರಿಸಿದಾಗಲೂ ಅವರು ಸಿಟ್ಟುಗೊಂಡಿರಲಿಲ್ಲ. ಬದಲಿಗೆ ಎಂತಹ ಒಳ್ಳೆಯ ಹುಡುಗಾಟಿಕೆ ನಮ್ಮ ಮಾಣಿಯದು ಎಂದು ನಗೆಯಾಡಿದ್ದರು. ಅವನ ಬಾಲಲೀಲೆಗಳೆಲ್ಲವೂ ಇತರರಿಗಿಂತ ತುಂಬಾ ಭಿನ್ನವಾಗಿಯೇನೂ ಇರಲಿಲ್ಲ. ನಂತರದ ದಿನಗಳಲ್ಲಿ ಅವನ ತುಂಟಾಟಗಳು ತುಂಬಾ ಹೆಚ್ಚಾದುದರಿಂದ, ಬೇರೆ ದಾರಿ ಕಾಣದೆ ಅವನನ್ನು ಒಂದು ಶಾಲೆಗೆ ಸೇರಿಸಲಾಯಿತು. ಒಳ್ಳೆಯವನಿಗೆ ಶಾಲೆಗೆ ಸೇರಿದ ಮೇಲೆ ಅಚಾನಕ್ ಆಗಿ ಲೋಕವೊಂದು ಬದಲಾಯಿಸಿದಂತೆನಿಸಿತು. ಯಾಕೆಂದರೆ ಅವನ

ಸಹಪಾಠಿಗಳಂತೂ ಒಳ್ಳೆಯವರಂತೆ ಕಾಣುತ್ತಿದ್ದರು. ಒಳ್ಳೆಯವನು ಮಾಡುವ ಚೇಷ್ಟೆಗಳನ್ನು ಅವರು ಕೂಡಾ ಮಾಡುತ್ತಿದ್ದರು. ಒಳ್ಳೆಯವನಂತೆ ಅವರೂ, ತಮಗೆ ಬರುವ ಸಿಟ್ಟುಗಳನ್ನು ವಿವಿಧ ರೀತಿಯಲ್ಲಿ ಪ್ರತಿಬಿಂಬಿಸುತ್ತಿದ್ದರು. ಸಾಲದುದಕ್ಕೆ ಅವರ ತಂದೆತಾಯಿಗಳೆಲ್ಲರೂ, ಅವರವರ ಮಕ್ಕಳನ್ನು ಒಳ್ಳೆಯವರೆಂದೆ ಕರೆಯುತ್ತಿದ್ದರು. ಅವರೆಲ್ಲರೂ ಶಾಲೆಯ ಗೇಟಿನ ಬಳಿ ನಿಂತು, ಮಕ್ಕಳಿಗಾಗಿ ಕಾಯುತ್ತಿದ್ದರು. ಹಾಗೆ ಕಾಯುತ್ತಾ ನಿಂತವರಲ್ಲಿ ಒಳ್ಳೆಯವನ ತಂದೆ ತಾಯಿಗಳು ಇರುತ್ತಿದ್ದರು. ದೂರದಿಂದ ನೋಡಿದಾಗ ತಾಯಂದಿರೆಲ್ಲರೂ ಒಂದೇ ಆಗಿ ಕಾಣುತ್ತಿದ್ದರು. ಅವರನ್ನು ಬೇರ್ಪಡಿಸಿ ನೋಡುವದು ಸಾಧ್ಯವೇ ಇರಲಿಲ್ಲ.

ಇದೆಲ್ಲದರಿಂದ ಒಳ್ಳೆಯವನಿಗೆ ಬಹಳ ಗೊಂದಲ ಪ್ರಾರಂಭವಾಗಿಬಿಡುತ್ತಿತ್ತು. ಒಮ್ಮೊಮ್ಮೆ ತಾನು ಮಾತ್ರ ಸತ್ಯವಾದ ಒಳ್ಳೆಯವನು, ಉಳಿದವರೆಲ್ಲರು ತನ್ನ ನೆರಳು, ನಕಲು ಅನ್ನಿಸಿಬಿಡುತ್ತಿತ್ತು. ಇಂತಹ ಗೊಂದಲಗಳು ಕಾಡುವಾಗ, ಒಳ್ಳೆಯವನು, ತನ್ನ ತಾಯಿಯ ಬಳಿ ತನ್ನ ನಂಬುಗೆಯನ್ನು ದೃಢಪಡಿಸಿಕೊಳ್ಳುವುದಕ್ಕೋಸ್ಕರ ಕೇಳಿದರೆ, ಅವರು ನಕ್ಕುಬಿಡುತ್ತಿದ್ದರು. ಹಾಗಾಗಿ ಒಳ್ಳೆಯತನದ ಬಗೆಗೆ ಇರುವ ಒಳ್ಳೆಯವನ ಗೊಂದಲಗಳು ಬೆಳೆಯತೊಡಗಿದವು.



ಒಳ್ಳೆಯವನು ಯಾವಾಗಲೂ ಮುಂದಿನ ಸಾಲಿನಲ್ಲಿಯೇ ಕುಳಿತು ಪಾಠ ಕೇಳುತ್ತಿದ್ದ. ಆದರೆ ಆತ ಉಳಿದ ಹುಡುಗರಿಗಿಂತ ಸ್ವಲ್ಪ ಹೆಚ್ಚಾಗಿಯೆ ಉದ್ದಕ್ಕಿದ್ದುದರಿಂದ ಒಮ್ಮೊಮ್ಮೆ ಗುರುಗಳು ಅವನನ್ನು ಹಿಂದಿನ ಸಾಲಿನಲ್ಲಿ ಕುಳಿತುಕೊಳ್ಳಲು ಆಜ್ಞಾಪಿಸುತ್ತಿದ್ದರು. ಒಳ್ಳೆಯವನಿಗೆ ಆ ಕುರಿತಂತೆ ಸ್ವಲ್ಪ ಬೇಸರವಿದ್ದುದೇನೋ ನಿಜ. ಆದರೆ ಗುರುಗಳ ಮಾತಿಗೆ ಆತ, ಯಾವ ತಕರಾರೂ ಇಲ್ಲದೆ ಹಿಂದಿನ ಸಾಲಿಗೆ ಹೋಗಿ ಕುಳಿತುಕೊಂಡು ಬಿಡುತ್ತಿದ್ದ. ಹುಡುಗಿಯರನ್ನು ಗೌರವದಿಂದ ಕಾಣಬೇಕೆಂದು ಪ್ರತಿ ಪಠ್ಯ ಪುಸ್ತಕದಲ್ಲಿಯೂ ಬರೆದಿರುವದರಿಂದ, ಹಾಗೆಲ್ಲ ಹಿಂದೆದ್ದು ಹೋಗುವಾಗ ಬಹಳ ಪಾಪದವನಾಗಿ ಕಾಣುತ್ತಿದ್ದ. ಅವನ ಆ ವಿಧೇಯತೆಗೆ ಗುರುಗಳು ಮೆಚ್ಚುತ್ತಿರುವಂತೆ ತೋರುತ್ತಿತ್ತು. ಆದರೆ ಏನಾದರೂ ವಿಷಯವನ್ನು ಆತ ಮಾತನಾಡಬೇಕು ಎಂದು ಹೋದರೆ ಗುರುಗಳ ಬಳಿ ಅವನಿಗಾಗಿ ಟೈಮೇ ಇರುತ್ತಿರಲಿಲ್ಲ. ಆದರೂ ಗುರುಗಳು ಸ್ವಲ್ಪ ಅವಿಧೇಯರಾದ, ಚಲ್ಲುಚಲ್ಲಾದ ಹುಡುಗ, ಹುಡುಗಿಯರ ಬಳಿ ತಾಸುಗಟ್ಟಲೆ ಹರಟುವದನ್ನು ನೋಡಿ ಒಳ್ಳೆಯವನ ಗೊಂದಲಗಳು ಮತ್ತಷ್ಟೂ ಹೆಚ್ಚಾಗುತ್ತಿತ್ತು.



ಮುಂದೆ ಕಾಲೇಜಿನಲ್ಲಿಯೂ ಇದು ಹೀಗೆಯೆ ಮುಂದುವರಿಯಿತು. ಬಹುಪಾಲು ದಿನ ಆತ ಕಾಲೇಜಿನ ಲೈಬ್ರರಿಯಲ್ಲಿ ಕುಳಿತುಕೊಂಡಿರುತ್ತಿದ್ದ. ಲಿಯೋ ಟಾಲ್‌ಸ್ಟಾಯ್, ಮಾರ್ಕ್ಸ್, ಜೋಸೆಫ್ ಕಾನ್ರಾಡ್ ಇಂತಹ ಪುಸ್ತಕಗಳು ಅವನಿಗೆ ಹಿಡಿಸುತ್ತಿದ್ದವು. ಆದರೆ ಅವುಗಳನ್ನು ಓದುತ್ತಾ ಹೋದಂತೆ ಆಳದಲ್ಲೆಲ್ಲೋ ಇವೆಲ್ಲವೂ ಹಿಂಸೆಯನ್ನು, ಮತ್ತೊಂದು ರೂಪದಲ್ಲಿ ಪ್ರತಿಪಾದಿಸುತ್ತವೆ ಅನ್ನಿಸುತ್ತಿತ್ತು. ಇಂತಹ ಸಂದಿಗ್ಧದಲ್ಲಿಯೇ 'Under current of violence in great thinkers writing' ಪ್ರಬಂಧ ಬರೆದ. ಅದನ್ನು ಒಂದು ಮುಖ್ಯ ದೈನಿಕಕ್ಕೆ ಕಳುಹಿಸಿದ. ಒಂದು ದಿನ ಅದು ಪ್ರಕಟವೂ ಆಯಿತು.

ಆ ದಿನ, ಒಳ್ಳೆಯವನು ಆ ದೈನಿಕವನ್ನು ಕೈಯಲ್ಲಿ ಹಿಡಿದು, ಕಾಲೇಜಿನ ವರಾಂಡದಲ್ಲಿ ಓಡಾಡಿದ. ಆದರೆ ಯಾರೂ ಅದರ ಬಗ್ಗೆ ಅಷ್ಟು ತಲೆ ಕೆಡಿಸಿಕೊಂಡಂತೆ ಕಾಣಲಿಲ್ಲ. ಅದು ಕಾಲೇಜಿನ ಲೈಬ್ರರಿಯಲ್ಲಿ ಬಹಳ ದಿನ ಇತ್ತು

ಒಂದು ದಿನ, ಆ ಕುರಿತಂತೆ ಪ್ರಿನ್ಸಿಪಾಲರಿಂದ ಕರೆಯೂ ಬಂತು. ಈಗಲಾದರೂ ಪ್ರಿನ್ಸಿಪಾಲರು ಈ ಪ್ರಬಂಧವನ್ನು ಗಣನೆಗೆ ತಂದುಕೊಂಡಿರಬಹುದು, ಶ್ಲಾಘಿಸಬಹುದೆಂದು ಅಂದುಕೊಂಡ ಒಳ್ಳೆಯವನು ಪ್ರಿನ್ಸಿಪಾಲರ ಛೇಂಬರಿನ ಒಳಗಡೆ ಹೋದ.

ಅವನು ಛೇಂಬರಿಗೆ ಹೋದಾಗ, ಪ್ರಿನ್ಸಿಪಾಲರು ಬೇರೆ ಯಾರ ಜೊತೆಯೋ ಹರಟೆಯಲ್ಲಿ ಇದ್ದರು. ಮಧ್ಯ ಮಧ್ಯ ಅವರು ನಗುತ್ತಿದ್ದರು. ಅವರ ಹರಟೆ ಗ್ರೀಕ್ ಪುರಾಣದಲ್ಲಿ ಬರುವ ಹರ್ಕ್ಯುಲಸ್ ಎನ್ನುವ ವ್ಯಕ್ತಿಯ ಕುರಿತಂತೆ ಇದ್ದಂತೆ ಇಸಿತು. ನಂತರ ವಿಷಯ ನಿಧಾನವಾಗಿ, ಪ್ರೈವೇಟ್ ಕಂಪನಿಯಲ್ಲಿ ಕೆಲಸಕ್ಕೆ ಸೇರಿದ ತಮ್ಮ ಹುಡುಗರೆಲ್ಲಾ, ಕಾರು, ವಿಮಾನದಲ್ಲಿ ಓಡಾಡುವ ಬರ ಬಗ್ಗೆ ತಿರುಗಿತು. ದೇಶದಲ್ಲಿ ಆಳವಾಗಿ ಚಿಂತಿಸುವ ತಮ್ಮಂಥ ಬುದ್ಧಿಜೀವಿಗಳಿಗೆ ಯಾವ ಬೆಲೆಯೂ ಇಲ್ಲಾ ಎಂದು ಬೇಸರಪಟ್ಟುಕೊಂಡರು.

ತಾನು ಕೆಮ್ಮಿದರೆ ಅವರ ಮಾತಿನ ಓಘಕ್ಕೆ ಎಲ್ಲಿ ಧಕ್ಕೆ ಬರುತ್ತದೋ ಎಂದು ಉಗುಳು ನುಂಗಿಕೊಂಡು ಬಹಳ ಹೊತ್ತಿನವರೆಗೆ ನಿಂತೇ ಇದ್ದ. ಕೊನೆಗೆ ಪ್ರಿನ್ಸಿಪಾಲರೇ ನೋಡಿ, 'ಬಾ, ಕುಳಿತುಕೋ' ಅಂದರು. ಒಳ್ಳೆಯವನು ಹೋಗಿ ಕುಳಿತುಕೊಂಡ. ನಿಜವಾಗಿಯೂ ಪ್ರಿನ್ಸಿಪಾಲರಿಗೆ ಈತನನ್ನು ಯಾಕೆ ಬರಹೇಳಿದೆ ಎನ್ನುವುದು ಮರೆತುಹೋಗಿತ್ತು. ಹೀಗೆ ಬಂದು ಆತ ಬಾಗಿಲಲ್ಲಿ ಬಹಳ ಹೊತ್ತಿನವರೆಗೆ ಅಲುಗಾಡದೆ ನಿಂತಿದ್ದನ್ನು ನೋಡಿ, ತಮ್ಮ ವಿದ್ಯಾರ್ಥಿಯೇ ಇರಬೇಕು ಅನ್ನಿಸಿತು. ಆದರೆ ನೆನಪು ಹತ್ತಲೊಲ್ಲದು. ಏನು ಮಾಡಿದರೂ, ಯಾವ ಕ್ಲಾಸಿನಲ್ಲಿ ಈತನನ್ನು ತಾನು ಕಂಡಿರಬಹುದು ಎನ್ನುವದು ನೆನಪಿಗೆ ಬರಲೊಲ್ಲದು. ಪ್ರಿನ್ಸಿಪಾಲರು, ಇವನೇ ಮಾತನಾಡಲಿ ಎಂದು ಸುಮ್ಮನೆ ಉಳಿದರು.

ಒಳ್ಳೆಯವನು, ಅವರ ಮುಂದೆ ಕುಳಿತೇ ಇದ್ದ. ಫ್ಯೂನ್ ಗಣಪ ಬಂದು 'ಪ್ರಿನ್ಸಿಪಾಲರು ಕರೆಯುತ್ತಿದ್ದಾರೆ, ಬಹುಶಃ ನಿನ್ನ ಲೇಖನ ಕುರಿತಂತೆ ಎರಡು ಮಾತನಾಡಲಿಕ್ಕಿರಬೇಕು' ಎಂದು ನಗೆಯಾಡಿಹೋಗಿದ್ದ. ಆದರೆ ಪ್ರಿನ್ಸಿಪಾಲರು ಯಾವ ಮಾತನ್ನೂ ಆಡದೆ ಸುಮ್ಮನೆ ಕುಳಿತೇ ಇದ್ದರು. ಪ್ರಿನ್ಸಿಪಾಲರು ಯೋಚಿಸುತ್ತಿರಬೇಕೆಂದು ಒಳ್ಳೆಯವನು ಸುಮ್ಮನೆ ಇದ್ದ. ತುಂಬಾ ಹೊತ್ತು ಅದು ಹೀಗೆ ನಡೆಯಿತು. ಮಧ್ಯಾಹ್ನದ ಹೊತ್ತಾದುದರಿಂದ ಪ್ರಿನ್ಸಿಪಾಲರು ಸ್ವಲ್ಪ ಹಾಗೇ ಕಣ್ಣು ಮುಚ್ಚಿದರು. ನಂತರ ಅವರು ನಿಧಾನವಾಗಿ ಗೊರೆಯತೊಡಗಿದರು. ನಂತರ ಸ್ವಲ್ಪ ಜೋರಾಗಿಯೇ ಗೊರೆಯತೊಡಗಿದರು. ಸ್ವಲ್ಪಹೊತ್ತಿನ ನಂತರ ಅವರಿಗೆ ಉಸಿರು ಸಿಕ್ಕಿಕೊಂಡಂತಾಗಿ ಎಚ್ಚರಾಯಿತು. ನೋಡಿದರೆ, ಒಳ್ಳೆಯವನು ಮುಂದೆ ಕುಳಿತೇ ಇದ್ದ.

ಪ್ರಿನ್ಸಿಪಾಲರಿಗೆ ಇವನ್ಯಾಕೆ ಇಲ್ಲಿ ಬಂದು ಕುಳಿತಿದ್ದಾನೆ ಎಂದು ಕೂಡಾ ಅರ್ಥವಾಗುವಂತಿರಲಿಲ್ಲ. ಸಾಮಾನ್ಯವಾಗಿ ಏನಾದರೂ ಹುಡುಗರು ತಪ್ಪುಮಾಡಿ, ಅಂತಹ ತಪ್ಪುಗಳು ಲೆಕ್ಚರರ ಟೇಬಲ್ಲಿನಲ್ಲಿ ಪರಿಹಾರ ಕಾಣದಿದ್ದರೆ ಮಾತ್ರ ವಿದ್ಯಾರ್ಥಿಗಳು ಪ್ರಿನ್ಸಿಪಾಲರ ಛೇಂಬರಿಗೆ ಬರುತ್ತಿದ್ದರು. ಅಂತಹದ್ದೆ ಇದೂ ಒಂದು ಕೇಸಾಗಿರಬೇಕೆಂಬ ಗುಮಾನಿಯಲ್ಲಿ ಅವರು ಬಾಯಿಗೆ ಬಂದಂತೆ ಬಯ್ಯತೊಡಗಿದರು. ನಂತರ ಸುಸ್ತಾಗಿ ''ಕ್ಲಾಸಿನಲ್ಲಿ ಗಲಾಟೆ ಮಾಡದೆ ಓದಿಕೊಳ್ಳಬೇಕು, ನೀನಿನ್ನು ಹೋಗಬಹುದು'' ಅಂದರು.

ಪಾಪ, ಒಳ್ಳೆಯವನಿಗೆ ಇದೊಂದೂ ಅರ್ಥವಾಗಲಿಲ್ಲ. ಬಹುಶಃ ಕೊನೆಯ ಬೆಂಚಿನಲ್ಲಿ ಕುಳಿತು ತನ್ನನ್ನು ಯಾವತ್ತೂ ಛೇಡಿಸುವ ಗಾಯತ್ರಿಯದೆ ಈ ಕೆಲಸ ಎಂದೆನಿಸತೊಡಗಿತು. ಸಾಲದುದಕ್ಕೆ ಗಾಯತ್ರಿ, ಅಲ್ಲಿಯೇ ವರಾಂಡದಲ್ಲಿ ಇದ್ದವಳು, 'ಏನು, ತಮ್ಮ ಸವಾರಿ ಪ್ರಿನ್ಸಿಪಾಲರ ಛೆಂಬರಿನ ಕಡೆ' ಎಂದು ನಕ್ಕಿದ್ದು ಕೂಡಾ ಇದೇ

ಕಾರಣಕ್ಕಾಗಿ ಇರಬೇಕೆಂದು ಒಳ್ಳೆಯವನಿಗೆ ಅನ್ನಿಸ ತೊಡಗಿತು. 'ಅಲ್ಲಾ ಗಾಯತ್ರಿ, ನೀನು ಇಷ್ಟು ಚಂದದ ಹುಡುಗಿ, ಹೀಗೆ ಮಾಡೋದಾ' ಎಂದು ಒಡತೊಡಗಿದ. ಎಷ್ಟು ಒಳ್ಳೆಯ ಹುಡುಗಿ ಎಂದು ಹೇಳಲಿಕ್ಕೆ ಹೋಗಿ, ಎಷ್ಟು ಚಂದದ ಹುಡುಗಿ ಎಂದೆನಲ್ಲಾ ಎನ್ನುವ ನಾಚಿಕೆಯು ಅವನೊಳಗೆ ಸೇರಿಕೊಂಡು, ಅವನನ್ನು ಹಾಗೆ ಅಲ್ಲಿಂದ ಓಡುವಂತೆ ಮಾಡಿತ್ತು.

ಪಾಪ, ಉದ್ದಕ್ಕೆ ತೆಳ್ಳಗಿದ್ದ ಆಕೆಯನ್ನು ಕ್ಲಾಸಿನ ಹುಡುಗರೆಲ್ಲಾ ಏನೇನೋ ಹೇಳಿದ್ದರು. ಆದರೆ ಯಾರೂ ಆಕೆಗೆ ಚಂದದ ಹುಡುಗಿ ಎಂದಿರಲಿಲ್ಲ. ಗಾಯತ್ರಿ ಒಳ್ಳೆಯವನು ಹೋಗುತ್ತಿರುವದನ್ನೇ ನೋಡುತ್ತ ಉಳಿದಳು. ಆ ದಿನದ ನಂತರದ ದಿನಗಳಲ್ಲಿ, ಒಳ್ಳೆಯವನ ಬಗ್ಗೆ ಇದ್ದ ಕುಚೇಷ್ಟೆ ಭಾವನೆಗಳ ಜೊತೆ, ಇನ್ನೂ ಒಂದು ಯಾವುದೋ ಹೇಳಲಾರದ, ಮಾತಿಗೆ ನಿಲುಕದ ಭಾವನೆಯೊಂದು ಗಾಯತ್ರಿಯನ್ನು ಆವರಿಸಿ ಕೊಂಡಿತು. ಅದರ ಜೊತೆಯಲ್ಲಿಯೆ ಒಳ್ಳೆಯ ವನನ್ನು ರೇಗಿಸುವದು, ಕಾಡಿಸವದು ಕೂಡಾ ಹೆಚ್ಚಾಯಿತು. ಅದೇ ದಿನಗಳಲ್ಲಿಯೇ ಇರಬೇಕು, ಅಥವಾ ಇದೇ ಕಾರಣಕ್ಕಾಗಿಯೇ ಇರಬೇಕು, ಒಳ್ಳೆಯವನು ಧರಿಸುವ ಬಟ್ಟೆಗಳ ಶೈಲಿ ಸ್ವಲ್ಪ ಬದಲಾಯಿತು. ಯಾವತ್ತೂ ತಲೆಗೆ ಎಣ್ಣೆ ಹಾಕಿ ಬಾಚಿಕೊಂಡು, ಕಾಲೇಜಿಗೆ ಬರುತ್ತಿದ್ದ ಒಳ್ಳೆಯ ವನು, ಗಾಯತ್ರಿ 'ಅದು ನಿನಗೆ ಚೆನ್ನಾಗಿ ಕಾಣು ವದಿಲ್ಲಾ' ಅಂದಿದ್ದರಿಂದ ತಲೆಗೆ ಎಣ್ಣೆ ಹಾಕುವ ದನ್ನು ನಿಲ್ಲಿಸಿದ. ಇವೆರಡು ಸಣ್ಣ ಪುಟ್ಟ ವ್ಯತ್ಯಾಸ ಗಳನ್ನು ಬಿಟ್ಟರೆ ಉಳಿದಂತೆ ಒಳ್ಳೆಯವನಲ್ಲಿ ಯಾವ ಥರದ ಬದಲಾವಣೆಯೂ ಆಗಲಿಲ್ಲ.

ಗಾಯತ್ರಿ ಮತ್ತೆ ಅವನಿಗೆ ಛೇಡಿಸುವದು ಹೆಚ್ಚಾಯಿತು. ಆದರೆ ಮೊದಲಿನಂತೆ ಚೇಷ್ಟೆಯ ಒಳಗೆ ವ್ಯಂಗ್ಯವಿರುತ್ತಿರುತ್ತಿರಲಿಲ್ಲ. ಅವನಿಗಾಗಿಯೆ ಎನ್ನುವಂತೆ ಆಕೆ ಬುತ್ತಿಯನ್ನು ತರುತ್ತಿದ್ದಳು. ಅವರಿಬ್ಬರೂ ಆ ತಿಂಡಿಯನ್ನು ಕಾಲೇಜಿನಿಂದ ಸ್ವಲ್ಪ ದೂರದಲ್ಲಿಯೇ ಇದ್ದ ಹೊಳೆಯೊಂದ ದಡದ ಮೇಲೆ ಕುಳಿತು ತಿನ್ನುತ್ತಿದ್ದರು. ಒಮ್ಮೊಮ್ಮೆ ಹಾಗೆ ಕುಳಿತಾಗ, ಗಾಯತ್ರಿ, ಬೇಕೆಂದೆ ತನ ತೊಡೆಗೆ ತೊಡೆ ತಾಗಿಸುತ್ತಾಳೆಂದು ಒಳ್ಳೆಯವನಿಗೆ ಅನ್ನಿಸುತ್ತಿತ್ತು. ಒಮ್ಮೊಮ್ಮೆ ಇದೆಲ್ಲ ತನ್ನ ಕೆಟ್ಟ ಯೋಚನೆಯೆಂದು ಬೇಸರವಾಗುತ್ತಿತ್ತು. ಆಗೆಲ್ಲ ಆತ ಮನೆಯ ಒಡೆದ ಸೂರಿನಿಂದ ನಕ್ಷತ್ರವನ ಬಹಳ ಹೊತ್ತು ನೋಡುತ್ತಾ, ಮಲಗಿಯೆ ಇರುತ್ತಿದ್ದ. ನಂತರ ನಕ್ಷತ್ರಗಳು ಅವನನ ಮಲಗಿಸುತ್ತಿದ್ದವು. ಆದರೆ ಹಗಲೊಂದ ಅವನನ್ನು ಕಡುವ್ಯಾಮೋಹಿಯನ್ನಾಗಿಸುತ್ತಿತ್ತು ಕಾಲೇಜಿಗೆ ರಜೆ ಇದ್ದರೂ ಕೂಡಾ, ಗಾಯತ್ರಿ ಯನ್ನು ನೋಡುವ ಒಂದೇ ಒಂದು ಆಸೆ ಹೊತ್ತ ಆತ ಕಾಲೇಜಿನವರೆಗೆ ಬಂದು ಹೋಗುತ್ತಿದ್ದ ಇವನ ಪಡಿಪಾಟಲು ಹೆಚ್ಚು ದಿನ ಗುಟ್ಟಾ ಉಳಿಯಲಿಲ್ಲ.

ಒಂದು ದಿನ ಅವನ ಹೆಸರಿನ ಜೊ ಗಾಯತ್ರಿಯ ಹೆಸರನ್ನೂ ಸೇರಿಸಿ 'ಒಳ್ಳೆಯವ ಮತ್ತು ಗಾಯತ್ರಿ, ಮಾಡುವುದೇನು ಕೂ ಸಿನೇಮಾ ಸ್ಕ್ರೋಪಲ್ಲಿ ನೋಡಿ' ಎಂ ಬರೆದಿತ್ತು. ಒಳ್ಳೆಯವನು ಪಾಪ, ನೀರು ಹಾಕಿ ಅಕ್ಷರಗಳನ್ನು ತೊಳೆದು ಬಂದ. ಆ ದಿನ ಗಾಯ ಕಾಲೇಜಿಗೆ ಬರದಿದ್ದುದರಿಂದ ಎಷ್ಟು ಒಳ್ಳೆ ದಾಯಿತೆಂದು ಖುಷಿಪಟ್ಟ. ಗಾಯತ್ರಿ ಕಾಲೇಜಿ ಬರದಿದ್ದುದರಿಂದ ಮೊಟ್ಟ ಮೊದಲ ಬಾರಿ ಆ ಖುಷಿಗೊಂಡಿದ್ದ. ಆದರೆ ಮರುದಿನ ಮತ್ತೆ ಅ ಬರಹ. ಸಾಲದುದಕ್ಕೆ ಎಲ್ಲೆಲ್ಲ ಖಾಲಿ ಜಾ ಸಿಗುತ್ತದೆಯೋ, ಅಲ್ಲೆಲ್ಲಾ ಆ ಬರಹ ಕಾಣ ಕೊಂಡಿತು. ಕೊನೆಗೆ ಕಕ್ಕಸ್ಸು ರೂಂನಲ್ಲಿ ಕೂಡ ಅದು ಗಾಯತ್ರಿಯ ಕಣ್ಣಿಗೂ ಬಿತ್ತು. ಆ ದಿನವಿ ಒಳ್ಳೆಯವನು ಗಾಯತ್ರಿಯ ಕಣ್ಣು ತಪ್ಪಿಸಿ ಓಡಾ ಕೊಂಡಿದ್ದ.

ಆದರೆ ಗಾಯತ್ರಿಯೇ ಆತನನ್ನು ಹುಡು ಕೊಂಡು ಬಂದಳು. ಒಳ್ಳೆಯವನಿಗೆ ಅವಳ ಕಣ್ಣ



ಕಣ್ಣಟ್ಟು ನೋಡುವದು ಸ್ವಲ್ಪ ಕಷ್ಟ ಅನ್ನಿಸಿತು. ಹಾಗೆಯೇ ನೋಡದೆ ಉಳಿಯಲಾರೆ ಎಂದು ಕೂಡಾ ಅನ್ನಿಸಿತು. ನೋಡುವದೋ, ಬಿಡುವದೋ ಸಂದಿಗ್ಧದಲ್ಲಿಯೇ ಸ್ವಲ್ಪ ಹೊತ್ತು ಕಳೆಯಿತು. ಕೊನೆಗೆ ಅವರು ಎಂದಿನಂತೆಯೇ ಮಾತಿಲ್ಲದೆ ನದಿಯ ತಟವನ್ನು ಸೇರಿದರು. ಗಾಯತ್ರಿ ಮೌನವಾಗಿಯೇ ಅವನಿಗೆ ಅನ್ನದ ತುತ್ತೊಂದು ಕೊಟ್ಟಳು. ಅವಳು ಕೊಡುವ ರೀತಿಗೆ, ಒಂದು ಮುಗುಳ್ನಗೆ ಒಳ್ಳೆಯವನ ಮುಖದ ಮೇಲೆ ಒಡೆದುಕೊಂಡಿತು. ಅವನ ಮುಗುಳ್ನಗು ನೋಡಿದ್ದೇ ಗಾಯತ್ರಿ ಮತ್ತೊಂದಿಷ್ಟು ಖುಷಿಗೊಂಡಳು. ಇನ್ನೇನು, ಊಟ ಮುಗಿಸಿ, ಮಾತೇ ಇಲ್ಲದೆ ಅಲ್ಲಿಂದ ಎದ್ದು ನಡೆದುಬಿಡಬೇಕು ಅಂದುಕೊಂಡೊಡನೆಯೆ ಗಾಯತ್ರಿ ಎದ್ದು ನಿಂತವಳೇ, ಒಳ್ಳೆಯವನನ್ನು ತಬ್ಬಿ, ಮುತ್ತಿಕ್ಕಿ, ಅಲ್ಲಿ ನಿಲ್ಲದೆಯೆ ಭರಭರನೆ ನಡೆದುಬಿಟ್ಟಳು.

ಒಳ್ಳೆಯವನು ಗಾಯತ್ರಿಯಿಂದ ಇದನ್ನು ನಿರೀಕ್ಷಿಸಿಯೇ ಇರದಿದ್ದುದರಿಂದ ಅವನೊಳಗೆ ಗೊಂದಲಗಳು ಮತ್ತಷ್ಟೂ ಹೆಚ್ಚಿತು. ಅವನಾಗಲೆ ಜಗತ್ತಿನ ಶ್ರೇಷ್ಠ ಮಾನಸಿಕ ತಜ್ಞರು ಬರೆದ ಎಲ್ಲಾ ಪುಸ್ತಕಗಳನ್ನು ಓದಿಕೊಂಡಿದ್ದ. ಎಲ್ಲಿಯೋ ಆಳದಲ್ಲಿ, ಮನುಷ್ಯರ ವರ್ತನೆಗಳನ್ನು ಊಹಿಸಬಲ್ಲೆ ಅಂದುಕೊಳ್ಳುತ್ತಿದ್ದ. ಆದರೆ ಮರುಕ್ಷಣ, ಅದರ ವಿಫಲತೆಯ ಬಗೆಗೆ ಖೇದಗೊಳ್ಳುತ್ತಿದ್ದ. ಆಗಾಗ ತನ್ನ ಕನಸಿನಲ್ಲಿ ಗಾಯತ್ರಿ ಬರುವದು ತಾಯಿಯ ಬಗೆಗಿರುವ ತನ್ನ ವ್ಯಾಮೋಹದಿಂದಲೆ ಎಂದುಕೊಂಡಿದ್ದ. ಕನಸಿನಲ್ಲಿಯೂ ಕೂಡಾ, ಗಾಯತ್ರಿ ಅವನ ಕೈ ಹಿಡಿದು ನದಿಯ ತಟದಲ್ಲಿ ಓಡಾಡಿದ್ದಳೆ ಹೊರತು, ಯಾವತ್ತೂ ತಬ್ಬಿ, ಮುತ್ತು ಕೊಟ್ಟಿರಲಿಲ್ಲ. ಗಾಯತ್ರಿ ಮುತ್ತಿಕ್ಕಿ ಓಡಿಹೋದ ಬಹಳ ಹೊತ್ತಿನವರೆಗೆ ಆತ, ಆ ನದಿಯ ತಟದಲ್ಲಿ ಓಡಾಡಿಕೊಂಡಿದ್ದ. ನದಿಯೊಳಗೆ ಆಗಾಗ ಪುಟಕ್ಕನೆ ತಲೆಹಾಕಿ ಮರೆಯಾಗುವ ದೊಡ್ಡ ತಲೆಯ ಮೀನುಗಳು ಬಹಳ ಖುಷಿಯಲ್ಲಿಯೇ ಇದ್ದಂತೆ ಅವನಿಗೆ ತೋರಿತು. ಮೇಲೆ ನೋಡಿದರೆ, ಬೆಳ್ಳಕ್ಕಿಯ ದಂಡೊಂದು, ಕತ್ತಲು ತುಂಬುತ್ತಿರುವ ಬಾನಂಚಿನಿಂದ ಗೂಡಿನ ಕಡೆಗೆ ಹೊರಟಿದ್ದವು. ಒಳ್ಳೆಯವನು, 'ಬೆಳ್ಳಕ್ಕಿ ಬೆಳ್ಳಕ್ಕಿ ನಿನ್ನ ಗಂಡ ಬಂದ, ಪಟ್ಟೆ ಸೀರೆ ತಂದಾ, ನಂಗೊಂದು ಉಂಗುರ ಕೊಡ್ ಕೊಡ್' ಎಂದು ಒಂದಿಷ್ಟು ಹೊತ್ತು ಆಕಾಶ ನೋಡಿ, ಹಾಡಿದ. ಮಧ್ಯದಲ್ಲಿ ನಿನ್ನ ಗಂಡ ಎನ್ನುವಲ್ಲಿ ನಿನ್ನ ಹೆಂಡ್ತಿ ಬಂದ್ಲು ಎಂದು ಕೂಡಾ ಸೇರಿಸಿದ. ಹಾಗೆ ಹಾಡಿ, ಹಾಡಿ ತನ್ನ ಕೈಯ ಉಗುರುಗಳನ್ನು ನೋಡಿಕೊಂಡ. ಉಗುರಿನ ಮೇಲೆ ಒಂದೆರಡು ಬೆಳ್ಳನೆಯ ಉಂಗುರ ಮೂಡಿದ್ದ ಕಂಡು ಮತ್ತಷ್ಟು ಖುಷಿಗೊಂಡ.

ಸಂಜೆ ಮನೆ ಸೇರಿದಾಗ, 'ಇಷ್ಟೊತ್ತು ಯಾಕೋ, ಎಲ್ಲಿ ಹೋಗಿದ್ದಿ, ಯಾಕೋ ತಡ' ಅಂದರು ಅಮ್ಮ. ಒಳ್ಳೆಯವನು ಪೂರ್ಣ ಸುಳ್ಳು

ಹೇಳಲಾಗದೆ, 'ಇಲ್ಲಿಯೇ ನದಿಯ ತಟಕ್ಕೆ ಹೋಗಿದ್ದೆವಮ್ಮಾ' ಎಂದು ಅರ್ಧಸತ್ಯ ನುಡಿದ. ಹಾಗೆ ನುಡಿಯುವಾಗ ಅವನು ನಾಚಿಕೊಂಡಿದ್ದು ಅವನಮ್ಮನ ಕಣ್ಣಿಗೆ ಮಾತ್ರ ಕಾಣಿಸಲಿಲ್ಲ.

ಆ ದಿನ, ಮೊಟ್ಟ ಮೊದಲ ಬಾರಿಗೆ, ಒಳ್ಳೆಯವನು ತನ್ನ ಹಾಸಿಗೆಯ ಮೇಲೆ ಮಲಗಿ, ಬಹಳ ಹೊತ್ತಿನವರೆಗೆ ಆಕಾಶವನ್ನು ನೋಡುತ್ತಿದ್ದ. ಓಡುವ ನಕ್ಷತ್ರವೊಂದು ಒಂದು ದಿಕ್ಕಿನಿಂದ ಮತ್ತೊಂದು ದಿಕ್ಕಿಗೆ ಚಲಿಸುತ್ತಲಿತ್ತು. ಅವು ಉಲ್ಕೆಗಳು ಎಂದು ವಿಜ್ಞಾನ ಪಾಠದಲ್ಲಿ ಓದಿರುವದೆಲ್ಲಾ ಸುಳ್ಳು ಎಂದು ಅನ್ನಿಸುತ್ತಿತ್ತು. ಆಕಾಶದಲ್ಲಿ ಭಗೀರಥನ ಕರೆಗೆ ಓಗೊಟ್ಟು ಬಂದ ಗಂಗೆಯ ದಾರಿಗಾಗಿ ಆತ ಹುಡುಕುತ್ತಲಿದ್ದ. ಗಾಯತ್ರಿ ಮುತ್ತಿಕ್ಕಿದಾಗ ಉಂಟಾದ ತುಟಿಯ ತೇವವಿನ್ನೂ ಆರಿರಲಿಲ್ಲ. ರಾತ್ರಿಯೊಂದು ಹೆಣ್ಣಾಗಿ ಮೈದಾಳಿದಂತೆ ಅಲ್ಲಿ ತುಂಬಿಕೊಂಡಿತ್ತು.

ನಂತರದ ದಿನಗಳಲ್ಲಿ ಅವರು ನದಿಯ ಗುಂಟ ಕೈ ಕೈ ಹಿಡಿದು ನಡೆಯುತ್ತಿದ್ದರು. ಯಾವತ್ತೂ ಗಾಯತ್ರಿಯೆ ಅವನ ಕೈ ಹಿಡಿದಿರುತ್ತಿದ್ದಳು. ಒಳ್ಳೆಯವನು ತಾನು ಓದಿದ ಪುಸ್ತಕಗಳ ಬಗ್ಗೆ, ಸಾಕಷ್ಟು ದೀರ್ಘವಾಗಿಯೇ ವಿವರಿಸುತ್ತಿದ್ದ. ಹಾಗೆ ವಿವರಿಸುತ್ತಾ, ಕೆಲವೊಮ್ಮೆ ಪುಸ್ತಕದಲ್ಲಿ ಇರದಿದ್ದುದನ್ನೆಲ್ಲ ಸೇರಿಸಿ ಹೇಳಿಬಿಡುತ್ತಿದ್ದ. ಪ್ರತಿ ದಿನ ಹಾಗೆ ಮಾತನಾಡಿದಾಗಲೆಲ್ಲ, ಅಂತಹ ಶ್ರೇಷ್ಠ ಚಿಂತಕರ ಹೆಸರಿನಲ್ಲಿ ತಾನು ಸುಳ್ಳು ಹೇಳಿದೆ ಎಂದು ಪರಿತಪಿಸುತ್ತಿದ್ದ. ಇತ್ತೀಚೆಗೆ ಅವನಿಗೆ, ಯಾವುದನ್ನೂ ಓದಿದರೂ, ಅವು ಎಷ್ಟು ಪ್ರೀತಿ ತುಂಬಿದವುಗಳಾಗಿವೆ ಎನ್ನಿಸುತ್ತಿತ್ತು. ಅದೇ ಗುಂಗಿನಲ್ಲಿ ಆತ ಒಂದು ಪ್ರಬಂಧ ಬರೆದ 'Undercurrents of love in great thinkers' writing'. ಅದು, ಅದರಲ್ಲೇನೂ ಹೊಸತನವಿಲ್ಲವೆಂದು ಪ್ರಕಟಗೊಳ್ಳದೆ ತಿರುಗಿ ಬಂದಿತು.

ಈ ದಿನಗಳಲ್ಲಿ ಗಾಯತ್ರಿಯ ವೇಷಭೂಷಣ
ಗಳಲ್ಲಿ ಆಗುತ್ತಿರುವ ಬದಲಾವಣೆಗಳು ಅವ
ಕಣ್ಣಿಗೆ ಬಿದ್ದಿತು. ತನ್ನ ದೇಹಕ್ಕೆ ಸ್ವಲ್ಪ ಬಿಗಿಯಾ
ಉಡುಪುಗಳನ್ನೇ ಅವಳು ಧರಿಸುತ್ತಾ
ಅನ್ನಿಸುತ್ತಿತ್ತು. ಅವಳ ಸ್ತನಗಳು ಕೂಡ
ಮೊದಲಿಗಿಂತ ಸ್ವಲ್ಪ ದೊಡ್ಡದಾಗಿಯೇ ಕಾಣ
ತ್ತಿದೆ ಎಂದೂ ಕೂಡಾ ಅನ್ನಿಸುತ್ತಿತ್ತು. ಸಾಲದುದ
ನದಿಯ ತಟದಲ್ಲಿ ಸ್ವಲ್ಪ ಕತ್ತಲಾವರಿಸಿ
ಗಾಯತ್ರಿ ಅವನಿಗೆ ತೀರಾ ಒರಗಿನಿಂ
ನಡೆಯುತ್ತಿದ್ದಳು. ಕೆಲವೊಮ್ಮೆ ಅವನ ಭುಜಗ
ಅವಳ ದುಂಡು ಮೊಲೆಗಳು ಸವರಿ, ಆತ
ಹೇಗೆ ಹೇಗೋ ಆಗುತ್ತಿತ್ತು. ತಿರುಗಿ ಮನ
ಬಂದಾಗ, ಅವನಮ್ಮ ಮೊದಲಿನಂತೆ ಏನನ್ನ
ಕೇಳುತ್ತಿರಲಿಲ್ಲ. ಕಾಲೇಜು ತುಂಬಿದ ಸುದ್ದಿ ಅ
ಕಿವಿಗಳಿಗೂ ಬಿದ್ದಿತ್ತು. ಆದರೆ ತಾವೆಲ್ಲಿಯಾದರ
ಕೇಳಿ, ಮಗ ಹೌದು ಅಂದುಬಿಟ್ಟರೆ ಎಂ
ಕೊಂಡು ಸುಮ್ಮನಾಗಿಬಿಟ್ಟಿದ್ದರು. ಯಾರಾದರ
ಹರಟೆಗೆ ಬಂದ ಹೆಂಗಸರು, ಹರಟೆಯ ಮ
ದಲ್ಲಿ ಈ ಸುದ್ದಿ ಎತ್ತಿದರೆ, 'ಅಯ್ಯೋ ಇದೆಲ್ಲ
ವಯಸ್ಸಿನಲ್ಲಿ ಇದ್ದದ್ದೇ ಬಿಡಿ, ನಾಲ್ಕು ದಿನ
ಅವರಷ್ಟಕ್ಕೆ ಅವರನ್ನು ಬಿಟ್ಟರೆ ಸರಿಹೋಗುತ್ತ
ಎನ್ನುತ್ತಿದ್ದರು.

ಆದರೂ ಒಮ್ಮೊಮ್ಮೆ, ಇತ್ತೀಚೆಗೆ ನೀ
ಸರಿಯಾಗಿ ಊಟ ಮಾಡುತ್ತಿಲ್ಲ, ನಿದ್ದೆ ಮಾ
ತ್ತಿಲ್ಲ, ಓದುತ್ತಿಲ್ಲ ಎಂದೆಲ್ಲ ಹೇಳಿ ಕಿರಿಕಿರಿ ಮಾ
ತ್ತಿದ್ದರು. ಆಗೆಲ್ಲ ಏನನ್ನೂ ಒಳ್ಳೆಯವನು ನ
ಯುತ್ತಿರಲಿಲ್ಲ. ತನ್ನ ಪಾಡಿಗೆ ತಾನು ಮನೆ
ಮಹಡಿ ಹತ್ತಿ, ಆಕಾಶಕ್ಕೆ ಮುಖಮಾಡಿ ಕುಳಿ
ಬಿಡುತ್ತಿದ್ದ. ಮಧ್ಯ ಮಧ್ಯ ತನ್ನ ಉಗುರಿನ ಮ
ಬಿದ್ದಿರುವ, ಬೆಳ್ಳಕ್ಕಿ ಕೊಟ್ಟ ಉಂಗುರಕ
ಹುಡುಕುತ್ತಿದ್ದ.

ಗಾಯತ್ರಿ ಒಂದು ದಿನ ಸ್ವಲ್ಪ ಹೆಚ್ಚು ಖು
ಯಲ್ಲಿ ಇದ್ದಂತೆ ಕಂಡಿತು. ಆ ಸಮಯದ
ನದಿಯಗುಂಟ ಇವರಿಬ್ಬರನ್ನು ಬಿಟ್ಟರೆ ಬೆ
ಯಾರೂ ಇರಲಿಲ್ಲ. ನದಿಯ ಆ ಭಾಗದ



ಸೊಳ್ಳೆಗಳ ಕಾಟ ವಿಪರೀತವಾದುದರಿಂದ ಸಂಜೆಯಾದ ಮೇಲೆ ಜನ ಓಡಾಡುತ್ತಿರಲಿಲ್ಲ. ಅದು ಇದು ಎಂದು ಕೈ ಹಿಡಿದು ಮಾತನಾಡುತ್ತಿರುವ ಗಾಯತ್ರಿಯ ದೇಹ ಹೆಚ್ಚು ಹೆಚ್ಚು ಬಿಸಿಯಾಗುತ್ತಿದೆ ಎಂದು ಒಳ್ಳೆಯವನಿಗೆ ಅನ್ನಿಸಿತು. ಪಾಪ, ಜ್ವರ ಬಂದಿದೆಯೇನೋ ಎಂದು ಅವಳ ಕೆನ್ನೆ ಮುಟ್ಟಿದ.

ಅಷ್ಟಕ್ಕೇ ಗಾಯತ್ರಿ ಅವನ ಕುತ್ತಿಗೆಗೆ ಜೋತು ಬಿದ್ದಳು. ಅವಳ ಎದೆ ಅವನ ಎದೆಯ ತುಂಬಾ ಆವರಿಸಿಕೊಂಡಿತ್ತು. ಆಕೆ ಹುಚ್ಚು ಹಿಡಿದವಳಂತೆ ಅವನ ಇಡಿಯ ದೇಹವನ್ನು ಚುಂಬಿಸುತ್ತಿದ್ದಳು. ಒಂದು ಹಂತದಲ್ಲಿ, ಒಳ್ಳೆಯವನ ಕೈ ತೆಗೆದು, ತನ್ನ ಎದೆಯ ಭಾಗದಲ್ಲಿ ಇಟ್ಟುಕೊಂಡಳು. ಎಲ್ಲ ಸಿನೇಮಾದ ನಾಯಕಿಯರು ಮಾಡುವಂತೆ, ಅವನ ತಲೆಯನ್ನು ತನ್ನ ಎದೆಯ ಮೇಲೆ ಎಳೆದುಕೊಂಡಳು. ಅವಳು ತಲೆಯನ್ನು ಒತ್ತಿ ಹಿಡಿದುಕೊಂಡಿರುವವರೆಗೂ, ಒಳ್ಳೆಯವನು ತನ್ನ ತಲೆಯನ್ನು ಅಲ್ಲಿಯೇ ಇಟ್ಟುಕೊಂಡಿದ್ದ. ಎದೆಯ ಮೇಲಿಂದ ಕೈ ತೆಗೆಯಬೇಕೆನ್ನಿಸಿದರೂ, ಯಾಕೋ ತೆಗೆಯಲಾಗದಂತೆ ಸುಮ್ಮನೆ ಇದ್ದ. ಈ ದಿನದ ನಂತರದಲ್ಲಿ ಈ ಕ್ರಿಯೆಗಳು ಸಾಮಾನ್ಯವಾಗಿಬಿಟ್ಟವು. ಒಳ್ಳೆಯವನು ಮನೆ ಸೇರುವದು ಮತ್ತೂ ಮತ್ತೂ ತಡವಾಗತೊಡಗಿತು. ಜೊತೆಗೆ ತಾಯಿಯ ಕಿರಿಕಿರಿ ಕೂಡಾ. ಇದೆಲ್ಲಾ ಹೀಗೆಯೇ ನಡೆಯುತ್ತಿದ್ದರೆ ಚನ್ನಾಗಿರುತ್ತಿತ್ತೇನೋ. ಆದರೆ ಒಂದು ದಿನ ಗಾಯತ್ರಿ ಎಷ್ಟು ಉದ್ವಿಗ್ನಗೊಂಡಿದ್ದಳೆಂದರೆ ಅವಳು ಒಳ್ಳೆಯವನನ್ನು ಬಿಡುವಂತೆ ಕಾಣಲಿಲ್ಲ. ಇದ್ದಕ್ಕಿದ್ದಂತೆ ಆಕೆ ತನ್ನೆಲ್ಲಾ ಬಟ್ಟೆ ಬಿಚ್ಚಿ ನಿಂತುಬಿಟ್ಟಳು. ಸಾಲದುದಕ್ಕೆ ಒಳ್ಳೆಯವನ ಕೈ ಹಿಡಿದು ಕರೆಯತೊಡಗಿದಳು.

ಒಳ್ಳೆಯವನು ಆವರೆಗೆ ಒಂದು ನಗ್ನ ದೇಹವನ್ನು ನೋಡಿಯೇ ಇರಲಿಲ್ಲ. ಅವನು ಬಿಟ್ಟ ಕಣ್ಣನ್ನು ಬಿಟ್ಟುಕೊಂಡು ನೋಡುತ್ತಲೇ ಉಳಿದ. ಅವನಿಗೆ ಏನೆಲ್ಲ ಮಾಡಬೇಕೆನ್ನಿಸುತ್ತಿತ್ತು. ಆದರೆ ಸಾಧ್ಯವೇ ಆಗುತ್ತಿರಲಿಲ್ಲ. ಗಾಯತ್ರಿ, ಮಲಗು ಎಂದಾಗ, ಅವನು ಸುಮ್ಮನೆ ಅವಳ ಪಕ್ಕ ಮಲಗಿಕೊಂಡ. ಅವಳು, ಅವನ ಕೈಯನ್ನು ತನ್ನ ದೇಹದ ತುಂಬಾ ಹಿಡಿದು ಆಡಿಸಿದಳು. ತುಂಬಾ ಮುಜುಗರವಾದಂತೆನಿಸಿ, ಅವನು ತನ್ನ ಕೈಯನ್ನು ಸಟಕ್ ಎಂದು ಹಿಂದೆಗೆದುಕೊಂಡ. ನಂತರದ ದಿನಗಳಲ್ಲಿ ಗಾಯತ್ರಿ ಬಹಳ ಬಾರಿ ಪ್ರಯತ್ನಿಸಿದರೂ ಇದಕ್ಕಿಂತ ಹೆಚ್ಚಿನದನ್ನು ಒಳ್ಳೆಯವನ ಬಳಿ ಮಾಡುವುದು ಸಾಧ್ಯವಾಗುತ್ತಿರಲಿಲ್ಲ. ರಾತ್ರಿ ಮನೆಗೆ ಬಂದು ಮಲಗಿದಾಗ ನದಿಯ ದಡದಲ್ಲಿ ನಡೆದುದೆಲ್ಲವೂ ನೆನಪಿಗೆ ಬಂದು ಆತ ಉದ್ವಿಗ್ನಗೊಳ್ಳುತ್ತಿದ್ದ. ಸ್ವಯಂಶಮನ ಮಾಡಿಕೊಳ್ಳುತ್ತಿದ್ದ. ಕೊನೆಯಲ್ಲಿ ಮತ್ತೆ ಆಕಾಶವನ್ನು ನೋಡುತ್ತಾ ಬಿಕ್ಕಿ ಬಿಕ್ಕಿ ಅಳುತ್ತಿದ್ದ.

ಮುಂಬರುವ ದಿನಗಳು ಒಳ್ಳೆಯವನಿಗೆ ತುಂಬಾ ತೊಂದರೆದಾಯಕವೇ ಆಗಿದ್ದವು. ಈ ಅವಧಿಯಲ್ಲಿ ಆತ ತೀವ್ರವಾದ ಮಾನಸಿಕ ಕ್ಲೇಶಕ್ಕೊಳಗಾದ. ಗಾಯತ್ರಿ ಈಗ ಅಷ್ಟಾಗಿ ನದಿಯ ತಟಕ್ಕೆ ಒಳ್ಳೆಯವನ ಜೊತೆ ಬರುತ್ತಿರಲಿಲ್ಲ. ನದಿಯ ದಡಕ್ಕೆ ಹೋಗೋಣ ಅಂದರೆ, ಓದುವದಿದೆ, ಡ್ರಾಮಾ ಪ್ರಾಕ್ಟೀಸ್ ಇದೆ ಎಂದು ಸುಮ್ಮನೆ ಹೋಗಿ ಬಿಡುತ್ತಿದ್ದಳು. ಸಾಲದುದಕ್ಕೆ ಯಾವತ್ತೂ, ಏನಾದರೂ ಒಂದು ಗಲಾಟೆ ಮಾಡುತ್ತಾ, ಉಂಡಾಡಿಯಾಗಿ ಅಲೆದಾಡಿಕೊಂಡಿದ್ದ ರಮೇಶನ ಸುತ್ತ ಗಾಯತ್ರಿ ಸುತ್ತುವುದು ಅವನಿಗೆ ಅರಿವಿಗೆ ಬರತೊಡಗಿತು. ಕ್ರಮೇಣ ಗಾಯತ್ರಿ ಒಳ್ಳೆಯವನ ಮುಖ ತಪ್ಪಿಸಿ ಓಡಾಡತೊಡಗಿದಳು. ಇದರ ಕುರಿತು ಒಂದು ದಿನ, ತಡೆಯಲಾಗದೆ, ಒಳ್ಳೆಯವನು ಅವಳನ್ನು ಕೇಳಿಬಿಡಬೇಕೆಂದು ಅರಸಿಕೊಂಡುಹೋದ. ಆದರೆ ಅವಳ ಮನೆಯಲ್ಲಿ, ಗಾಯತ್ರಿ, ಓದುವದಕ್ಕೆಂದು ನದಿಯ ತಟಕ್ಕೆ ಹೋಗಿದ್ದಾಳೆಂದರು. ಒಳ್ಳೆಯವನಿಗೆ ಸಮಾಧಾನವಾಯಿತು. ನದಿಯ ತಟಕ್ಕೆ ಅರಸಿ ಬಂದು ನೋಡಿದರೆ ಅಲ್ಲಿಯೇ ಪಾರ್ಕ್ ಮಾಡಿದ ರಮೇಶನ ಬೈಕು ಕಾಣಿಸಿತು.

ಆ ದಿನ ಒಳ್ಳೆಯವನು ನಿದ್ದೆಯನ್ನು ಮಾಡಲಿಲ್ಲ. ಇಡೀ ರಾತ್ರಿ ಸದ್ದಿಲ್ಲದಂತೆ ಅಳುತ್ತಲೇ ಇದ್ದ. ಮತ್ತೆ ಅವನಿಗೆ, ಓದುವ ಪುಸ್ತಕವೆಲ್ಲವೂ ಹಿಂಸೆಯನ್ನು ಬೋಧಿಸುತ್ತವೆ ಅನ್ನಿಸಿತು. ಇತ್ತೀಚೆಗೆ ಓದುವದೆ ಮರೆತು ಹೋದಂತೆ ಆಗಿತ್ತು. ಮರುದಿನ ಮತ್ತೆ ಲೈಬ್ರರಿಗೆ ಬಂದು ಕುಳಿತ. ಯಾವತ್ತಿನಿಂದಲೂ ಇದ್ದ ಲೈಬ್ರರಿಯನ್ ಜಾಗದಲ್ಲಿ, ಬೇರೆ ಯಾರೋ ಇದ್ದರು. ಕೇಳಿದ್ದಕ್ಕೆ, ಹಳೆಯ ಲೈಬ್ರರಿಯನ್ ಇತ್ತೀಚೆಗೆ ಬಸ್ ಅಪಘಾತದಲ್ಲಿ ತೀರಿಕೊಂಡಿದ್ದಾರೆ ಅಂದರು. ತನಗೆ ಗೊತ್ತೇ ಆಗಲಿಲ್ಲವಲ್ಲಾ ಎಂದು ಒಳ್ಳೆಯವನಿಗೆ ಕಸಿವಿಸಿಯುಂಟಾಯಿತು.

ಆ ಒಂದು ವಿಷಯವನ್ನು ಬಿಟ್ಟರೆ, ಉಳಿದಂತೆ ಲೈಬ್ರರಿಯಲ್ಲೇನೂ ಬದಲಾಗಿರಲಿಲ್ಲ. ಎರಿಕ್ ಪುಸ್ತಕ, ಕಾನ್ರಾಡ್ ಪುಸ್ತಕದ ಜೊತೆ, ಈತ ಮೊದಲು ಎಲ್ಲಿ ಇಟ್ಟು ಹೋಗಿದ್ದನೋ ಅಲ್ಲಿಯೇ ಇತ್ತು. ಈ ಎಲ್ಲಾ ಘಟನೆಯಿಂದ ಖುಷಿಗೊಂಡವಳೆಂದರೆ ಒಳ್ಳೆಯವನ ಅಮ್ಮ. ಅವರು ಪಕ್ಕದ ಮನೆಯವರ ಬಳಿ, ಹರಟೆಯ ಸಮಯದಲ್ಲಿ, 'ನೋಡಿ, ನಾನು ಹೇಳಲಿಲ್ಲವಾ, ಇವೆಲ್ಲಾ ಹುಡುಗಾಟಿಕೆ' ಎಂದು ತೀರ್ಪಿತ್ತರು. ಸ್ವಲ್ಪ ದಿನದಲ್ಲಿ ಅವನ ವಿದ್ಯಾಭ್ಯಾಸ ಮುಗಿದು ಅವನಿಗೊಂದು ನೌಕರಿಯೂ ಸಿಕ್ಕಿತು.

ಅದೊಂದು ದೊಡ್ಡ ಕಂಪನಿಯ ಕೆಲಸ. ಆ ಕಂಪನಿಯ Information Officer ಆಗಿ ಆತನನ್ನು ನೇಮಿಸಲಾಯಿತು. ಕಂಪನಿಯ ವಾಣಿಜ್ಯಕ್ಕೆ ಸಂಬಂಧಪಟ್ಟಂತೆ ಅವನು ಎಲ್ಲಾ ಮಾಹಿತಿಯನ್ನು ಶೇಖರಿಸಿ, ವಿಂಗಡಿಸಿ, ಇಡಬೇಕಾಗುತ್ತಿತ್ತು. ಯಾರು, ಯಾವಾಗ ಕೇಳಿದರೂ ಅವನು ಅದನ್ನು ದೊರಕಿಸಿಕೊಡಬೇಕಾಗುತ್ತಿತ್ತು. ಅವನಿಗೆ ಸಹಾಯಕರು ಯಾರೂ ಇರಲಿಲ್ಲ. ಕಂಪನಿಯ ಆಫೀಸಿನ ಮೂಲೆಯಲ್ಲಿ ಒಂದು ಸಣ್ಣ ಕ್ಯಾಬಿನ್, ಎರಡು ಕಂಪ್ಯೂಟರುಗಳು. ಆ ಕಂಪನಿಯ ಮಾಲಿಕನ ಒಂದು ದೊಡ್ಡ ಫೋಟೋ, ರೂಂ ನ ಒಳಗಡೆ ಇತ್ತು. ಹೊರಗ
ಒಂದು ಹೂವಿನ ಕುಂಡ ಮತ್ತು ಮನೆಯ
ಒಳಗಡೆ ಬೆಳೆಯುವ ಒಂದು ಹಸಿರು ಗಿಡ.

ಮೊದಮೊದಲು ಒಳ್ಳೆಯವನು ತುಂಬ
ಉತ್ಸಾಹದಲ್ಲಿಯೇ ಕೆಲಸ ಮಾಡಿದ. ಆದ
ಕ್ರಮೇಣ ಅವನಿಗೆ ಅನ್ನಿಸತೊಡಗಿತು, ಕಂಪನಿ
ನಿಜವಾಗಿಯೂ ಇವನು ಒದಗಿಸುವ ಮಾಹಿ
ಯಿಂದ ಏನೂ ಆಗುತ್ತಿಲ್ಲವೆಂದು. ಕೆಲವೊಮ
ಬೋರ್ಡ್ ಮೀಟಿಂಗ್‌ಗೆ ಅವನನ್ನು ಕರೆಸಲಾಗ
ತ್ತಿತ್ತು. ಆಗೆಲ್ಲಾ ಆತ ಮಾಹಿತಿಯ ಜೊತೆ
ವಿಷಯವನ್ನು ವಿವರಿಸಲೂ ಪ್ರಯತ್ನಿಸುತ್ತಿ
ಆದರೆ ಅಲ್ಲಿದ್ದವರಿಗೆ ಆ ಕುರಿತಂತೆ ವಿಶೇಷ ಆ
ಇದ್ದಂತೆ ಇರಲಿಲ್ಲ. ಕೆಲವೊಮ್ಮೆ ಆತ, ಇಡಿ
ಮೀಟಿಂಗ್‌ನಲ್ಲಿ ಕುಳಿತಿರಬೇಕಾಗುತ್ತಿತ್ತು. ಯಾಕೆಂದ
ಯಾರು ಬೇಕಾದರೂ, ಇವನ ಬಳಿ ಯಾವ ಮಾಹಿ
ಯನ್ನಾದರೂ, ಕೇಳಬಹುದಾಗಿತ್ತು. ಆದರೆ ಹಾ
ಯಾರಾದರೂ ಕೇಳುತ್ತಿದ್ದುದೆ ಅಪರೂ
ಬೋರ್ಡ್ ಮೀಟಿಂಗ್‌ಗಳು ಕೆಲವೊಮ್ಮೆ ಮ
ರಾತ್ರಿಯವರೆಗೂ ನಡೆಯುತ್ತಿತ್ತು. ಅವರೆಲ್ಲಾ
ಚರ್ಚೆ ಮಾಡುವದು, ಮಾತನಾಡುವದು, ನ
ಯಾಡುವದು, ಒಂದೂ ಒಳ್ಳೆಯವನ ತಲೆ
ಹೊಳೆಯುತ್ತಿರಲಿಲ್ಲ. ಪ್ರತಿ ವಿಷಯವನ್ನು ಅವ
ತಾಸುಗಟ್ಟಲೆ ಚರ್ಚಿಸಿ, ಮುಂದಿನ ಮೀಟಿಂ
ಗೆಂದು ಕೆಲವು ವಿಷಯವನ್ನು ಮೀಸಲಿಡುತ್ತಿದ್ದರ
ಒಮ್ಮೊಮ್ಮೆ, ಬೋರ್ಡಿನ ಡೈರೆಕ್ಟರುಗಳಲ್ಲಿ ಭಿನ್ನಾ
ಪ್ರಾಯ ತಲೆದೋರಿ, ಅವರು ಮೇಜು ಕು
ತ್ತಿದ್ದರು. ಆಗೆಲ್ಲಾ ನೀವಿನ್ನು ಹೋಗಬಹುದೆಂ
ಒಳ್ಳೆಯವನನ್ನು ಅಲ್ಲಿಂದ ಕಳುಹಿಸಲಾಗುತ್ತಿತ್ತು.

ಒಳ್ಳೆಯವನಿಗೆ ಮತ್ತೆ ಗೊಂದಲ ಪ್ರಾರಂಭವಾ
ಬಿಡುತ್ತಿತ್ತು. ತಾನೇನು ಮಾಡಬೇಕೆಂದೇ ತಿಳಿಯ
ತ್ತಿರಲಿಲ್ಲ. ಆಫೀಸಿನ ಒಳಗಡೆ ಎಲ್ಲರೂ ಸ
ಕೆಲಸದಲ್ಲಿ ಮಗ್ನರಾಗಿರುವಂತೆ ತೋರುತ್ತಿತ
ದಿನದ ಕೊನೆಯಲ್ಲಿ, ಅವರೆಲ್ಲ ಕೆಲಸ ಮಾ
ಕಸದ ಬುಟ್ಟಿಗೆ ಹಾಕಿದ ಸಾವಿರಾರು ಪೇಪ

ಗಳನ್ನು ಕೆಲಸದಾಳು ಗುಡಿಸಿ, ಚೊಕ್ಕ ಮಾಡುವದು ಅವನಿಗೆ ತಿಳಿಯುತ್ತಿತ್ತು. ಸ್ವಲ್ಪದಿನದ ನಂತರ ತುಂಬಾ ಬೇಜಾರಾದಂತೆನಿಸಿ ಒಂದು ಚಿಕ್ಕ ರೌಂಡ್‌ಗೆಂದು ಒಳ್ಳೆಯವನು ಹೊರಗಡೆ ಬಂದ. ಎಷ್ಟು ಹೊತ್ತು ಹಾಗೆ ಆತ, ಯಾವ ಉದ್ದೇಶವೂ ಇರದೆ ತಿರುಗುತ್ತಿದ್ದನೋ. ಕೊನೆಗೆ ಆಫೀಸಿಗೆ ಬಂದಾಗ, ಯಾರೂ ಆ ಕುರಿತಂತೆ ವಿಶೇಷ ಯೋಚನೆಯನ್ನೂ ಮಾಡಿದ ಹಾಗಿರಲಿಲ್ಲ.

ಈ ನಡುವೆ ಕೆಲವೊಂದು ಒಳ್ಳೆಯ ಸಂಗತಿಗಳು ಒಳ್ಳೆಯವನ ಬದುಕಿನಲ್ಲಿ ನಡೆದವು. ಅವನಿಗಾಗಿ, ಅವನಮ್ಮ, ಒಂದು ಹೆಣ್ಣನ್ನು ನೋಡಿ ಮದುವೆ ಮಾಡಿದರು. ಆ ಹುಡುಗಿಯನ್ನು ನೋಡಲು ಒಳ್ಳೆಯವನು ತನ್ನ ತಾಯಿಯ ಜೊತೆ ಹೋಗಿದ್ದ. ಅವಳನ್ನು ನೋಡುತ್ತಿರಬೇಕಾದರೆ ಗಾಯತ್ರಿಯ ನೆನಪಾಗಿ, ಅವನಿಗೆ ಹೇಗೆ ಹೇಗೋ ಆಯಿತು. ಆದರೆ ಗಾಯತ್ರಿಗಿಂತ ತುಂಬಾ ಲಕ್ಷಣವಾಗಿದ್ದಾಳೆ ಅನ್ನಿಸಿತು. ಮದುವೆಯ ವ್ಯವಹಾರದ ಕುರಿತಂತೆ ಅವನ ತಾಯಿಯೇ ಅವರ ಬಳಿ ಮಾತನಾಡಿದರು. ಎಲ್ಲವು ಮೊದಲೇ ನಿಶ್ಚಯವಾದಂತೆ ಅವನಿಗೆ ತೋರಿತು. ಸ್ವಲ್ಪದಿನದಲ್ಲಿ ಒಬ್ಬ ಗೃಹಸ್ಥನ ಜೀವನಕ್ಕೆ ಆತ ಒಗ್ಗಿಕೊಂಡ. ಆದರೆ ಸಂಜೆ ಆದಂತೆ ಆತ ಅಧೀರಗೊಳ್ಳುತ್ತಿದ್ದ.



ಅವನು ಮದುವೆಯಾದ ಹುಡುಗಿ ಮೋಹಿನಿ, ತುಂಬಾ ಚುರುಕಾಗಿರುವಂತೆ ಅವನಿಗೆ ತೋರಿತು. ಅವಳು ಬಂದಮೇಲೆ ಮನೆಯಲ್ಲಿ ಕೆಲವು ಬದಲಾವಣೆಗಳಾದವು. ಮಧ್ಯಹಾಲ್‌ನಲ್ಲಿ ಒಂದು ಪಾರ್ಟಿಶನ್ ಎಬ್ಬಿಸಿ ಒಂದು ಕೋಣೆ ಮಾಡಲಾಯಿತು. ಆ ಕೋಣೆಯಲ್ಲಿ ಅವರ ಮದುವೆಯ ಫೋಟೊ ಒಂದನ್ನು ತೂಗುಬಿಡಲಾಯಿತು. ಮನೆಯ ಹೊಸ್ತಿಲ ಬಾಗಿಲಿಗೆ Welcome ಬೋರ್ಡ್ ಕೂಡಾ ಹಾಕಲಾಯಿತು. ಮನೆಯಲ್ಲಿ ಇಡಿಯ ದಿನ, ಅವಳ ಧ್ವನಿಯೇ ಎದ್ದು ಕೇಳುತ್ತಿತ್ತು. ಮನೆಯ ಹಾಲ್‌ನ್ನು ಪಾರ್ಟಿಶನ್ ಮಾಡುವ ವಿಚಾರದಲ್ಲಿ ಅತ್ತೆ, ಸೊಸೆಯರಿಗೆ ಜಗಳವಾದಂತಿತ್ತು. ಅಲ್ಲಿಂದ ಮುಂದೆ ಅವರು ಗುಪ್ತವಾಗಿಯೇ ಕಿರುಚಾಡುತ್ತಿದ್ದರು. ನಂತರ ಸ್ವಲ್ಪದಿನದಲ್ಲಿಯೆ ಒಳ್ಳೆಯವನ ಎದುರೇ ಕಿರುಚಾಡತೊಡಗಿದರು. ಒಳ್ಳೆಯವನಿಗೆ, ಅವರಾದರೂ ಯಾಕೆ ಕಿರುಚಾಡುತ್ತಾರೆ ಎಂದು ತಿಳಿಯದ್ದರಿಂದ, ಕಂಪನಿಯ ಬೋರ್ಡ್ ರೂಂ ನಲ್ಲಿ ಕುಳಿತಂತೇ ಅನ್ನಿಸುತ್ತಿತ್ತು.

ಅವರ ಜಗಳ ತಾರಕಕ್ಕೇರಿದಾಗಲೆಲ್ಲಾ ಆತ ತನ್ನ ಚಪ್ಪಲಿ ಮೆಟ್ಟಿಕೊಂಡು, ನದಿಯ ತಟಕ್ಕೆ ಹೋಗುತ್ತಿದ್ದ. ಆಗೆಲ್ಲಾ, ಮೇಲೆ ಹಾರಿ ಹೋಗುವ ಬೆಳ್ಳಕ್ಕಿಗಳು ಅವನಿಗೆ ತುಂಬಾ ವಕ್ರವಾಗಿ ಕಾಣುತ್ತಿದ್ದವು. ತಿರುಗಿ ಮನೆಗೆ ಬಂದಾಗ, ಕೆಲವೊಮ್ಮೆ ಜಗಳ ಮುಂದುವರಿದುಕೊಂಡು ಹೋಗುತ್ತಿತ್ತು, ಕೆಲವೊಮ್ಮೆ ಅವರಿಬ್ಬರೂ ಒಟ್ಟಾಗಿಯೆ ಕುಳಿತು ಟಿವಿ ನೋಡುತ್ತಿರುವದು ಕಾಣಸುತ್ತಿತ್ತು. ಒಂದು ದಿನ 'ಮನೆಗೆ ಅರ್ಜಂಟಾಗಿ ಬನ್ನಿ' ಎಂದು ಆಫೀಸಿಗೆ ಫೋನು ಬಂದಿತು. ಹೋಗಿನೋಡಿದರೆ, ಅವನಮ್ಮ ಬಾವಿಯಲ್ಲಿ ಹಾರಿಕೊಂಡು ಆತ್ಮಹತ್ಯೆ ಮಾಡಿಕೊಂಡಿದ್ದರು.

ಆಫೀಸಿನಲ್ಲಿಯೂ ಕೂಡಾ ಬಹಳ ಬದಲಾವಣೆಗಳಾಗುತ್ತಿದ್ದವು. ಮೊದಲಿರುವ ವ್ಯವಸ್ಥಾಪಕ ನಿರ್ದೇಶಕರ ಸ್ಥಳದಲ್ಲಿ ಬೇರೊಬ್ಬ ಯುವಕ ಬಂದಿದ್ದ. ಆತ ಅಸಾಧ್ಯ ಬುದ್ಧಿವಂತನೆಂಬ ಪ್ರತೀತಿ ಅಲ್ಲೆಲ್ಲಾ ಹಬ್ಬಿತ್ತು. ಆದರೆ ಒಳ್ಳೆಯವನಿಗೆ ತನ್ನ ಕೆಲಸ, ಕಾರ್ಯದಲ್ಲಿ ಮಹತ್ತರ ಬದಲಾವಣೆಯೇನೂ ಆದಂತೆ ಕಾಣಲಿಲ್ಲ. ಮೊದಲಿನಂತೆಯೇ ಆತ ಆಫೀಸಿನ ಮೂಲೆಯ ಕ್ಯಾಬಿನ್ನಲ್ಲಿ ಕುಳಿತುಕೊಳ್ಳುತ್ತಿದ್ದ. ದಿನದ ಬಹುಪಾಲು, ಯಾವುದಾದರೂ ಒಂದು ಪುಸ್ತಕ ಓದುತ್ತ ಕಳೆಯುತ್ತಿದ್ದ. ಮಧ್ಯ ಎದ್ದು, ನಗರವನ್ನು ಯಾವ ಒಂದು ಸ್ಪಷ್ಟ ಉದ್ದೇಶವೂ ಇರದೆ, ಅಲೆಯುತ್ತಿದ್ದ. ಒಂದು ದಿನ ಅವನಿಲ್ಲದ ಹೊತ್ತಿನಲ್ಲಿ, ಒಂದೆರಡು ಬಾರಿ ವ್ಯವಸ್ಥಾಪಕ ನಿರ್ದೇಶಕರು ಹೇಳಿ ಕಳುಹಿಸಿದರು.

ಒಳ್ಳೆಯವನು, ಒಂದೆರಡು ದಿನ ಬಿಟ್ಟು ಅವರ ಬಳಿ ಹೋದ. ದೊಡ್ಡ ಮೇಜಿನ ಹಿಂದೆ ಕಳೆಕಳೆಯಾದ ಯುವಕನೊಬ್ಬ ಕುಳಿತಿದ್ದ. ಇಂತಹ ಒಂದು ಕೊಠಡಿ ಇದೆ ಎಂದು ಈ ತನಕ ಗೊತ್ತೇ ಆಗಲಿಲ್ಲವಲ್ಲಾ ಎಂದು ಒಳ್ಳೆಯವನಿಗೆ ಅಚ್ಚರಿ ಅನ್ನಿಸಿತು. 'ಬನ್ನಿ, ಕುಳಿತುಕೊಳ್ಳಿ' ಎಂದು ಅವರಂದದ್ದರಿಂದ ಹೋಗಿ ಕುಳಿತುಕೊಂಡ. ವ್ಯವಸ್ಥಾಪಕ ನಿರ್ದೇಶಕರೇ ಮಾತನಾಡತೊಡಗಿದರು. ವಾಕ್ಯದಲ್ಲಿ ಒಂದೆರಡು ಬಾರಿ ಅವರು Core competence, competitive advantage ಅನ್ನುತ್ತಿದ್ದರು. ಮಧ್ಯ ಎಲ್ಲಾದರೂ, ಖರ್ಚು, ವೆಚ್ಚಗಳನ್ನು ಕಡಿಮೆ ಮಾಡಬೇಕು ಎನ್ನುತ್ತಿದ್ದರು. ಹಾಗೆಂದಾಗಲೆಲ್ಲಾ ಒಳ್ಳೆಯವನಿಗೆ ಅವನ ಹೆಂಡತಿಯ ನೆನಪಾಯಿತು. ಅವಳು ಕೂಡಾ ಇತ್ತೀಚೆಗೆ ಈ ಶಬ್ದವನ್ನು ತುಂಬಾ ಬಳಸುತ್ತಿದ್ದಳು. ನಂತರ, ಯಾವುದೋ ಒಂದು ತಿರುಪಿನಲ್ಲಿ, ವ್ಯವಸ್ಥಾಪಕ ನಿರ್ದೇಶಕರು ಮಾತು ನಿಲ್ಲಿಸಿ, 'ಮಿಸ್ಟರ್, ಈಗ ನೀವು ಹೇಳಿ. ನೀವು ಈ ಸಂಸ್ಥೆಯ Information Ofiicer, ಈ ಸಂಸ್ಥೆಯ ಮೂಲಾಧಾರ, What sort of strategy we need to implement to combat this bloody battle?' ಅಂದರು.

ಒಳ್ಳೆಯವನಿಗೆ ಈವರೆಗೆ ಯಾರೂ ಹಾ[illegible] ಕೇಳಿರಲೇ ಇಲ್ಲ. ತುಂಬಾ ಗೊಂದಲ ಉಂಟ[illegible]ಯಿತು. ಅವನಲ್ಲಿ ಶೇಖರಗೊಂಡ ಅಂ[illegible] ಸಂಖ್ಯೆಗಳೆಲ್ಲವು, ಕಂಪನಿ ಹೇರಳವಾಗಿ ಹ[illegible] ಕಳೆದುಕೊಳ್ಳುವುದಕ್ಕಿಂತ ಕಂಪನಿಯನ್ನು ಮು[illegible] ಬಿಡುವದೇ ಲೇಸೆಂದು ಅವನಿಗೆ ಹೇಳುತ್ತಿದ್ದವು. ಅದೊಂದು ಅಭಿಪ್ರಾಯ ಬಿಟ್ಟರೆ ಅವನ ಬ[illegible] ಬೇರೆ ಯಾವ ಅಭಿಪ್ರಾಯವಿರಲಿಲ್ಲ.

'So, what do you think?' ಅಂದರು, ವ್ಯವಸ್ಥಾಪಕ ನಿರ್ದೇಶಕರು.

ಒಳ್ಳೆಯವನಿಗೆ ಮತ್ತೆ ಗೊಂದಲ ಪ್ರಾರಂ[illegible]ವಾಯಿತು. ತಾನಿದಕ್ಕೆ ಏನಾದರೂ ಒಂದ[illegible] ಉತ್ತರ ಹೇಳಬೇಕೆಂದು ವ್ಯವಸ್ಥಾಪಕ ನಿರ್ದೇ[illegible]ಕರು ಕಾಯುತ್ತಿದ್ದಾರೆ ಅನ್ನಿಸಿತು. ಆ ಅನ್ನಿಸಿಕೆಯೆ[illegible] ಒಳ್ಳೆಯವನನ್ನು ಮತ್ತಷ್ಟು ಹೆದರಿಸಿತು. ನಂತ[illegible] ಸಾವರಿಸಿಕೊಂಡು ಒಳ್ಳೆಯವನು ನಿಧಾನವಾ[illegible] ನುಡಿದ.

"ನಾವು ಕಂಪನಿಯನ್ನು ಮುಚ್ಚಬೇಕು".

ಇದ್ದಕ್ಕಿದ್ದಂತೆ, ವ್ಯವಸ್ಥಾಪಕ ನಿರ್ದೇಶಕ[illegible] ನಗತೊಡಗಿದರು. ಅಲ್ಲಿಯವರೆಗೆ ತುಂಬಿ[illegible] ಒಂದು ಬಿಗಿವಾತಾವರಣ ನಿರಾಳಗೊಂಡಂ[illegible]ನಿಸಿತು. ಅವರು ತುಂಬಾ ಹೊತ್ತು, ಹಾ[illegible] ನಗುತ್ತಲೇ ಇದ್ದರು. ನಂತರ 'ನೀವಿನ್ನು ಹೋ[illegible] ಬಹುದು' ಎಂದರು. ಒಳ್ಳೆಯವನು ಏನಾದರು ತಪ್ಪು ಮಾಡಿದೆನಾ ಎಂದು ಯೋಚಿಸಿದ[illegible] ಅಂತಹದ್ದೇನು ನೆನಪಿಗೆ ಬರಲಿಲ್ಲ. ಆದರು ವ್ಯವಸ್ಥಾಪಕ ನಿರ್ದೇಶಕರು ಯಾಕೆ ಆ ರೀತಿಯ[illegible] ನಗೆಯಾಡಿದರೆಂದು ಸ್ವಲ್ಪ ಹೊತ್ತು ಯೋಚಿಸಿದ[illegible] ಅದು ಗೊತ್ತಾಗುವ ರೀತಿಯಲ್ಲಿ ಇರದಿದ್ದು[illegible]ರಿಂದ ಯೋಚಿಸುವದನ್ನು ನಿಲ್ಲಿಸಿದ. ಮತ್ತೊಂದ[illegible] ವಾರ, ದಿನಗಳು ಹಾಗೆಯೇ ಕಳೆದವು. ಮ[illegible]

ವ್ಯವಸ್ಥಾಪಕ ನಿರ್ದೇಶಕರು ಹೇಳಿ ಕಳುಹಿಸಿದರು. ವ್ಯವಸ್ಥಾಪಕ ನಿರ್ದೇಶಕರು ಬಹಳ ಹೊತ್ತು ಕಿಟಕಿಯಿಂದ ಹೊರಗೆ ನೋಡುತ್ತಲುಳಿದರು. ನಂತರ ನಿಧಾನವಾಗಿ, 'ಕಂಪನಿ ತುಂಬಾ ನಷ್ಟದಲ್ಲಿದೆ' ಎಂದರು. ಅದು ತಮಗೆ ತಾವೆ ಹೇಳಿಕೊಂಡಿದ್ದೋ ಅಥವಾ ತನ್ನನ್ನು ಉದ್ದೇಶಿಸಿ ನುಡಿದದ್ದೋ ಅರ್ಥವಾಗದೆ, ಹೇಗೆ ಪ್ರತಿಕ್ರಿಯಿಸುವದು ಅನ್ನುವ ಗೊಂದಲ ಒಳ್ಳೆಯವನಿಗೆ ಪ್ರಾರಂಭಗೊಂಡಿತು. ನಂತರ ವ್ಯವಸ್ಥಾಪಕ ನಿರ್ದೇಶಕರೇ ಕೇಳಿದರು, 'ಮನೆಯಲ್ಲಿ ನೀವು ಯಾರು ಯಾರು ಇದ್ದೀರಿ?' ಒಳ್ಳೆಯವನು ಉತ್ತರಿಸುವ ಮೊದಲೇ ಅವರೇ ದೀರ್ಘವಾಗಿ ಮಾತನಾಡಿ, ಕೊನೆಯಲ್ಲಿ 'ನಿಮ್ಮನ್ನು ಕೆಲಸದಿಂದ ತೆಗೆಯಲಾಗಿದೆ' ಎಂದರು. 'ಅಕೌಂಟ್ಸ್ ಡಿಪಾರ್ಟ್‌ಮೆಂಟ್'ಗೆ ಹೋಗಿ, ಅವರು ನಿಮ್ಮ ವ್ಯವಹಾರದ ಕುರಿತು ಮಾತನಾಡುತ್ತಾರೆ' ಅಂದರು.

ಒಳ್ಳೆಯವನು ತನ್ನ ಕೊಠಡಿಗೆ ಬಂದು, ತಾನು ಸೇರಿಸಿದ್ದನ್ನೆಲ್ಲ ಒಮ್ಮೆ ನೋಡಿದ. ಇಷ್ಟೆಲ್ಲ ಪುಸ್ತಕ ಗಳು ತನ್ನ ರೂಂನಲ್ಲಿ ಸೇರಿಕೊಂಡಿವೆಯೇ ಎಂದು ಅವನಿಗೆ ಆಶ್ಚರ್ಯವಾಯಿತು. ಅಲ್ಲಿ ಅವನಿಗೆ ಪ್ರಿಯವಾದ ವಸ್ತುಗಳೆಲ್ಲವೂ ಇದ್ದವು. ಅವನ ಟೇಬಲ್ಲಿನ ಮೇಲೆ ಆತನಿಗೊಂದು ಲಕೋಟೆ ಇತ್ತು. ಅಕೌಂಟ್ಸ್ ಕ್ಲಾರ್ಕ್ ಬಂದು, ಕೆಲವು ಪೇಪರಿಗೆ ಸಹಿ ಹಾಕಿಸಿ, ತೆಗೆದುಕೊಂಡು ಹೋದ.

ಆ ದಿನಪೂರ್ಣ ಒಳ್ಳೆಯವನು ಊರೆಲ್ಲಾ ಅಲೆಯುತ್ತಲೆ ಇದ್ದ. ಮನೆಗೆ ಹೋಗಬೇಕು ಅನ್ನಿಸಿದರೂ ಹೇಗೆ ಹೋಗುವದು ಎನ್ನುವ ತೊಳಲಾಟ ಪ್ರಾರಂಭವಾಯಿತು. ಕೊನೆಗೆ, ಕತ್ತಲಾದ ಮೇಲೆ ನಿಧಾನವಾಗಿ ಮನೆ ಮುಟ್ಟಿದ. ಮನೆಯಲ್ಲಿ, ಪಕ್ಕದ ಮನೆಯ ಸುರೇಶ, ಒಳ್ಳೆಯವನ ಹೆಂಡತಿಯ ಜೊತೆ ಹರಟೆ ಕೊಚ್ಚುತ್ತಿದ್ದವನು, ಅವನನ್ನು ಕಂಡದ್ದೆ 'ನಾನಿನ್ನು ಬರುತ್ತೇನೆ ವೈನಿ, ಆಗದಾ' ಎಂದು ದಡಬಡಿಸಿ ಇಳಿದು ಹೋದ.

ಆತ ಆಚೆ ಹೋದದ್ದೇ, ಹೆಂಡತಿ 'ನಿಮ್ಮ ಕೆಲಸ ಹೋಯಿತಂತೆ' ಅಂದವಳೆ, ಮುಸುಮುಸು ಅಳತೊಡಗಿದಳು. ತನ್ನ ಕೆಲಸ ಹೋದದ್ದು, ಇಷ್ಟು ಬೇಗ ಮನೆಯ ಚಡಿಯೇರುತ್ತದೆ ಎಂದು ಒಳ್ಳೆಯವನು ಅಂದುಕೊಂಡಿರಲಿಲ್ಲ. ತನ್ನ ಭಾಗ್ಯವನ್ನು ಹಳಿಹಳಿದು ಅಳುವ ಹೆಂಡತಿಯನ್ನು ಹೇಗೆ ಸಮಾಧಾನಿಸುವದು ಎಂದು ತಿಳಿಯದೆ ಒಳ್ಳೆಯವನು ಸುಮ್ಮನೆ ಕುಳಿತೇ ಇದ್ದ. 'ಹೋಗಲಿ, ನಿಮ್ಮ ಗ್ರಾಚ್ಯೂಯಿಟಿ ಎಲ್ಲಾ ಸೇರಿಸಿ ಎಷ್ಟು ಕೊಟ್ಟರು' ಎಂದು ಕೊನೆಗೆ ಹೆಂಡತಿಯೇ ಕೇಳಿದಳು. ಆ ಪ್ರಶ್ನೆ ಅವಳು ಕೇಳುವನತನಕ ಅಕೌಂಟ್ಸ್ ಕ್ಲಾರ್ಕ್ ಕೊಟ್ಟ ಚೆಕ್‌ನ್ನು ಬಿಚ್ಚಿ ನೋಡಿರಲಿಲ್ಲ. ಬಿಚ್ಚಿ ನೋಡಿದರೆ ಏಳು ಲಕ್ಷ ಮೊತ್ತದ ಚೆಕ್ ಅದಾಗಿತ್ತು. ಕಂಪನಿಯು ಅಷ್ಟೆಲ್ಲಾ ನಷ್ಟದಲ್ಲಿ ಇದ್ದರೂ ಇಷ್ಟೆಲ್ಲ ಹಣ ಕೊಟ್ಟರಲ್ಲಾ ಅನ್ನಿಸಿತು. ''ಇವಿಷ್ಟನ್ನು ಫಿಕ್ಸೆಡ್ ಡೆಪಾಸಿಟ್‌ದಲ್ಲಿ ಇಟ್ಟರೆ, ತಿಂಗಳಿಗೆ ಒಂದೈದು ಸಾವಿರ ಬರುತ್ತದೆ, ಸಾಕು'' ಎಂದು ಹೆಂಡತಿಗೆ ಹೇಳಿದ. ಅವಳು ಮತ್ತೆ ತನ್ನ ಭಾಗ್ಯವನ್ನು ಹಳಿದುಕೊಂಡು ಅಳಲು ಪ್ರಾರಂಭಿಸಿದ್ದಳು. ಒಳ್ಳೆಯವನು ಮತ್ತೆ ಹೊಳೆಯ ದಂಡೆಗೆ ಬಂದು ಕುಳಿತ. ಇಡಿಯ ಹೊಳೆಯೊಂದು ಚಂದ್ರನ ಬೆಳಕಿಗೆ ಉರಿಯುತ್ತಿದ್ದಂತೆ ಅವನಿಗನ್ನಿಸಿತು. ನಂತರ, ಹಾಗೇ, ಅಲ್ಲಿಯೇ ನಿದ್ದೆ ಹೋದ.

ಮನೆಗೆ ಬಂದಾಗ, ಸುರೇಶ ಕಟ್ಟೆಯ ಮೇಲೆ ಇದ್ದ. ಇವನನ್ನು ಕಂಡಿದ್ದೇ, 'ನಾನು, ವೈನಿ ನಿಮಗಾಗಿ ರಾತ್ರಿಯಿಡೀ ಊರು ಹುಡುಕಿದೆವು ಮಾರಾಯ, ವೈನಿ ಎಷ್ಟು ಹೆದರಿಕೊಂಡಿದ್ದಳು. ನಾನೇ ಸಂತೈಸಿದೆ' ಎಂದು ರಾಗ ತೆಗೆದ. ಅವನು ಹೇಳಿದ ಧಾಟಿಯಲ್ಲಿ, ರಾತ್ರಿ ಇಡೀ ಹುಡುಕಿದವರ ದಣಿವು ಕಾಣಲಿಲ್ಲ. ಈ ದಿನಗಳಲ್ಲಿ ಸುರೇಶ ಹೆಚ್ಚು ಹೆಚ್ಚಾಗಿ ಮನೆಗೆ ಬರುವುದು



ಪ್ರಾರಂಭಗೊಂಡಿತು. ವೈನಿ, ವೈನಿ ಎಂದು ಅವನು ಮೈ ಮುಟ್ಟಿ ಮಾತನಾಡುವದು ಹೆಂಡತಿಗೆ ಇಷ್ಟವಾಗುವದು ಕಂಡಿತು. ಒಂದು ರಾತ್ರಿ, ಹೀಗೆಯೇ ನದಿಯ ತಟದಲ್ಲಿ ಅರ್ಧನಿದ್ದೆಯಿಂದ ಎಚ್ಚರಗೊಂಡು ಮನೆಗೆ ಬಂದ. ಬಂದು, ಮನೆಯ ಚಡಿಯೇರಿ, ಮಲಗಿದ ಹೆಂಡತಿಯನ್ನು ಎಬ್ಬಿಸುವದು ಯಾಕೆಂದು ಕುಳಿತೇ ಇದ್ದ. ಬೆಳಗು ಇನ್ನೂ ಪ್ರಾರಂಭ ಗೊಂಡಿರಲಿಲ್ಲ. ಕತ್ತಲಿರುವಂತೆ ಸುರೇಶ ಮನೆಯ ಮೆಟ್ಟಿಲಿಳಿದು ಹೋದ.

ಒಳ್ಳೆಯವನು ಬಂದ ಹಾಗೇ ಮತ್ತೆ ನದಿಯ ತಟಕ್ಕೆ ಹೋದ. ಆ ದಿನದ ನಂತರ ಆತ ಮನೆಗೆ ಬರುವದನ್ನು ನಿಲ್ಲಿಸಿದ. ಹೊಟ್ಟೆಗಾಗಿ ಆತ ಯಾರು ಯಾವ ಕೆಲಸ ಹೇಳಿದರೂ ಮಾಡುತ್ತಿದ್ದ. ಸಾಕೆನಿಸಿದಾಗ ಸಾರ್ವ ಜನಿಕ ಲೈಬ್ರರಿಯಲ್ಲಿ ಕುಳಿತು ಕೊಂಡು ಏನಾದರೂ ಒಂದು ಓದುತ್ತಲೇ ಇರುತ್ತಿದ್ದ. ಒಂದು ದಿನ ಹೆಂಡತಿ, 'ನಾನೀಗ ಗರ್ಭಿಣಿ, ಮನೆಗೆ ಬರಬಾರದೇ' ಎಂದು ರಂಪ ಎಬ್ಬಿಸಿದಳು. 'ಯಾರಿಂದ' ಎಂದು ಕೇಳಬೇಕೆನಿಸಿತು. ಆದರೆ ಹಾಗೆ ಅವಮಾನಿಸುವದು ಉಚಿತವಲ್ಲ ಎಂದು ಸುಮ್ಮನಾದ. ಆದರೆ 'ಮನುಷ್ಯರೆಂದರೆ ಒಂದಕ್ಕೆ ಎರಡಾಗುವ ಕ್ಯಾನ್ಸರಿನ ಕಣ' ಎಂದ. 'ಭೂಮಿಗೆ ಅದರದ್ದೇ ಆದ ಒಂದು ಮಿತಿ ಇದೆ, ಆಕಾಶಕ್ಕೆ ಹಾಗಲ್ಲ ಅನಂತ ಸಾಧ್ಯತೆ' ಅಂದ. ಆದರ ಹಿಂದೆಯೇ ಅವನು ಓದಿದ ಸಾವಿರಾರು ಪುಸ್ತಕಗಳ, ನೂರಾರು ವಾಕ್ಯಗಳು, ಪ್ಯಾರಾಗಳು, ಪುಟಗಳು ಇವನ ಬಾಯಿಂದ ಉದುರ ತೊಡಗಿತು. ಜನ 'ಅವನಿಗೆ ಹುಚ್ಚು ಹಿಡಿಯಿತು' ಅಂದರು.

ಹೀಗೆಯೇ ಮಾತನಾಡುತ್ತಾ, ಒಳ್ಳೆಯವ
ಊರೂರು ಅಲೆಯತೊಡಗಿದ. ಅವ
ಬಾಯಿಂದ ಉದುರುವ ನೂರಾರು ಮಾ
ಗಳನ್ನು ಕೇಳಲಿಕ್ಕೆಂದೇ ಜನ ಅವನನ್ನು ಸು
ಗಟ್ಟುತ್ತಿದ್ದರು. ಮಾತು ಆತನನ್ನು ಎ
ಹೋದರೂ ಬೆನ್ನುಹತ್ತುತ್ತಿತ್ತು. ತನ್ನ ಮಾತಿನಿಂ
ತಪ್ಪಿಸಿಕೊಳ್ಳಲಿಕ್ಕಾಗಿ ಎನ್ನುವಂತೆ ಆತ ಒಂ
ಊರಿಂದ ಮತ್ತೊಂದು ಊರಿಗೆ ಪಲಾಯ
ಗೈಯುತ್ತಿದ್ದ.

ಒಂದು ದಿನ, ಯಾವುದೋ ಒಂದು ಊ
ನಲ್ಲಿ ಅವನಿಗೆ ಮಾತೇ ಹೊಳೆಯಲಿಲ್ಲ. ತಾನೇ
ಹಾಗೆ ಸರ್ಕಲ್ಲಿನ ಪ್ರತಿಮೆಯಂತೆ ನಿಂತಿದ್ದೇ
ಯಾಕೆ ತನ್ನ ಮೈ ಇಷ್ಟು ನಾತ ಹೊಡೆಯುತ್ತಿ
ಅನ್ನಿಸಿತು. ಅಲ್ಲಿಯೇ ಇದ್ದ ಬೋರ್‌ವೆಲ್‌ಗೆ ತ
ಕೊಟ್ಟು ಸ್ನಾನ ಮಾಡಿದ. ಅಂಗಡಿಗೆ ಹೋ
ಒಂದು ಜೊತೆ ಬಟ್ಟೆ ಕೊಂಡ. ನಂತರ ಬ
ಹಿಡಿದು ತಿರುಗಿ ಊರಿಗೆ ಬಂದ.

ಬಂದು ನೋಡಿದರೆ, ಊರು ಇ
ಹಾಗೆಯೇ ಇತ್ತು. ಮನೆಗೆ ಹೋಗಿ ನೋಡಿದ
ಮನೆಗೆ ಬೀಗ ಹಾಕಿತ್ತು. ಒಳ್ಳೆಯನಿಗೆ ಹೆಂಡತಿ
ಮೇಲೆ ಯಾಕೋ ಪಾಪ ಅನ್ನಿಸಿತು. ಆಕೆ ತನ
ಯಾವತ್ತೂ ತೊಂದರೆ ಮಾಡಲಿಲ್ಲ ಎಂ
ಕೂಡಾ ಅನ್ನಿಸಿತು.

ನಂತರ ಒಳ್ಳೆಯವನ ದಿನಗಳು ಒಂ
ಕ್ರಮಬದ್ಧತೆಗೆ ಸಿಲುಕಿಕೊಂಡುಬಿಟ್ಟವು. ತಿಂಗ
ತಿಂಗಳು ಬ್ಯಾಂಕಿಗೆ ಹೋಗಿ, ಆತ ಬಡ್ಡಿ ತೆಗೆ
ಕೊಂಡು ಬರುತ್ತಿದ್ದ. ಅರ್ಧವನ್ನು ತೆಗೆ
ಹೆಂಡತಿಯ ಹೆಸರಿನಲ್ಲಿ ಇರಿಸುತ್ತಿದ್ದ. ಉಳಿದ
ಅವನ ಖರ್ಚಿಗೆ ಹೆಚ್ಚಾಗುತ್ತಿತ್ತು. ಹಣ ಉ
ದಾಗಲೆಲ್ಲ, ಆತ ಏನಾದರೂ ಒಂದು ತಿಂ
ಯನ್ನು ಕೊಂಡು, ಅಲ್ಲೆಲ್ಲಾ ಆಡಿಕೊಂಡಿರುತ್ತಿ
ಮಕ್ಕಳಿಗೆ ಕೊಟ್ಟುಬಿಡುತ್ತಿದ್ದ. ನಂತರ ಯಾ
ದಾದರೂ ಒಂದು ಪುಸ್ತಕ ಹಿಡಿದು, ಅ
ಸಮುದ್ರದ ದಂಡೆಯ ಮೇಲೆ ಕುಳಿ

ಕಳೆಯುತ್ತಿದ್ದ. ಕೆಲವೊಮ್ಮೆ ಸಮುದ್ರದ ತೆರೆಯನ್ನು ಲೆಕ್ಕ ಹಾಕುತ್ತಿದ್ದ-ಒಂದು, ಎರಡು, ಮೂರು ಎಂದು.

ಹಾಗೆಯೇ ಒಂದು ರಾತ್ರಿ ಆತ ಸಮುದ್ರದ ದಂಡೆಯಲ್ಲಿ ಕುಳಿತಿದ್ದಾಗ, ಒಂದು ಘಟನೆ ನಡೆಯಿತು. ದಿನದ ಬಹುಪಾಲು, ನಗರದ ವಿವಿಧೆಡೆಯಲ್ಲಿ ಇರುತ್ತಿದ್ದ ಹುಚ್ಚಿಯೊಬ್ಬಳು ಆ ಸಮುದ್ರದ ದಂಡೆಗೆ ಬಂದು ನಿಂತಳು. ನಂತರ ಚಂದ್ರನ ಬೆಳಕಲ್ಲಿ ಆಕೆ ಬೆತ್ತಲಾಗಿ ಸ್ನಾನ ಮಾಡತೊಡಗಿದಳು.

ಆ ಇಡಿಯ ಚಿತ್ರ, ಒಳ್ಳೆಯವನ ಊಹೆಗೂ ಮೀರಿದ್ದಾಗಿತ್ತು. ಅಂಥ ಒಂದು ಸೌಂದರ್ಯವನ್ನು, ಆ ತನಕ, ಆತ ನೋಡೇ ಇರಲಿಲ್ಲ. ಒಳ್ಳೆಯವನು ನಿಧಾನವಾಗಿ ನಡೆದು ಅವಳನ್ನು ತಬ್ಬಿಕೊಂಡ. ಅವರಿಬ್ಬರ ಮಿಲನಕ್ಕೆ ಸಮುದ್ರದ ದಂಡೆ ಮತ್ತು ತೆರೆಗಳು ಸಾಕ್ಷಿಯಾಗಿದ್ದವು.

ಇದು ತುಂಬಾ ದಿನ ಮುಂದುವರಿಯಿತು. ಒಂದುದಿನ ಅವಳು, ಆ ಊರಿಂದ ಕಾಣೆಯಾದಳು. 'ಅವಳ ಹೆಸರಾದರೂ ಏನಾಗಿತ್ತು, ತಾನು ಯಾವತ್ತೂ ಕೇಳಲೇ ಇಲ್ಲವಲ್ಲ' ಎಂದು ಒಳ್ಳೆಯವನಿಗೆ ಬೇಸರವಾಯಿತು. ಮತ್ತೆ ಒಳ್ಳೆಯವನು ಏಕಾಂಗಿಯಾದ. ರಾತ್ರಿಯಾದರೆ ಸಾಕು, ಬೆತ್ತಲೆ ಹೆಣ್ಣೊಂದು ಆ ಸಮುದ್ರದಲ್ಲಿ ಸ್ನಾನ ಮಾಡುತ್ತಿರುವಂತೆ ತೋರುತ್ತಿತ್ತು. ಹತ್ತಿರ ಹೋದರೆ ಕೈಗೆ ಕೇವಲ ಮರಳು ಸಿಗುತ್ತಿತ್ತು. ಅವಳು ಸಿಗದಿದ್ದ ನಿರಾಸೆ ಅವನನ್ನು ಮತ್ತಷ್ಟು ಖಿನ್ನವಾಗಿಸುತ್ತಿತ್ತು. ಈ ಖಿನ್ನತೆಯಲ್ಲಿಯೇ ಒಂದು ದಿನ ನಗ್ನವಾದ ಒಳ್ಳೆಯವನು, ಬೆತ್ತಲೆ ಹೆಣ್ಣಿನ ನೆರಳ ಬೆನ್ನುಹತ್ತಿ, ಸಮುದ್ರದಾಳಕ್ಕೆ ನಡೆಯತೊಡಗಿದ. ಪ್ರತಿ ಒಂದು ಹೆಜ್ಜೆಗೂ, ಸುಂದರಿ ಕೈಗೆ ಸಿಕ್ಕಿ, ಸಿಗದಂತೆ ತಪ್ಪಿಸಿಕೊಳ್ಳುತ್ತಿದ್ದಳು. ಇಡೀ ದಂಡೆ ಸಾಕ್ಷಿ ಆಗಿರುವಂತೆ, ಒಳ್ಳೆಯವನು ಅವಳ ಬೆನ್ನುಹತ್ತಿ ಸಮುದ್ರದಾಳಕ್ಕೆ ನಡೆಯತೊಡಗಿದ.





ಕತೆ ಎಂದರೆ ಮನುಷ್ಯನ ಮಿತಿ ಮತ್ತು ಶಾಶ್ವತೆ

— ಅಶೋಕ ಹೆಗಡೆ



ಸುರೇಶ ಪಾಟೀಲ

# ಅಳುವ ಕಡಲೊಳು...

ಎಂದಿನಂತೆ ಊರೊಂದಕ್ಕೆ ಸರ್ಕೀಟು ಹೋದ ರೆವಿನ್ಯೂ ಇಲಾಖೆಯ ಸರ್ಕಲ್ ಇನ್ಸ್‌ಪೆಕ್ಟರ್ ಹನುಮಂತರಾಯರು, ಸಂಜೆ ಆರಾದರೂ ಬರದಿದ್ದಾಗ ಹೆಂಡತಿ ಸೀತಾಬಾಯಿಗೆ ಸಣ್ಣಗೆ ಆತಂಕ ಶುರುವಾಯಿತು. ತಿಂಗಳಲ್ಲಿ ಹತ್ತು ಹದಿನೈದು ದಿನ ಈ ಸರ್ಕೀಟು ಇದ್ದದ್ದೆ. ಅಫೀಸು ಜೀಪೋ, ಸ್ನೇಹಿತರ ಗಾಡಿಯೊ, ಕೊನೆಗೆ ಸರ್ಕಾರೀ ಬಸ್ಸೊ, ಹೇಗೆ ಹೋದರೂ ಸಂಜೆ ಆರರೊಳಗೆ ಮನೆಗೆ ಮರಳುವುದು ಅವರೇ ಅನೂಚಾನವಾಗಿ ರೂಢಿಸಿಕೊಂಡ ಕ್ರಮ. ಒಂದು ಪಕ್ಷ ಅಲ್ಲೆಲ್ಲಾದರೂ ಉಳಿಯುವುದಿದ್ದರೆ ಮುಂಚಿತವೆ ತಿಳಿಸುವರು. ಇಲ್ಲವಾದರೆ ಅಂದಿನ ಸಂಜೆ ಆರರೊಳಗೆ ಯಾವ ರೀತಿಯಲ್ಲಾದರೂ ಸಂದೇಶ ಬರುವುದು. ಹೇಳದೆ, ಕೇಳದೆ ತಡಮಾಡಿದ್ದು ಇದೇ ಮೊದಲು.

ರಾಯರು ದರ್ಪಿಷ್ಠರೆಂದು ಖ್ಯಾತಿ. ಅಷ್ಟೇ ಮಂದಿಯನ್ನೂ ಹಚ್ಚಿಕೊಳ್ಳುವರು. ಸಾಕಷ್ಟು ಮೇಲು ಸಂಪಾದನೆ ಉಂಟಂತೆ. ನಿರಕ್ಷರಿಯೂ, ಸಂಪ್ರದಾಯದ ವಾತಾವರಣದಲ್ಲಿ ಬೆಳೆದವಳೂ ಆದ ಹೆಂಡತಿಗೆ ಗಂಡನ ಆಳ-ಅಗಲ ತಿಳಿಯದು. ತಿಳಿಯುವಾಸಕ್ತಿಯೂ ಇಲ್ಲ. ಮನೆಯಲ್ಲಿ ಹೆಚ್ಚು ಮಾತುಕತೆ ಇಲ್ಲದಿದ್ದರೂ ರಾಯರಲ್ಲಿ ಪ್ರೀತಿ-ವಿಶ್ವಾಸಕ್ಕೆ ಕೊರತೆ ಇಲ್ಲ. ಆದರದನ್ನು ತೋರಿಸುವ ಪರಿ ಬೇರೆ. ಅವರಿಗೆ ಮೂವರು ಮಕ್ಕಳು. ಮೊದಲನೆಯಾತ ಬಾಲಕೃಷ್ಣ. ಹದಿನೆಂಟಾಗಿರಬೇಕು ಅವನಿಗೆ. ಕಾಲೇಜು ಸೇರಿದ್ದಾನೆ. ಎರಡನೆಯಾತ ಅನಂತ. ಹೈಸ್ಕೂಲ್ ಹುಡುಗ. ಕೊನೆಯದೆ ಹೆಣ್ಣುಮಗು. ಬಾಲಕೃಷ್ಣನಿಗೆ ಇದ್ದುದರಲ್ಲಿ ತಿಳುವಳಿಕೆ ಇದೆ. ತಂದೆಯೂ ಅದನ್ನು ಬಲ್ಲರು. ಹಾಗೆಂದು ಅವನಿಗೇನೂ ಜವಾಬ್ದಾರಿಯನ್ನು ವಹಿಸಿಲ್ಲ. ತಂದೆಯ ಚಟುವಟಿಕೆ, ಸಂಪಾದನೆ, ವಿನಿಯೋಗಗಳ ವಿಚಾರದಲ್ಲಿ ತಾಯಿಯಂತೆ ಮಗನೂ ಅಜ್ಞಾನಿ.

ಗಡಿಯಾರದ ಮುಳ್ಳು ಆರರಿಂದ ಏಳಕ್ಕೆ ಸರಿಯಿತು. ಏಳಿದ್ದದ್ದು ಎಂಟೂ ಆಯಿತು. ಎಂಟರಿಂದ... ಒಂಭತ್ತು... ತಡಮಾಡುವುದು ಅವರ ಜಾಯಮಾನವಲ್ಲ. ಕ್ಷಣಗಳುರುಳಿದಂತೆ ಸೀತಾಬಾಯಿಯ ಎದೆಬಡಿತ ಜೋರಾಗಿ, ತರತರದ ವಿಚಾರ ಮೂಡತೊಡಗಿದವು. ಬಾಲಕೃಷ್ಣನೂ ತಳಮಳಗೊಂಡ. ಉಳಿದೆರಡಕ್ಕೊ! ಅವುಗಳದೆ ಲೋಕ. ಹಸಿವಾಗುತ್ತಲೆ ಉಂಡು, ತೂಕಡಿಕೆ ಬರುತ್ತಲೂ ಮಲಗಿದವು. ಏನಾದರೂ ವಿಷಯ ತಿಳಿದೀತೆಂದು ತಾಯಿ ಬಾಲಕೃಷ್ಣನನ್ನು ಸಹೋದ್ಯೋಗಿ-ಮೇಲಧಿಕಾರಿಗಳ ಮನೆಗೆ ಅಟ್ಟಿದಳು. ಪ್ರಯೋಜನ ಆಗಲಿಲ್ಲ. ಹೌಹಾರಿದ ಇಬ್ಬರೂ ಕೊನೆಗೆ ಬಾಗಿಲುಮುಚ್ಚಿ ಕಾಯುತ್ತ, ತೂಕಡಿಸುತ್ತ, ಧೇನಿಸುತ್ತ ಕುಳಿತರು; ಕುಳಿತಲ್ಲೇ ಮಲಗಿದರು. ಮಲಗಿದರೂ ನಡುನಡುವೆ ಎಚ್ಚರಾಗು




ವುದು. ಹೀಗೇ ರಾತ್ರಿ ಹನ್ನೆರಡಾಗಿರಬೇಕು. ಆಗ ಇದ್ದಕ್ಕಿದ್ದಂತೆ ಜೋರಾಗಿ ಬಾಗಿಲು ಬಡಿದ ಸದ್ದು. ಆ ಸದ್ದು ಕೇಳಿದ್ದೆ, ಹೊಟ್ಟೆಯಲ್ಲಿ ರುಮ್ ಅಂದಂತಾಗಿ, ಎದ್ದೆನೊ ಬಿದ್ದೆನೊ ಎಂಬ ಖಬರಿಲ್ಲದೆ ತಡಬಡಿಸಿ ಓಡಿಹೋಗಿ ಸೀತಾಬಾಯಿ ಬಾಗಿಲು ತೆರೆದರೆ, ನಾಲ್ಕು ಜನ ಹಳ್ಳಿಗರು ಎಚ್ಚರ ತಪ್ಪಿದ ಹನುಮಂತರಾಯರನ್ನು ಹೊತ್ತುತಂದಿದ್ದಾರೆ. ಈಕೆ ಏನು ಕೇಳುವುದಕ್ಕೂ ಮುನ್ನ, ಬಂದ ಆ ಮಂದಿಯೇ ರಾಯರನ್ನು ಮಂಚದ ಮೇಲೆ ಮಲಗಿಸಿ 'ನಮ್ಮೂರ ರಸ್ತಾದಾಗ ಬಿದ್ದಿದ್ದರು, ಗುರ್ತುಹಿಡಿದು ತಂದೀವಿ' ಎಂದು, ಬಂದಷ್ಟೇ ಅವಸರದಲ್ಲೋಡಿದರು. ಅಪರಾತ್ರಿಯಲ್ಲವೆ?

ಮಂಪರು, ಗಾಬರಿ; ಮೇಲಾಗಿ ಸಮಯಪ್ರಜ್ಞೆ ಇಲ್ಲದ ಸೀತಾಬಾಯಿಗೆ, ಅದೇಕೆ ಬಾಲಕೃಷ್ಣನಿಗೂ ಆ ಹೊತ್ತು, ಅವರನ್ನು ನಿಲ್ಲಿಸಿ, 'ನಿಮ್ಮದು ಯಾವ ಊರು? ಇವರು ಬಿದ್ದದ್ದೆಲ್ಲಿ? ಎಷ್ಟೊತ್ತಿಗೆ ನೋಡಿದಿರಿ?' ಎಚ್ಚಾವತ್ ವಿಚಾರಿಸಲಾಗಲಿಲ್ಲ. ಆ ಮಂದಿಯೊ ಸ್ವಲ್ಪ ಹುಂಬರಂತೆ ಇದ್ದಿತು. ಹೆಂಡತಿ, ಮಲಗಿದ್ದ ಗಂಡನ ಬಾಯಿ ವಾಸನೆ ನೋಡಿದಳು. ಊಹೂಂ.... ಮೈಮೇಲೆ ಒಂದೆರಡು ಕಡೆ ಸ್ವಲ್ಪ ರಕ್ತದ ಕಲೆ... ಹೊಡೆತದ್ದೊ, ತರಚಿದ ಗಾಯವೊ? ತಿಳಿದ ಶೈತ್ಯೋಪಚಾರ ನಡೆಸುವುದರಲ್ಲಿ ಬೆಳಗಾಯಿತು. ರಾಯರೂ ಎಚ್ಚೆತ್ತರು. ಆದರೆ ಮಾತಿಲ್ಲ, ಕತೆಯಿಲ್ಲ. ಅಕ್ಕಪಕ್ಕದವರ ನೆರವಿನಿಂದ ಆಸ್ಪತ್ರೆಗೆ ಒಯ್ಯಲಾಯಿತು. 'ಮೆಂಟಲ್‌ಶಾಕ್ ಆದಂತಿದೆ. ನೋಡೋಣ ಇರ್ರಿ', ವೈದ್ಯರ ಉಪಚಾರ ಆರಂಭವಾಯಿತು.

ವಿಷಯ ಊರಲ್ಲಿ ಹಬ್ಬಿ, ನೋಡಲು ಸ್ನೇಹಿತರು, ಸಹೋದ್ಯೋಗಿಗಳು, ಸಂಬಂಧಿಕರು, ಅವರು-ಇವರು ಎಲ್ಲ ಬಂದರು. ಬಂದವರೆಲ್ಲ



ಸೀತಾಬಾಯಿಯನ್ನು ಕೂರಿಸಿಕೊಂಡು ಧೈರ್ಯ
ಹೇಳುವವರೆ. ಬರೀ ಧೈರ್ಯವಲ್ಲ; ಸಹಾಯದ
ಭರವಸೆ ಸಹ.

ದಿನಗಳೆಯತೊಡಗಿದವು. ವೈದ್ಯರ ಆರೈಕೆ
ಅಷ್ಟಾಗಿ ಫಲಿಸಲಿಲ್ಲ. ರಾಯರೇನೊ ಕಾಲಕಾಲಕ್ಕೆ
ಊಟ ನಿದ್ರಾದಿಗಳ ಪೂರೈಸುವರು. ಆದರೆ
ಮಾತಿಲ್ಲ, ಕತೆಯಿಲ್ಲ, ಸುಮ್ಮನೆ ಕಣ್ಣು ಪಿಳಿಕಿಸುತ್ತ
ಕುಳಿತುಬಿಡುವರು; ಅದೂ ಆಗಾಗ ಭಯಾನಕ
ಭಂಗಿಯಲ್ಲಿ! ಒಮ್ಮೊಮ್ಮೆ ಇದ್ದಕ್ಕಿದ್ದಂತೆ ಜೋರಾಗಿ
ಕೂಗುವದು, ಅಳುವರು, ಮಕ್ಕಳನ್ನು ಸುಮ್ಮನೆ
ಎಳೆದು, ರಪರಪ ಹೊಡೆಯುವರು.

ಹೆಂಡತಿ ದೇವರು-ದಿಂಡರ ಸೇವೆ ಆರಂಭಿ
ದಳು. ಜ್ಯೋತಿಷ್ಯ ಕೇಳಿದ್ದಾಯಿತು. ಭೂ
ಬಾಧೆಯೋ, ಮಾಟದ ಫಲವೊ ಇದ್ದೀತೆಂ
ಉತ್ತರ ಬಂತು. 'ಯಾರೊ ಹೊಡೆದು ಕೆಡ
ದ್ದಾರು', 'ರೊಕ್ಕದ ವ್ಯವಹಾರದಲ್ಲಿ ವ್ಯತ್ಯಾಸ
ಫಲವಿರಬೇಕು?', 'ಕೊಲೆಗಿಲೆ ನೋಡಿರಬೇಕು
ಅಂತಲೂ ಮಂದಿ ಆಡಿಕೊಂಡಿತು. ಒಬ್ಬ
ರಂತೂ ಸೀತಾಬಾಯಿಯ ಎದುರೇ 'ಅಂಜಿ
ನಾಚಿಕೆ ಇಲ್ದೆ ರೊಕ್ಕ ಸಿಕ್ಕದಂತ ತಗೊಂಡು
ಸಹಾಯದ ನೆಪದಾಗ ಅದನ್ನು ಬಡ್ಡಿಗೆ ಬಿಟ್ಟ
ದಕ್ಕಿತೇನು? ಇನ್ನೇನಾದೀತು' ಅನ್ನಲೂ ಹಿಂಜರಿ
ಲಿಲ್ಲ. ಯಾವುದು ನಿಜವೊ, ಯಾವುದು ಸುಳ್ಳೊ
ಒಂದೂ ಲೆಕ್ಕ ಅವಳಲ್ಲಿಲ್ಲ. ಕೇಳಿ ಗಳಗಳ
ಅತ್ತಳು.

ಮೊದಲ ತಿಂಗಳು, ಬಂದು ಸಮಾಧಾ
ಹೇಳುವವರ ಸಂಖ್ಯೆ ಹೆಚ್ಚಿತ್ತು. ಕೆಲವರಂತು
ವಾರಕ್ಕೆರಡು ಸಲ ಬಂದಿದ್ದರು. ಆದಾಗ
ಅಸಹಜ ಸ್ಥಿತಿಯೇ ಸಹಜವಾದಾಗ, ದಿ
ಸಾಯುವವರಿಗೆ ಅಳುವವರು ಯಾರು
ನ್ನುಂದ ಬಗಿ ಹರಿಯೊ ಕೇಸಲ್ಲರೀ ಇದ
ಸು ಮಿರಜ್‌ಕೊ ಬೆಂಗಳೂರಿಗೊ
ಕೊಂಡ್ಹೋಗ್ರಿ', ಕೊನೆಗೆ ಡಾಕ್ಟರರೂ ಅಂ
ಬಿಟ್ಟರು. ಅಲ್ಲಿಂದ ಗಾವಟಿ ಔಷ

ಆಯುರ್ವೇದ ನಡೆದವು. ಅಚನೂರಿಗೊ ಗಾಣ ಗಾಪುರಕ್ಕೊ ಹೋಗಿ ಬರುವಂತೆ ಅನೇಕರು ಸೂಚಿಸಿದರು.

ದಿನಗಳೆದಂತೆ ಸೀತಾಬಾಯಿಗೆ ದಿಕ್ಕು ತೋಚದಾಯಿತು. ಇಂಥ ಹೊತ್ತು ನೆಂಟರಿಷ್ಟರು ಬಂದು ಒಂದು ಸರಿ ದಾರಿ ತೋರಿಸಿಯಾರೆ? ಮತ್ತೆ ಸ್ವಲ್ಪ ಕಾಲ ಶಬರಿಯಾಗಿ ಕಾದದ್ದಾಯಿತು. ಅವರೆಲ್ಲ ಎಷ್ಟು ದಿನ ಬಂದಾರು? ಆಮೇಲೆ ನ್ನಿಸಿತ್ತು, ಹೇಳಿಕಳಿಸದೆ ಅವರಾಗಿ ಬಂದಾರು ಹೇಗೆ? ಹಾಗಂತ ಹೇಳಿಕಳಿಸುವುದೂ ಕಷ್ಟವೆ. ಕೈ ಹಾಕಿದರೆ ಎಷ್ಟು ಭಾರದ್ದೊ ಈ ವ್ಯವಹಾರ. ಇರಲಿ, ಇಂದಿಲ್ಲ ನಾಳೆ, ಆ ದೇವರೆ ಕಣ್ತೆರೆದು ದಾರಿ ತೋರಿಸಬಹುದು. ಹೀಗೆಂದುಕೊಳ್ಳುತ್ತಲೆ ಆಕೆ ದಿನ ತಳ್ಳತೊಡಗಿದ್ದಳು.

ಆದಾಗ್ಯೂ ಒಳಗೊಳಗೇ ಬಲವಾದ ನಂಬಿಕೆ ಇತ್ತು. ಅಂಥಾ ಸ್ಥಿತಿ ಬಂದರೆ, ಹಿಂದೆ ಮುಂದೆ ನೋಡದೆ ಯಾವ ಸಹಾಯಕ್ಕೂ ನುಗ್ಗುವ ಅಂತಃಕರಣದ ಬಳಗ ತನ್ನದು. ರಾಯರ ಋಣ ತಿಂದವರು ಸುಮ್ಮನೆ ಬಿಟ್ಟಾರೆ?

ಬಾಜೂ ಮನೆಯ ಗುರವ್ವನೊಂದಿಗೆ ಮೊನ್ನೆ ಸಹಜೇತ ಮಾತನಾಡುತ್ತ ಇದ್ದಾಗ ಸೀತಾ ಬಾಯಿಯ ಬಾಯಿಯಿಂದ ಇದೇ ಘಮಂಡಿಯ ಮಾತು ಬಂದಿತ್ತು. ಕೇಳಿ ಗುರವ್ವ ತೆಪ್ಪಗಿದ್ದಾಳೆಯೆ? 'ಅಯ್ಯೋ ಏನ್ಹೇಳ್ತೀರಿ ಬಿಡ್ರಿ, ಮತ್ನಾ ಹೀಂಗಂತೀನೆಂತ ಸಿಟ್ಮಾಡ್ಕೋಬ್ಯಾಡ್ರಿ', ಆಕೆ ಹೇಳಿಬಿಟ್ಟಳು, 'ಏನಿದ್ರೂ ನಿಮ್ಮ ಜಾತಿಯೊಳಗೆ ಹಚ್ಚಿಕೊಳ್ಳೋ ಮಂದಿ ಕಡಿಮಿ.'

'ಹಾಂಗ್ಹೇಳ್ಳಿಕ್ಕೆ ಬರೂದಿಲ್ಲೇಳಬೆ', ಸೀತಾ ಬಾಯಿ ಒಪ್ಪಲಿಲ್ಲ. 'ಎಲ್ಲಾ ಜಾತಿಯೊಳಗೂ ಎಲ್ಲಾ ತರದವರಿರತಾರೆ, ಅಲ್ದೆ ನಮ್ಮ ಜಾತಿಯೊಳಗಿದು ಎದ್ದು ಕಾಣಲಿಕ್ಕೆ ಪರುಶರಾಮ ದೇವರ ಶಾಪನೂ ಕಾರಣಂತ'

ಗುರವ್ವನಿಗುತ್ತರಿಸಿದಷ್ಟು ಪರಿಸ್ಥಿತಿ ಸರಳ ಇರಲಿಲ್ಲ. ಸೀತಾಬಾಯಿಗೆ ಕ್ರಮೇಣ ಭವಿಷ್ಯ ಕುರಿತ ದಿಗಿಲು, ಚಡಪಡಿಕೆ ಹೆಚ್ಚಿ, ಒಂದು ದಿನ ಮಗನನ್ನು ಕೂರಿಸಿಕೊಂಡು, ಅಲ್ಲೋ ಮುಂದಿನದು ನೀನೇನು ಯೋಚ್ನಾ ಮಾಡೀದಿ? ಇನ್ನ ದಿನದ ಸಂಸಾರ ತೂಗಿಸೂದೆ ಕಷ್ಟ; ಮತ್ತಿವರನ್ನೂ ಹೀಂಗೇ ಬಿಡಲಿಕ್ಕಾದೀತೇನು? ಮನೀ ವಾತಾವರಣನೂ ದಿನದಿನಕ್ಕೆ ಹದಗೆಡಲಿಕ್ಕಿ ಹತ್ತೇದ. ಏನೂ ತಿಳಿಯೂದಿಲ್ಲ, ಆಗೂದಿಲ್ಲಂತ ಎಷ್ಟು ದಿನ ಸುಮ್ಮ ಕೂಡೂದು? ನಾನೊ, ಮನೀ ಬಿಟ್ಟು ಒಂದ ಹೆಜ್ಜೆ ಇಡೂವಾಕಿ ಅಲ್ಲ, ಈಗ ಎಲ್ಲಾ ಹೊರೆ ನಿನ್ನ ಮ್ಯಾಲೇ ಬಿದ್ದದ. ಭಾರ ಆದರೂ ನಿರ್ವಾಹ ಇಲ್ಲ, ಯಾರನ್ನ ಕಂಡು ಏನು ವ್ಯವಸ್ಥೆ ಮಾಡ್ತೀ ನೋಡು, ಎಂದು ಕೇಳಿದಳು. ಬಳಿಕ ಇಬ್ಬರೂ ಕುಳಿತು ಬಹಳ ಹೊತ್ತು ಮಾತುಕತೆ ನಡೆಸಿದರು. ಅಂಥ ಹೊತ್ತು ತತ್ಕಾಲಕ್ಕೆ ಅವರಿಗೆ ನೆನಪಾದದ್ದು ಸೋನಕ್ಕ ಮತ್ತಾಕೆಯ ಗಂಡ. ಸೀತಾಬಾಯಿಯ ಅಕ್ಕ, ಭಾವ ಇವರು, ಇಲ್ಲಿಂದ ಐವತ್ತು-ಅರವತ್ತು ಮೈಲಿ ದೂರದ ಇನ್ನೊಂದು ಪಟ್ಟಣದಲ್ಲಿದ್ದಾರೆ. ಅವರ ಮೇಲೆ ಸೀತಾ ಬಾಯಿಗೆ ವಿಶೇಷ ಶ್ರದ್ಧೆ, ಮುಂಚೆಯಿಂದಲೂ ಅಕ್ಕನೊಡನಿದ್ದ ಒಡನಾಟ-ವಾತ್ಸಲ್ಯಗಳೂ ಇದಕ್ಕೆ ಕಾರಣ, ಅಲ್ಲದೆ ಹನುಮಂತರಾಯರಿಂದ ಈ ಕುಟುಂಬ ಸಾಕಷ್ಟು ನೆರವು ಪಡೆದದ್ದಿದೆ. ಮಗಳು ಪರಿಮಳಾಳ ಮದುವೆ, ವೆಂಕಟೇಶನ ಓದಿಗೆ ರಾಯರು ನೀಡಿದ ನೆರವನ್ನು ಸೋನಕ್ಕ, ಹತ್ತಾರು ಸಾರಿಯಾದರೂ ಹೇಳಿಕೊಂಡಿದ್ದಾಳೆ. ಅಕ್ಕನ ಗಂಡ ರಂಗನಾಥರಾಯರೂ ಅಷ್ಟೆ. ಹನುಮಂತ ರಾಯರಿಗೊದಗಿದ ಅವಸ್ಥೆ ತಿಳಿದುದೆ ಅಕ್ಕನೊಂದಿಗೆ ಅಡರಾಸಿ ಓಡಿ ಬಂದು ಕಣ್ಣೀರು ಸುರಿಸಿದ್ದರು.

ಮತ್ತು ಹೆಚ್ಚಲ್ಲ; ಸಹಸಾ ಅವರ ಮಾತು ಕಮ್ಮಿ. 'ಆದರ ಭಾಳವ್ಯವಹಾರಸ್ಥ' ಎಂದು ಇವರನ್ನು ಕುರಿತು ಒಂದೆರಡು ಬಾರಿ ತನ್ನ ಪತಿ ಅಂದ ನೆನಪು-ಈಗ ಅವರು ಒಂದೇ ಮಾತು ಹೇಳಿದ್ದರು. 'ಈಗಳಕೋತ ಕೂಡಬ್ಯಾಡ ಸೀತಾ

ನಾಪಿಲ್ಲೇನು? ಇಂಥಾದ್ದು ಮಾಡಂತ ಹೇಳು, ಮಾಡ್ತೀವಿ. ರಾಯರಿಗಲ್ಲಿ ಇನ್ಯಾರಿಗೆ ಮಾಡ್ಬೇಕು.'

ಇಂಥ ಹೊತ್ತು ಇವರು ತಾನೆ ನೆನಪಾಗ ಬೇಕು? ಅದರಂತೆ ಬಾಲಕೃಷ್ಣನೀಗ ರಂಗನಾಥ ರಾಯರಲ್ಲಿಗೆ ಹೋಗಿ, ತಮ್ಮ ಭವಿಷ್ಯ ಕುರಿತ ಚರ್ಚೆ, ಮಾರ್ಗದರ್ಶನ ಮತ್ತು ಕೈಲಾದ ಸಹಾಯ ಕೋರುವುದೆಂಬ ತೀರ್ಮಾನವಾಯಿತು. ಒಡನೆ ಒಳ್ಳೆಯ ಪ್ರಯಾಣ ಮುಹೂರ್ತ ತೆಗೆಸಿದ ಸೀತಾಬಾಯಿ, ಮಗ ಹೊರಟು ನಿಂತಾಗ, ಆ ಸ್ಥಿತಿಯಲ್ಲೂ ತಮ್ಮ ಅಕ್ಕ, ಆಕೆಯ ಮಕ್ಕಳು ಮತ್ತು ಗಂಡರಿಗೆ ಪ್ರಿಯವಾದ ಉಂಡಿ-ಅವಲಕ್ಕಿ ಯಂಥ ತಿಂಡಿಗಳನ್ನು ಮಾಡಿ, ಕಟ್ಟಿಕೊಟ್ಟು, ಆಸೆ, ಭರವಸೆಗಳಿಂದ ಮಗನನ್ನು ಬೀಳ್ಕೊಟ್ಟಳು.

## 2



ಬಸ್ಸಿಳಿದುದೆ, ತೊಟ್ಟ ಬಿಳಿಯ ಪೈಜಾಮ, ಅಂಗಿಗಳ ಮೇಲಿನ ಧೂಳು ಜಾಡಿಸಿ, ಗಾಳಿಗೆ ಕೆದರಿದಂತಿದ್ದ ಕೂದಲುಗಳನ್ನು ಸರಿಪಡಿಸಿಕೊಂಡು, ತಕ್ಕಮಟ್ಟಿಗೆ ನೀಟಾಗಿ, ಬಾಲಕೃಷ್ಣ ವಯಸ್ಸಿಗೆ ಮೀರಿದ ಗಾಂಭೀರ್ಯದ ಭಂಗಿಯಲ್ಲಿ ನಿಧಾನಕ್ಕೆ ಪಟ್ಟಣದೊಳಕ್ಕೆ ಕೊಂಡೊಯ್ಯುವ ಕಲ್ಲು ಹರಸಿಯ ಹಾದಿ ಹಿಡಿದ. ಇದು ಹಳೆಯ ಪಟ್ಟಣವನ್ನು ಹಿಂಬಾಗಿಲಿಂದ ಸೇರುವ ರಸ್ತೆ, ಇದರ ಹಿಂದಿನದೆ ಹಳೆಯ ಓಣಿ. ಅಲ್ಲಿಯೆ ದೊಡ್ಡಮ್ಮನ ಮನೆ ಇದೆ. ಹಿಂದೆ ಇಲ್ಲಿಗೆ ಬಂದಾಗೆಲ್ಲ ಜೊತೆಗೆ ಅಪ್ಪನೊ, ಅಮ್ಮನೊ ಇರುತ್ತಿದ್ದರು. ಆಗಿನ ಸಂಭ್ರಮ-ಸ್ವಾಗತಗಳ ನೆನಪೂ ' ಆಯಿತು. ಊರೂ ಸಾಕಷ್ಟು ಬದಲಾಗಿದೆ. ತಾಲೂಕು ಸ್ಥಳವಲ್ಲವೆ? ಅದಕ್ಕೆ ತಕ್ಕಂತೆ ಜನಗಳ ವೇಷ-ಭೂಷಣ, ವ್ಯಕ್ತಿತ್ವ ಸಹ. ತಾನು ತೊಟ್ಟ ಡ್ರೆಸ್ಸೂ, ಅವರ ಸ್ಥಾನಮಾನವೂ ಇಲ್ಲಿ ಕಡಿಮೆ ಅವಂತಿದೆ.

ದೊಡ್ಡಮ್ಮನ ಮನೆಗೆ ಹೋದೊಡನೆ, ಅಲ್ಲಿ ಯಾರೊಟ್ಟಿಗೆ, ಹೇಗೆ ವ್ಯವಹರಿಸುವುದೆಂಬ ಪ್ರಶ್ನೆ

ಧುತ್ತೆಂದು ಇಣಕಿ, ಗೊಂದಲವಾಗಿ ಒಂದು ಕ್ಷ
ನಡುರಸ್ತೆಯಲ್ಲಿ ನಿಂತ. ತಾಯಿಯೊಡನೆ ಇದನ
ಚರ್ಚಿಸಿರಲಿಲ್ಲ. ಥತ್, ಏನಾಗಿಹೋಯಿತ
ಇದುವರೆಗೆ ತಂದೆಯೇ ನಿಂತು ಎ
ನಿಭಾಯಿಸುತ್ತಿದ್ದರು. ಒಂದೊಮ್ಮೆ ಇಂಥ ಸ್ಥಿ
ಬಂದಲ್ಲಿ ಹೇಗೆ ನಡೆದುಕೊಳ್ಳಬೇಕೆಂಬ ಸ
ಸೂಚನೆಯನ್ನೂ ಯಾರೂ ಕೊಟ್ಟವರಲ್ಲ
ಹೀಗೆ ಧೇನಿಸುತ್ತ ಕಾಲು ಎತ್ತಿಡುವಷ್ಟರಲ್ಲಿ ಮ
ಬಂದುಬಿಟ್ಟಿತ್ತು. ಹೊರಗೆ ಮಕ್ಕ
ಆಡಿಕೊಂಡಿದ್ದವು. 'ಅಮ್ಮಾ ಅಮ್ಮಾ ಕಿಟ್ಟಣ್ಣಾಂದ
ಅದರಲ್ಲೊಂದು ದೂರದಿಂದ ಕೂಗಿ ಹೇಳಿತ
ಆಗ ಅಲ್ಲಿದ್ದ ಉಳಿದ ಮಕ್ಕಳೂ ಹಾಡಿನಾಟ
ಭಂಗಿಯಲ್ಲಿ 'ಕಿಟ್ಟಣ್ಣಾಂದ, ಕಿಟ್ಟಣ್ಣಾಂದ' ಎಂ
ಒಂದೆರಡು ಸುತ್ತು ಕುಣಿದು ತೆಪ್ಪಗಾದವು.

ಒಳಹೋದಾಗ, ಕರೆಯಲು ಪಡಸಾ
ಯಲ್ಲಿ ಯಾರೂ ಇರಲಿಲ್ಲ. ಕುರ್ಚಿಗಳಿದ್ದರ
ಹಾಸಿದ ಚಾಪೆಯ ಮೇಲೆ ಕೈಯೂರಿ ಕುಳಿ
ಕೊಂಡು 'ಉಸ್ಸಪ್ಪಾ' ಎಂದು ನಿಟ್ಟುಸಿರುಬಿಟ್ಟ.

'ಬಾ, ಎಲ್ಲಾ ಆರಾಮಾ' ಎಷ್ಟೊ ಹೊ
ಮೇಲೆ ಹೊರಬಂದ ಪರಿಮಳಾ ಮಾತನಾ
ದಳು. ದೊಡ್ಡಮ್ಮ ಸೋನಕ್ಕನ ಹಿರಿಯ ಮಗಳಾ

'ಹೂನ್ರೀ, ಯಾಕ್ಯಾರೂ ಕಾಣಿಸ್ತಿಲ್ಲ?'

'ಅವ್ವ ಒಳಗಿದ್ದಾಳ. ವೆಂಕಟೇಶ ಇಲ್ಲೇ
ಇರಬೇಕು. ಅಪ್ಪ ಹೊರಹೋಗ್ಯಾರ'

'ಏನ್ರೀ ಅಕ್ಕ ಸಮಾಚಾರ' ಸುಮ್ಮನಿರದೆ
ಕೇಳಿದ.

'ಏನಿರ್ತದ, ಹಬ್ಬಕ್ಕೆ ಬಂದಿದ್ದೆ, ಇವ
ಬರುವವರಿದ್ದಾರ, ರಜಾ ತಗೊಂಡು, ದ
ಭಾರತದ ಟ್ರಿಪ್ ಹೋಗೂಣನಕೊಂಡೇವಿ.

'ಮತ್ತೇನು?' ಏನೂ ಇಲ್ಲ ಎಂಬುದ
ಗ್ರಹೀತ ಇಟ್ಟುಕೊಂಡೆ ಆಕೆ ಆತನನ್ನು ಸುವ
ಕೇಳಿದವಳು, ಉತ್ತರವನ್ನು ಬಯಸದೆ. 'ಆಯ
ಕೂತೀರು ಚಹಾ ತಗೊಂಬರ್ತೀನಿ' ಎಂ
ಒಳನಡೆದಳು.

ಸುಮ್ಮನೆ ಕುಳಿತವ ಸುತ್ತ ಕಣ್ಣಾಡಿಸಿದ, ಕಂಡ ಮನೆಯಾದರೂ ಹೊಸತೆಂಬಂತೆ. ಹಳೆಯ ಕಾಲದ, ತುಸು ದೊಡ್ಡ, ಮಜಬೂತಾದ ಮನೆ ಅಕಷ್ಟು ದುರಸ್ತಿಗಳನ್ನೂ ಕಂಡಿದೆ. ಬಣ್ಣವನ್ನಂತೂ ತೀರಾ ಇತ್ತೀಚೆ ಹಚ್ಚಿದಂತಿದೆ. ಅದರಂತೆ ಅಲಂಕರಣ ವ್ಯವಸ್ಥೆ ಕೂಡ.

ಕುಲಕರ್ಣಿ ಮನೆತನವಾದರೂ ದೊಡ್ಡಮ್ಮನ ಗಂಡ ರಂಗನಾಥರಾಯನಿಗೆ ಯಜಮಾನಿಕೆ ಬರುವುದರೊಳಗಾಗಿ ಮನೆ ಸಂಪುಷ್ಟಕ್ಕೆ ಬಂದಿತ್ತು. ಪರಂಪರಾಗತ ಅಂದಾದುಂದು, ಕುಳಿತುಣ್ಣೊ ಜೀವನ, ಮನೆಯಲ್ಲಿ ಮಕ್ಕಳ ಮುಂಜಿವೆ-ಮದುವೆ, ರೈತರ ವಶದಲ್ಲಿರುವ ಭೂಮಿ, ಇಂಥದ್ದರಲ್ಲಿ ಹೇಗೊ ದೊಡ್ಡಪ್ಪ ಸರ್ಕಾರಿ ಕೆಲಸ ಹಿಡಿದಿದ್ದರು. ಅದೊಂದನ್ನು ನೋಡಿಯೆ ತಾತ ಅವರಿಗೆ ಸೋನಕ್ಕನನ್ನು ಮದುವೆ ಮಾಡಿಕೊಟ್ಟಿದ್ದಂತೆ.

ತನ್ನ ಮನೆಯ ಪರಿಸ್ಥಿತಿ ಭಿನ್ನ. ಅಮ್ಮ ಮದುವೆಯಾಗಿಬಂದಾಗ ಏರಿಕೆಯ ಕಾಲ. ಅದೊಂದು ದರ್ಬಾರು. ಬರುಹೋಗುವ ಮಂದಿಗೆ, ಅವರ ಊಟೋಪಚಾರಕ್ಕೆ ಹೊತ್ತು-ಗೊತ್ತಿಲ್ಲ; ಹಾಗೆಯೆ ಎಲ್ಲಿಂದಲೊ ಸರಕು, ಸರಂಜಾಮು ಬಂದುಬೀಳುವವು. ಅಪ್ಪನಿಗೆ ಕಂದಾಯ ಇಲಾಖೆಯಲ್ಲಿ ನೌಕರಿ. ಅದಕ್ಕೆ ತಕ್ಕ ದರ್ಪ ಸೇರಿ, ಹಳ್ಳಿಯಲ್ಲಿ ಆಸ್ತಿಯೂ ಉಂಟು. ಇಷ್ಟೆ, ಅಪ್ಪ ಬಲು ಲಹರಿಯಾತ. ಯಾರ್‍ಯಾರಿಗೊ ಅವರು ಕೇಳದಿದ್ದರೂ ಹುಡುಕಿಕೊಂಡು ಹೋಗಿ ಸಹಾಯ ಮಾಡುವನು. ಎಲ್ಲ ರೀತಿಯ ಸಹಾಯ! ಬಹಳ ಜನ ಇದನ್ನು ನೆನಪಿಸಿಕೊಳ್ಳುತ್ತಾರೆ. ಅವರಿವರೇಕೆ ಸ್ವತಃ ಈ ದೊಡ್ಡಮ್ಮ, ದೊಡ್ಡಪ್ಪರೂ. ಈಗೇನೊ ಇವರ ಸ್ಥಿತಿ ಅಗದೀ ಅಂದ್ರಗದೀ ಸುಧಾರಿಸಿದಂತಿದೆ. ಆದರೆ ಅಪ್ಪನಿಗೆ ಕೊನೇತನಕ ತನ್ನ ದರ್ಬಾರು ಉಳಿಸಿಕೊಳ್ಳಲಾಗಲಿಲ್ಲ. ಆಗ ಯಾಕಿಂತು ಉದಾರಿಯಾಗಿದ್ದರೊ? ಅದಕ್ಕೂ, ಕಂಡ ಮಂದಿ, ಕಂಡ ಮಾತು ಆಡಿಕೊಂಡದ್ದಿದೆ. ಏನು ಹಕೀಕತ್ತೊ?

'ಯಾಕೊ ಬಾಳಾ, ಬಂದು ಭಾಳೊತ್ತಾತೇನು?', ಸೀರೆಯ ಸೆರಗಿಗೆ ಕೈ ಒರೆಸಿಕೊಳ್ಳುತ್ತ, ದೊಡ್ಡಮ್ಮ-ಹಣೆಯ ಮೇಲೆ ಉದ್ದ, ತಿದ್ದಿ ತೀಡಿದ ಕುಂಕುಮ, ಕೈತುಂಬ ಬಳೆ, ಕಚ್ಚೆಸೀರೆ ತೊಟ್ಟ-ಸೋನಕ್ಕ ಬಂದಳು. ಬೆನ್ನ ಹಿಂದೆಯೇ ಚಹಾ ಬಂತು.

'ಹೂನ್ರಿ', ಕುಳಿತಲ್ಲೆ ಅಂವ ನಿಂತಂತೆ ಮಾಡಿದ.

'ಇರ್‍ಲಿ ಕೂತ್ಕೊ, ಈಗ ಹೆಂಗದ ನಿಮ್ಮಪ್ಪಗ'

'ಇನ್ನಾ ಹಂಗೇ ಅದರಿ. ಅದ್ಕೇ....'

'ಏನ್ಮಾಡೂದಪ್ಪಾ, ಎಲ್ಲಾ ಕರ್ಮಫಲಾ. ತಿದ್ದೂದು, ತೀಡೂದು ಎಲ್ಲಾ ನಮ್ಮ ಕೈಯೊಳಗಾದರೂ ಇದ್ದಿದ್ದರ...'

ಆಕೆ ನಕ್ಕಳು. ಅರ್ಥವಾಗದಿದ್ದರೂ ಅವನೂ ನಕ್ಕ.

ಅಷ್ಟೊತ್ತಿಗೆ ದೊಡ್ಡಮ್ಮನ ಗಂಡ ಬಂದರು. ಬಂದ ರೀತಿಯಲ್ಲೇ ಅವರು ತುಂಬ ಸಿಟ್ಟಿನಲ್ಲಿರುವುದು ತಿಳಿಯುತ್ತಿತ್ತು, ಒಡನೆ ಎದ್ದು ನಿಲ್ಲದಿದ್ದರೆ ಬಾಲಕೃಷ್ಣ ಅವರ ಅರಿವಿಗೇ ಬರುತ್ತಿರಲಿಲ್ಲ.

ಅವನು ಕಂಡುದೆ ಒಂದು ಕ್ಷಣ ಅವರಿಗೆ ಗೊಂದಲವಾಯಿತು. 'ಇಂವ ಯಾಕ್ಬಂದಾ ಈ ಹೊತ್ನಾಗ?' ಎಂಬಂತೆ ದಿಟ್ಟಿಸಿ ನೋಡಿದರು. 'ಹೂಂ ಏನೊ? ಆರಾಮಾ, ಕೂಡು ಕೂಡು' ಆದರೂ ಸಾವರಿಸಿಕೊಂಡು ನುಡಿದರು. ಪರಂತು ಇಳಿಯದ ಕೋಪಾವೇಶದಲ್ಲಿ, ಆ ಕ್ಷಣವೆ ಹೆಂಡತಿಯತ್ತ ಹೊರಳಿದರು.

'ಯಾಕ ಏನ್ಮಾಡಿದಿ ನಾ ಹೇಳಿದ್ದು? ನಿನಗೂ ಅದಕ್ಕೂ ಸಂಬಂದಿಲ್ಲನ್ನೂ ಹಾಂಗ ಥಣ್ಣಗ ಕೂತರ ಬಗಿಹರಿಯೂದಿಲ್ಲ ನೋಡು.'

'ನೀವು ಸುಮ್ನೆ ಹೀಂಗ್ ಜೀವಾ ತಿಂದರೆ ದಕ್ಕಂತು? ಅಷ್ಟಕ್ಕೂ ನನ್ನ ಮಾತು ಕೇಳುವವರಾರು ಈ ಮನ್ಯಾಗ? ನನಗಿದ್ದರಲ್ಲೇನು, ನನ್ನ ಮಾತಿಗೂ ಬೆಲೆ?'

'ಇಗಾ, ಮತ್ತ ಸುರು ಮಾಡ್ಬಿಡಬ್ಯಾಡಾ ನಿನ್ನ ರಸ್ತೋದೇವಿ ರಥಿಷ್ಟವ', ದೊಡ್ಡಪ್ಪ ಇನ್ನಷ್ಟು ಸಿಡಕಾದರು. 'ಮೊದಲ ಮುದ್ದಿನಿಂದ ಮಗನ್ನ ಸಾಕ್ಯಾಡಿ, ಈಗ್ಯಾಯಿ ಬಿಟ್ಟರೆದಕ್ಕಂತು? ಅಲ್ಲ, ಹುಡುಗಿ ಕಪ್ಪಿದ್ದಾಳಂತ. ಹೌದು, ಇದ್ದರೇನಾತು? ಮಗಾ ದಿನಾಲೂ ಬಣ್ಣಾನೆ ತೊಳಕೊಂಡು ಕುಡೀತಾನೇನು? ನನ್ನೆದುರು ಒಣಾ ತ್ರಿ.ತ್ರಿಂಷಾ ಪಂಥ ನಡಿಯೂದಿಲ್ಲ, ಈಗ ಮಾತ ಕೊಟ್ಯಾಗಿಬ್ಬದ. ಮೀನಾ ಮೇಷಾ ಎಣಿಸಿದ ರೇನಾತು? ಇವತ್ತಂಜೀಮುಂದವರ್ನ ಮನಿಗೇ ಕರಕೊಂಬರ್ತೀನಿ. ಅಷ್ಟೊತ್ತಿಗೆ ಯಾವ ರಂದಿ-ರಸಕಸಿನೂ ಇರ್ತಕ್ಕದ್ದಲ್ಲ, ತಿಳೀತೂ? ಅರ್ಜೆಂಟ ಕೆಲಸದ ಮ್ಯಾಲೆ ಹೊಂಟೇನಿ, ಬರೂದು ತಡಾ ಆದೀತು, ಕಾಯಬ್ಯಾಡ್ರಿ, ಆಯ್ತೇನೊ ಬಾಳು?', ಬಳಿಕ ಬಾಲಕೃಷ್ಣನನ್ನೊಮ್ಮೆ ನೋಡಿದರು.

'ಹೂನ್ರಿ,' ಬಾಲಕೃಷ್ಣ ಆಸೆಗಣ್ಣಿಂದ ನೋಡಿದ, ದೊಡ್ಡಪ್ಪ ಇನ್ನೇನನ್ನಾದರೂ ಕೇಳಿಯಾರೆಂದು. ಅವನೂ ಹೇಳುವುದು ಬಹಳವಿತ್ತು. ಆದರೆ ದೊಡ್ಡಪ್ಪ ಇದ್ದರಲ್ಲವೆ? ಆಗಲೆ ಅಂಗಳಕ್ಕಿಳಿದು ಚಪ್ಪಲಿ ಮೆಟ್ಟಿಯಾಗಿತ್ತು.

ಅವರು ನಿರ್ಗಮಿಸಿದ್ದೆ ದೊಡ್ಡಮ್ಮ ನಿಟ್ಟುಸಿರುಬಿಟ್ಟು, ವಿಷಾದದಿಂದ ನಕ್ಕಳು. 'ನೋಡಿದೇನೂ ನಿಮ್ಮ ದೊಡ್ಡಪ್ಪನ ವ್ಯವಹಾರ? ಮಗಗ ಅದ್ಯಾವುದೊ ಹೆಣ್ಣು, ತಮ್ಮ ದೋಸ್ತಾನ ಮಗಳ್ನ ನೋಡಿಟ್ಟಾರ. ಇವರು ನೋಡೂ ದೃಷ್ಟಿನೇ ಹ್ಯಾರೆ. ಹುಡುಗಿ ಕಪ್ಪಂತ ವೆಂಕಟೇಶ ಮರ್‍ರ್ಯೋ ಒಲ್ಲೆ ಅಂತಾನ. ಇವರದೊ ಒಂದ ಹಟ, ನಾ ಒಪ್ಪಿಸ್ತೇಕಂತ. ಅದೂ ಇವತ್ತ ಸಂಜೆ ಒಳಗೆ!'

ಅಂತೂ ದೊಡ್ಡಪ್ಪ ದೊಡ್ಡಮ್ಮನಿಗೆ ಹೊರ ಯನ್ನೇ ಹೊರಿಸಿದ್ದಾರೆ! ತಾನು ಗೈರು ಟಾಯಮಿ ನಲ್ಲಿ ಬಂದಿರುವುದು ಅವನಿಗೆ ಮನ ದಟ್ಟಾಯಿತು.



ತಂದೆಯ ವಿಷಯ ತಿಳಿದು ಮೊದಲ ಬಾ ಭೇಟಿಗೆ ಬಂದಿದ್ದ ಇದೇ ದೊಡ್ಡಮ್ಮ-ದೊಡ್ಡಪ್ಪ ಬಹಳೇ ಚಿಂತಿತರಾಗಿದ್ದು ಎಂಥ ಸಹಾ ಮಾಡಲಿಕ್ಕೂ ಸಿದ್ಧ ಇದ್ದರು. ಅದು ನೋ ತಮ್ಮಲ್ಲಿಯಂತೆ ಈ ಮನೆಯ ಮೇಲೆ ಇನ್ನೂ ದುಃಖದ ಛಾಯೆ ಕವಿದಿರುವುದೊ ಏನೊ. ಇ ಬಂದ ತಾನೇ ಎಲ್ಲಿ ಈ ಮಂದಿಗೂ ಸಮಾಧಾ ಹೇಳಬೇಕಾಗಿ ಬಂದೀತೊ, ಎಂಬೊಂದು ಸ

ಅನುಮಾನ ಭಾವುಕ ಕ್ಷಣದಲ್ಲಿ ಮೂಡಿದ್ದೆ, ಆತ ಹಿರಿತನದ ಭಾವದಲ್ಲಿ, ಅದಕ್ಕೂ ತಯಾರಾಗಿ ಬಂದಿದ್ದ. ಇಲ್ಲಿ ನೋಡಿದರೆ....

ಅಮ್ಮನ ಮಾತು ಮುಗಿಯುವುದಕ್ಕೇ ಕಾದಿದ್ದನೆಂಬಂತೆ ಆಗ ಖೋಲಿಯ ಬಾಗಿಲನ್ನು ಫಡ್ಡನೆ ಸರಿಸಿ ನುಗ್ಗಿದಾತ, ಮಗ ವೆಂಕಟೇಶ. ಅವನು ಬಂದ ರೀತಿಯಲ್ಲೆ ಬಾಲಕೃಷ್ಣನಿಗೆ ಅದೇಕೊ ಇಂವ ನಾಟಕದ ಪಾತ್ರವಾಗಿದ್ದಾನೆನ್ನಿಸಿತು. ಬರೀ ಮಾತೇಕೆ, ಹೇರ್‌ಸ್ಟೈಲು, ಬಟ್ಟೆ-ಬರೆ ಹಾಕ್ಕೊಂಡ ರೀತಿ, ಮುಖಭಾವ್ನ ಸಹಿತ. ಆದರೆ ಬಂದಾತನೊ ಬಾಲಕೃಷ್ಣನನ್ನು ಕಣ್ಣೆತ್ತಿಯೂ ನೋಡಲೊಲ್ಲ. ಒಮ್ಮೆಲೆ ಅಮ್ಮನ ಮೇಲೆ ಆಕ್ರಮಣ ಮಾಡಿದ.

'ಅಂದ್ರ, ನೀ ಇಷ್ಟೊತ್ತನಕಾ ಅವರಾಡಿದ ಮಾತು ಕೇಳಿಸ್ಕೊಂಡೀದಿ. ಅಷ್ಟಿದ್ದಾವ, ಆಗಲೆ ಯಾಕ ಸ್ವಚ್ಛ ಮಾತಾಡಿ ನಿನ್ನ ತೀರ್ಮಾನ ತಿಳಿಸಬಾರದಿತ್ತು? ಆದ್ರದಕ್ಕೆ ಧೈರ್ಯಾ ಬೇಕಲ್ಲ? ಎಲ್ಲಾರದೂ ನನ್ನೆದುರೇ ಜೋರು, ಜುಲುಮಿ'

'ಹೌದಾ? ಅವತ್ತೇ ಅವಂಜೋಡಿ ಮಾತಾಡ್ಲಿಕ್ಕೆ ಹೋದರ ನೀವೆಲ್ಲಾ ಏನಂದ್ರಿ? ಹಿರೇರ ಬಗ್ಗೆ ಮರ‍್ಯಾದಿರಲಿ, ಎದುರುತ್ತರಾ ಕೊಡ ಬಾರದೂ, ಅದೂ ಇದೂ ಅಂತ. ಪಯವಾ ಅಪ್ಪನೂ ಏನೂ ನೇರ ಹೇಳದೆ, ಎಲ್ಲಾ ನಿನ್ನ ಮೂಲಕ ಆದೇಶ ಹೊರಡಿಸಲಿಕ್ಕೆ ಹತ್ಯಾನ. ಅದಕ್ಕ ತಕ್ಕ ರೀತಿ ಉತ್ತರಾ ಕೊಡದೆ ನನಗ ಬ್ಯಾರೆ ದಾರಿ ಇಲ್ಲ.'



'ಯಾಕವ್ವ ಒಂದ್ಸಾರಿ ಹೇಳಿದರ ಅರ್ಥಾಗೂದಿಲ್ಲೇನ್ನಿಮಗ? ತನ್ನ ಮಾತೇ ನಡೀಬೇಕಂತದೇನು ಅಪ್ಪನ ಹಠ? ಬಾಯ್ತಗದರ ತನ್ನದು, ತನ್ನ ಕಾಲದ್ದು ಕತಿ ಸುರು ಮಾಡ್ತಾನ, ಅದಕ್ಕ ನಾ ಯಾಕ್ಬಲಿಪಶು ಆಗ್ಬೇಕು? ಇದು ಬರೀ ಕಪ್ಪು ಬಿಳುಪಿನ ಪ್ರಶ್ನೆ ಅಲ್ಲ, ಖಂಡತುಂಡ ಹೇಳ್ತಿದ್ದೀನಿ, ಅಪ್ಪನ ಮಾತು ಕೇಳಿಕೊಂಡು ನೀ ಇದರಾಗ ತಲಿಹಾಕಬ್ಯಾಡಾ!

'ಅಂತೂ ಅಪ್ಪಾಮಗಾ ಬಲೆಬೇತು ಹುಡುಕೀರಿ. ಆದ್ರಿದೇನು ಕಡಿಪೂರೈಸುವಂಥಾದ್ದಲ್ಲ. ಇವತ್ತೆ ಇಬ್ಬರೂ ಕೂತ್ಕೊಂಡು ಮಾತಾಡಿ ಒಂದಿತ್ಯರ್ಥಕ್ಕ ಬಂದರ ಸರಿ, ಇಲ್ಲಾಂದರ ನನ್ನ ದಾರಿ ನಾ ಹುಡುಕಿಕೋಬೇಕಾದೀತು.'

ಇಷ್ಟನ್ನುವಲ್ಲಿ ಸೋನಕ್ಕ ಬಹಳೆ ಆಯಾಸಗೊಂಡಿದ್ದು ಬಾಲಕೃಷ್ಣ ಗಮನಿಸದಿರಲಿಲ್ಲ. ಧ್ವನಿ ನಡುಗುತ್ತಿದ್ದುದಲ್ಲದೆ ಮಾತು ಮುಗಿಯುವಷ್ಟರಲ್ಲಿ

ಕಣ್ಣಿಂದ ಹನಿಯೊಂದು ಉದುರಿತು. ವೆಂಕಟೇಶ ನಿಗಿದಾವುದರ ಪರಿವೆ ಇದ್ದಂತಿಲ್ಲ.

'ನನಗಸಾಧ್ಯನಕೊಂಡೀರೇನು ಈ ದಾರಿ ಕಂಡ್ಕೊಳ್ಳೂದು? ಅಷ್ಟಕ್ಕೂ ನಾ ನಿಮ್ಮಗತೆ ಬರೆ ಆಡಿ ಸುಮ್ಮರಾವಲ್ಲ, ಪ್ರತ್ಯಕ್ಷ ಮಾಡಿಬಿಡಾವ. ಇದನ್ನಪ್ಪಗ ಸ್ಪಷ್ಟಪಡಿಸೊ ಹೊಣೆ ನಿಂದು ನೋಡು. ಹಿಂದಾಗಡೆ ನನ್ನ ಬೈದರುಪಯೋಗಿಲ್ಲ.'

ಇಷ್ಟೆಂದು ಜೋರಾಗಿಯೇ ಗುಡುಗಿದರೂ, ಇನ್ನೂ ಕುಗ್ಗದಿದ್ದ ಕೋಪವನ್ನು ನಡಿಗೆಯ ಮೂಲಕ ಪ್ರಕಟಸುತ್ತ, ವೆಂಕಟೇಶ ಚಪ್ಪಲಿ ಮೆಟ್ಟಿ, ಹೊರಬಂದು, ಗಾಡಿ ಚಾಲೂ ಮಾಡಿದ.

ಅವನನ್ನೆ ನೆಟ್ಟ ನೋಟದಿಂದ ನೋಡುತ್ತ ಕುಳಿತಿದ್ದ ಬಾಲಕೃಷ್ಣ, ಆಮೇಲೆ ನಿಧಾನಕ್ಕೆ ಸೋನಕ್ಕನತ್ತ ತಿರುಗಿ, 'ಆಯ್ತು ದೊಡ್ಡಮ್ಮ ಹಂಗಾರ್ನಾನೂ ಇನ್ನ ಹೊರಡೀನಿ' ಎಂದಾಗ ಆಕೆಗೆ ಅಚ್ಚರಿ. 'ಯಾಕೊ? ನಿನಗೂ ವೆಂಕಟೇಶನ ನೆರಳು ಬಿತ್ತೇನು? ಆಯ್ತು ಹೊರಡ್ಯಾಕಂತ. ಊಟಾನಾದ್ರೂ ಮಾಡು ನಡಿ' ಎಂದಳು.

ಸೋನಕ್ಕ-ಪರಿಮಳಾ ಇಬ್ಬರೂ ತಟ್ಟೆಯಿಟ್ಟು ಅವನಿಗೆ ಊಟಕ್ಕೆ ಬಡಿಸಿದರು. ಚಿತ್ರಾಹುತಿ ತಿರುಪಿ, ಬಾಲಕೃಷ್ಣ ತುತ್ತು ಬಾಯಿಗಿಟ್ಟುಕೊಂಡ. ಅದು ಗಂಟಲಲ್ಲಿಳಿಯಲೊಲ್ಲದು. ಬದಲಾಗಿ, ಬಿಸಿಲಿಗೆ ಬಸವಳಿದು, ಬೆಂಡಾಗಿ, ಏದುಸಿರು ಬಿಡುತ್ತ, ಕಣ್ಣೀರಿನೊಂದಿಗೆ ಜೊಲ್ಲು ಸುರಿಸುತ್ತ, ನಾಯಿಯ ಭಂಗಿಯಲ್ಲಿ ಕುಳಿತ ತಂದೆಯ ಮುಖ ಮೂಡಿಬಂತು. ಅದರ ಪಕ್ಕದಲ್ಲೇ ವೈನ್ಯವೇ ಮೂರ್ತಿವೆತ್ತ ತಾಯಿ!

ಊಹೂಂ, ತುತ್ತು ಗಂಟಲಲ್ಲಿಳಿಯ ಲೊಲ್ಲದು

ಎದ್ದುಬಿಡಬೇಕೆಂದುಕೊಂಡ

ದೊಡ್ಡಮ್ಮ ಏನಾದರೂ ಅಂದು ಕೊಂಡಾರು. ಅಷ್ಟಕ್ಕೂ ಇದು ಒಂದು ದಿನದ ಪಾಡಲ್ಲ. ಅದಕ್ಕೇ ಮನೆಯಲ್ಲಿ ಊಟವೇ ಬೇಸರ. ಒಂದು ಕಾಲಕ್ಕೆ, ಅದು ಬಹಳ

ಹಿಂದೇನೂ ಅಲ್ಲ, ಎಲ್ಲರೂ ನಗುತ್ತ, ಕಲೆಯ
ಬಯಸಿದ್ದು ಕೇಳಿ ತಿನ್ನುವುದೇ ಒಂ
ಆಟವಾಗಿತ್ತು. ತಕ್ಷಣ ನೀರು ಕುಡಿದ, ಹ
ನೀರು ಕುಡಿಯುತ್ತಲೆ ಅನ್ನವನ್ನು ಗಂ
ಗಿಳಿಸುತ್ತ, ಅಂತೂ ಊಟದ ಶಾಸ್ತ್ರ ಮುಗಿಯ

ದೊಡ್ಡಮ್ಮ ಅಸಹಾಯಕಿಯಾಗಿ
ನೋಡುತ್ತಿದ್ದಾಳೆ. ಅವಳ ನೋಟವೂ
ತಿಳಿದುಕೊಂಡಂತೆ, ತಿಳಿಸಿಕೊಡುವಂತೆ
ಊಟಮುಗಿಸಿ ದೊಡ್ಡಮ್ಮ ಬರುವುದನ್ನೇ ಕಾ
ಬಾಲಕೃಷ್ಣ ಹೊರಟು ನಿಂತಾಗ ಸೋ
ತಡೆಯಲಿಲ್ಲ, ಬಂದಿದ್ದರ ಕಾರಣವ
ಕೇಳಲಿಲ್ಲ!

3



ಬಸ್‌ಸ್ಟ್ಯಾಂಡಿಗೆ ಬಂದ ಬಾಲಕೃಷ್ಣ
ಚೈತನ್ಯವಿರಲಿಲ್ಲ. ಯಾವ ಭಾಗ್ಯಕ್ಕಲ್ಲಿ ಬರಬೇಕಿತ
ಕೊನೆಗೆ ಬಂದ ವಿಷಯವನ್ನಾದರೂ ಎಲ್ಲರಿ
ತಿಳಿಸಿ, ಮನಸ್ಸು ಹಗುರು ಮಾಡಿಕೊಳ್ಳಲಾಗಲ
ಅಮ್ಮನೂ, ಅಲ್ಲಿ ದಾರಿ ಕಾಯುತ್ತಿರುತ
ಹೋದ ಕೆಲಸವನ್ನು ಮಗ ಹಣ್ಣು ಮಾಡಿಕೊ
ಬರುತ್ತಾನೆ ಎಂದು.

ತಾನು ಬಂದು, ಎಲ್ಲ ನೋಡಿ, ಫಲಿತಾ
ಇಷ್ಟೇನೆ ಎಂದು ನಿರ್ಧರಿಸಿ, ಮೂರ್ಖ
ಮಾಡಿದೆನೆ? ಆಯಿತೊ, ಒಂದು ವೇಳೆ ಬ
ಉದ್ದೇಶವನ್ನು ಹೇಳಿದ್ದರೂ ಪಾಪ ದೊಡ್
ಏನು ಮಾಡಿಯಾಳು? ದೊಡ್ಡಪ್ಪನಿಗೊ ಬ
ಮಾತನಾಡಲು ಪುರಸೊತ್ತಿಲ್ಲ. ಅಕ್ಕ-ಅ
ವಿದ್ಯಮಾನವನ್ನಂತೂ ಕಂಡಾಯಿತಲ್ಲ.

ಹೌದು, ಏನು ಮಾಡುವುದು ಎಲ್ಲರಿ
ಅವರವರದೆ ಸಮಸ್ಯೆಯೊ, ಸಡಗರವೊ ಇ
ಇರುವವು....

ಹೀಗೆ ತನಗೆ ತಾನೆ ಎಷ್ಟು ಸಮಾಧ
ಹೇಳಿಕೊಂಡರೂ ಕವಿದ ದುಗುಡ ಕ



ಆಗಲಿಲ್ಲ. ಬದಲಾಗಿ, ಹೊತ್ತೇರಿದಂತೆ ಭವಿಷ್ಯದ ಭಯ. ಅಪ್ಪನ ಸಂಬಳವಿಲ್ಲದೆ ದಿನಮೇಕ ಸಂಸಾರ ನಡೆಯುವುದಾದರೂ ಹೇಗೆ? ಆತ ಯಾರು ಯಾರಿಗೊ ದುಡ್ಡು ಕೊಟ್ಟಿದ್ದರೂ ಐನವೇಳೆಗೆ ಅದು ಕನ್ನಡಿಯೊಳಗಿನ ಗಂಟೇ ಸರಿ. ಮುಖ್ಯ ಮನೆಯಲ್ಲೂ ನೆಮ್ಮದಿ ಇಲ್ಲ. ಅಪ್ಪ ತಮ್ಮಲ್ಲರನ್ನೆಳೆದು ಬಡಿಯುವುದಕ್ಕೆ ಹೊತ್ತು-ಗೊತ್ತಿಲ್ಲ, ಮೈಮೇಲೆ ಬಾಸುಂಡೆ ಏಳಿಸಿಕೊಂಡು ಶಾಲೆಗೆ ಹೋಗುವುದಿಲ್ಲವೆಂದು ತಮ್ಮ -ತಂಗಿ ಅಳುತ್ತಾವೆ, ಅಪ್ಪನಿಗೆ ಇನ್ನಷ್ಟು ಸರಿಯಾದ ಇಲಾಜನ್ನಾದರೂ ಕೊಡಿಸಿದರೆ... ಆದರಿದಕ್ಕೆ ಯಾರ ನೆರವೂ ಸಿಕ್ಕುವುದು ಸಾಧ್ಯವಿಲ್ಲ, ಹೊರೆಯೆಲ್ಲ ಹಿರಿಯ ಮಗನಾದ ತನ್ನದಲ್ಲವೆ? ಆದರ ಹೇಗೆ ಹೊರಲಿ... ಏನು ಮಾಡಲಿ?

ಬಸ್ ನಿಲ್ದಾಣದ ಬೆಂಚೊಂದರಲ್ಲಿ ತಲೆಗೆ ಕೈ ಇಟ್ಟುಕೊಂಡು ಕುಳಿತ ಬಾಲಕೃಷ್ಣನಿಗೆ,

'ಏನೊ ತಮ್ಮಾ ಇಲ್ಲ್ಯಾಕ' ಎಂದು ಯಾರೊ ಆತ್ಮೀಯತೆಯಿಂದ ಬೆನ್ನುತಟ್ಟಿ ನುಡಿಸಿ ದಂತಾಯಿತು.

'ಯಾರಪ್ಪಾ ಇವರೂ?', ಬಾಲಕೃಷ್ಣ ತಲೆ ಎತ್ತಿದ. ನೋಡಿದರೆ, ತಂದೆಯದೆ ವಯಸ್ಸಿನ, ಆದರೆ ಧೋತ್ರ, ಕೋಟು, ರಟ್ಟಿನ ಕರಿಟೊಪ್ಪಿಗೆ ಧರಿಸಿದ ವ್ಯಕ್ತಿಯೊಂದು ಹಸನ್ಮುಖಿಯಾಗಿ ಎದುರು ನಿಂತಿದೆ. ಆ ಮುಖದ ಮೇಲೂ ಎದ್ದುಕಾಣುವ ಆತ್ಮವಿಶ್ವಾಸ. ನೋಡಿದರೆ ಅಗದಿ ಪರಿಚಿತ ಮುಖ, ಆದರೆ ಎಲ್ಲಿ ನೋಡಿದ್ದೆಂದು ತಿಳಿಯದು. ಕೂಡಲೆ ಅವನು ಎದ್ದು ನಿಂತ.

'ಇಲ್ಲಿ ಕೂಡು, ಇಲ್ಲಿ ಕೂಡು', ಅವನನ್ನು ಕೂರಿಸಿ, ಆ ವ್ಯಕ್ತಿಯೂ ಕುಳಿತುಕೊಂಡಿತು.

'ಮತ್ತೇನೂ.... ಹೆಂಗಿದ್ದಾರ ನಿಮ್ಮಪ್ಪಾ?'

ಅವನಿಗೆ ಆಶ್ಚರ್ಯ, ಹಾಗಿದ್ದರೆ ಅಪ್ಪನ ಪರಿಚಯದವರೇ ಇರಬೇಕು.

'ನೀವ್ಯಾರಂತ ಗೊತ್ತಾಗ್ಲಿಲ್ಲರೀ'

'ಹೌದಾ, ಸ್ವಲ್ಪದಿನಾ ನಿಮ್ಮಪ್ಪಾವರ ಜೋಡಿನೇ ಕೆಲಸ ಮಾಡ್ತಿದ್ದೆ. ಆಗಾಗ ಮನೆಗೂ ಬರ್ತಿದ್ದೆ, ನಿನ್ನ ನೋಡಿದ ನೆನಪದ ನನಗ.'

'ಹಂಗಾರವರ ವಿಷಯ ಗೊತ್ತಿಲ್ಲೇನ್ರಿ,'

'ಗೊತ್ತೋ ಗೊತ್ತು. ಛಲೊ ಗೊತ್ತು. ಅದಕ್ಕೇ ಹೆಂಗಿದ್ದಾರಂತ ಕೇಳಿದೆ'

ಬಾಲಕೃಷ್ಣನಿಗೆ ದುಃಖ ಉಕ್ಕಿ ಬಂತು, ತಕ್ಷಣ ಈತ ತನಗೆ ಪರಿಚಿತನೊ ಅಲ್ಲವೊ ಯೋಚಿಸುವ ಗೋಜಿಗೂ ಹೋಗದೆ, ತಲೆಯೊಳಗಿಟ್ಟು ಕೊಂಡಿದ್ದನ್ನೆಲ್ಲ ಹೇಳಿಬಿಟ್ಟ. ದೊಡ್ಡಮ್ಮ-ದೊಡ್ಡಪ್ಪರಿಗೆ ಹೇಳಹೊರಟು ಹೇಳದೆ ಉಳಿಸಿದ್ದು. ತನ್ನನ್ನು ಕಾಡುತ್ತಿದ್ದದ್ದು ಎಲ್ಲ. ಅದನ್ನು ಹೇಳಹೇಳುತ್ತಿದ್ದಂತೆ ಅಳು ತಡೆದುಕೊಳ್ಳಲಾಗಲಿಲ್ಲ.

'ಛೆ ಛೆ ಇಷ್ಟಕ್ಕೆಲ್ಲಾ ಅಳ್ತಾರೇನು ಸಣ್ಣ ಹುಡುಗೂರಗತೆ', ಆ ವ್ಯಕ್ತಿ ಮತ್ತೆ ಬೆನ್ನ ಮೇಲೆ ಕೈ ಆಡಿಸಿ ಸಮಾಧಾನ ಹೇಳಿತು.

ಅದೇಕೊ ಬಾಲಕೃಷ್ಣನಿಗೆ ಆಪ್ಯಾಯಮಾನ ಸ್ಪರ್ಶ!

'ಒಂದೊಂದ್ಸಾರಿ ಹೀಂಗೇ, ಕಷ್ಟ, ಕಾರ್ಪಣ್ಯ ಬರ್ತಿರತಾವ ಆದರ ಪಾಪ ನಿನಗನುಭವ ಇಲ್ಲೋಽಡು, ಅದಕ್ಕೆ ಎಲ್ಲಾ ದೆಷ್ವಾಗಿ ಕಾಣಸ್ತಾವ. ಇಂಥಾ ಹೊತ್ತಿನ್ಯಾಗೇ ಒಂದೊಂದ್ಸಾರಿ ನಾವು ಮಂದೀ ಸಹಾಯ ಅಪೇಕ್ಷಿಸ್ತಿವಿ, ಅದು ಸಿಗೂ ವಂಥಾದ್ದಲ್ಲನ್ಯಾತ್ರೆ ದುಃಖಾಗ್ತದ. ಆದ್ರದು ಕಡಿ ಪೂರೈಸುವಂಥಾದ್ದಲ್ಲೋಽ, ಈಗ ಸುರು ಮಾಡು ನೋಡೂಣು.'

ಬಾಲಕೃಷ್ಣನಿಗೇನೂ ಹೊಳೆಯಲಿಲ್ಲ.

'ಯಾಕೊ? ಏನೂ ಹೊಳಿಯೊಲ್ದಾ? ಹೀಂಗದ್ರ ಹೆಂಗಪಾ, ಭಾಳ ನಿಧಾನಿ ನೀನು. ಆಯ್ತು, ನಿನ್ನ ತಲಿ ಓಡೊಲಾಗೇದ. ಹಂಗಾರ ನಾನೇ ಹೇಳ್ತೀನಿ, ಶಾಂತರೀತಿಯಿಂದ ಕೇಳಿ ಯಾದ್ರೂ, ಕೇಳು....'

'ಮೊದಲ ನಿಮ್ಮಪ್ಪನ್ನ ನೀನೆ ವಿಜಾಪೂರಿಗೊ, ಬೆಂಗಳೂರಿಗೊ ಕರಕೊಂಡು ಹೋಗಿ ಸ್ವಲ್ಪ ದಿವ್ಸ ದವಾಖಾನ್ಯಾಗಿರಸು. ಅಂವಗ ಉಪಚಾರದ ಜೋಡಿ ಕ್ರಮೇಣ ಮನೀ ವಾತಾವರಣನೂ ಸರಿ ಹೋಗ್ತದ. ಅದಕ್ಕೆ ರೊಕ್ಕೆಲ್ಲಿಂದ್ಬರ್ತಾವನ್ನೊ ಯೋಚ್ನಾ ಏನು? ಅದಕ್ಯಾಕ ಯೋಚಿಸಬೇಕು? ಹಳ್ಳಿಯೊಳಗ ಭೂಮಿ ಅದ, ಪಟ್ಟಣದಾಗ ಮನಿ ಅದ. ಅಪ್ಪ ಗಳಿಸಿದ ಹೆಸರದ. ಇದರ ಮ್ಯಾಲಿ ಸಾಲ ಹುಟ್ಟಲಿಕ್ಕಿಲ್ಲನಕೊಂಡೀಯೇನು? ಹಾಂಗನಕೋಬ್ಯಾಡ. ಪ್ರಯತ್ನ ಮಾಡಿನೋಡು. ಅಲ್ಲಿಗೂ ಭಾಳೇ ತ್ರಾಸಾದರ ಒಂದಿಷ್ಟು ಜಮೀನು ಮಾರಿದರಾಯ್ತು.

'ಇನ್ನ ನಿತ್ಯದ ಜೀವನ ನಿರ್ವಹಣೆ ಹೆಂಗತೀ ಯೇನು? ಅದಕ್ಕೂ ಭಾಳ ತಲಿಕೆಡಿಸ್ಕೋಬ್ಯಾಡ. ನಿಮ್ಮಪ್ಪನ್ನ ದವಾಖಾನಿಗೆ ಸೇರಿಸಲಿಕ್ಕೆ ಬೆಂಗಳೂರಿಗೊ, ವಿಜಾಪೂರಿಗೊ ಹೋದಾವ, ಅಲ್ಲೇ ನೌಕರಿಗೂ ಪ್ರಯತ್ನ ಮಾಡು. ಬ್ಯಾರೆ ಕಡೆ ಅಲ್ಲ, ನಿಮ್ಮಪ್ಪನ ಖಾತೇದಾಗೆ. ಅಲ್ಲಿ ಹೋಗಿ, ಅಧಿಕಾರಸ್ಥರಿಗೆ ನಿಮ್ಮಪ್ಪನ ಸ್ಥಿತಿಗತಿ ಹೇಳಿದರ, ಒಂದು ಪರಿಹಾರ-ಕೆಲಸಾ ಸಿಕ್ಕೀತು. ಎಲ್ಲಾ

ತಯಾರ್ಮಾಡಿಕೊಂಡು, ದೊಡ್ಡವರನ್ನಿಸ್ಕೊಂಡವ
ಜೋಡಿ ಸರಿಯಾಗಿ ಮಾತಾಡಿದರಾಯ್ತಪಾ
ಒಂದೊಂದ್ಸಲ ನಾವು ಯಾರಿಂದ ಸಹಾಯ
ದೀತನಕೊಂಡಿರ್ತೀವೊ ಅವರಿಂದೇನೂ ಆಗು
ದಿಲ್ಲಾ. ಯಾರಿಂದ ಏನೂ ನಿರೀಕ್ಷೆ ಇರು
ದಿಲ್ಲನೊ ಅಲ್ಲಿ ಪಟ್ಟಂತನುಕೂಲಾಗಿ ಬಿಡ್ತದ
ಇವೇ ಜೀವನಾ. ಎಲ್ಲಾ ಹೇಳಿದಷ್ಟು ಸರಳಲ್ಲ
ಖರೆ. ಆದರ ಮನಸ್ಸಿದ್ದಲ್ಲಿ ಮಾರ್ಗ ಅಂತು
ಅದ. ಪ್ರಯತ್ನ ಪಟ್ಟರಲ್ಲೇನು ಪ್ರಯೋಜನ
ಆಗೂದು...,

ಒಳ್ಳೆ ಕತೆ ಕೇಳುವವನಂತೆ ಬಾಲಕೃ
ಆಲಿಸುತ್ತಿದ್ದ. ಆ ವ್ಯಕ್ತಿಯದೂ ರಸವತ್ತಾ
ಶೈಲಿಯೆ. ಇಂವ ಹೇಳುವುದೆಲ್ಲ ಎಷ್ಟರ ಮಟ್ಟಿ
ಖರೆಯೊ ಆದರೆ ಹೇಳುತ್ತಿದ್ದರೆ ಇನ್ನೂ ಕೇ
ಬೇಕೆನ್ನಿಸುವುದು. ಕೇಳಕೇಳುತ್ತಾ ಒಂದು ರೀತಿಂ
ಆತ್ಮವಿಶ್ವಾಸ ಮೂಡುವುದು. ಬಹುಶಃ, ತನ
ಬೇಕಾದದ್ದೂ ಅದೇನೆ.

'ಹೂಂ ಹೂಂ' ಅನ್ನುತ್ತ ಬಾಲಕೃಷ್ಣ ಇನ
ಕೇಳುವ ಗುಂಗಿನಲ್ಲಿ ಮುಖ ಅರಳಿಸಿ ಕುಳಿತಿ
ಮತ್ತೇನನ್ನೊ ಹೇಳಹೊರಟ ಆ ವ್ಯಕ್ತಿಯ ಲಕ್ಷ
ಅಷ್ಟರಲ್ಲಿ ಅಲ್ಲಿಗೆ ಬಂದ ಬಸ್ಸಿನತ್ತ ಹರಿಯಿತು.

'ಎಲಾ ಇವನ! ನಾ ಹೊರಡೂ ಬ
ಬಂದೇಬಿಟ್ತಲ್ಲೊ. ಇದನ್ನ ತಪ್ಪಿಸಿಕೊಳ್ಳೊ ಹಾಂಗಿ
ಆಗ್ಲೇ ಎಷ್ಟು ನೂಕುನುಗ್ಗಲು ನೋಡ
ಹಂಗಾರ್ನಾ ಇನ್ನ ಬರ್ತೀನಿ. ಹೇಳಿದ್ದು ಯೋಚ
ಮಾಡು. ನನ್ನ ಮರೀಬ್ಯಾಡಾ... ಆಯ್ತಾ?'

ಇಷ್ಟೆಂದವನು, ಒಂದೇ ನೆಗೆತಕ್ಕೆ ಬಸ್ಸಿನ
ಓಡಿದ.

'ಸರ್, ಸರ್ ನಿಮ್ಮ ಹೆಸರು ಗೊತ್ತಾಗಲಿಲ್ಲ
ಅವನ ಹೆಸರನ್ನಾದರೂ ಕೇಳಬೇಕೆನ್ನಿಸಿತು, ಈ
ಬಾಲಕೃಷ್ಣನಿಗೆ. ಎದ್ದುನಿಂತು, ಕೈಮಾ
ಜೋರಾಗಿ ಕೂಗಿಕೊಂಡ. ಅಷ್ಟೊತ್ತಿಗೆ ಆ ವ
ಕಣ್ಮರೆಯಾಗಿತ್ತು.

'ಭಾಳ ಮಾಡಿ ದೇವರೇ ಈ ಪುಣ್ಯಾತ್ಮನ್ನ ಕಳಿಸಿಕೊಟ್ಟಿರಬೇಕು. ಅವನು ಹೋದ ದಿಕ್ಕನ್ನೇ ನೋಡುತ್ತ ಬಾಲಕೃಷ್ಣ ಅಂದುಕೊಂಡ. 'ಇಂವ ಹೇಳಿಧಾಂಗ ನಡಿಯೂದೇ ಛಲೊ, ಛಲೋ ಏನ್ಬಂತು ಈಗುಳಿದಿರೂದು ಅದೊಂದೇ ದಾರಿ. ಅಂತೂ ಇಲ್ಲಿ ಯಾರ ಸಹಾಯನೂ ಸಿಕ್ಕಲಿಲ್ಲಾಂತ ಅಳಮಾರಿ ಮಾಡಿಕೊಂಡು ಹೋಗೂ ಸ್ಥಿತಿ ತಪ್ಪಿತು. ಇನ್ನೇನು, ತಮ್ಮ ಅಕ್ಕ-ಭಾವ ಸಹಾಯ ಮಾಡೂ ಸ್ಥಿತಿಯೊಳಗಿಲ್ಲಂತ ಕೇಳಿ ಅವ್ವಗ ಬ್ಯಾಸರಾದೀತು. ಅಥವಾ ಅಕಿಗೆ ಬ್ಯಾಸರಾದರೂ ಯಾಕೆ? ಈ ಪುಣ್ಯಾತ್ಮಂತೂ ಯಾರೋ ಗೊತ್ತಿಲ್ಲ. ಅದಕ್ಕ ದೊಡ್ಡಪ್ಪನೇ ಈ ದಾರಿ ತೋರಿಸಿದಾ ಅಂತ ಅವ್ವಗ ಹೇಳಿದರಾತು. ಈ ಮನುಷ್ಯಾನೂ ಒಬ್ಬ ದೊಡ್ಡಪ್ಪನೇ....

..... ಹಂಗಾದರೆ ಊರಿಗೆ ಹೋದದ್ದೆ ಮುಂದಿನ ಬೇಜಮಿ ಮಾಡಲಿಕ್ಕೆ ಬೆಂಗಳೂರಿಗೆ ಹೊರಟುಬಿಡ್ಬೇಕು. ಅಲ್ಲಿ ನಾಕೆಂಟು ದಿನಾ ಇದ್ದು, ಅಪ್ಪನ್ನ ದವಾಖಾನಿಗೆ ಸೇರಿಸಿದರ, ಆಮ್ಯಾಲೆ ಅವ್ವ, ತಮ್ಮ-ತಂಗಿಯರಿಗೂ ಒಂದು ಏರ್ಪಾಟು ಮಾಡಬಹುದು. ಹೌದು ಇಷ್ಟು ಮಾಡಬೇಕು....' ಅವನು ಇನ್ನೂ ನಿಂತೇ ಇದ್ದು, ಯೋಚಿಸುವಷ್ಟರಲ್ಲಿ ಊರಿಗೆ ಹೊರಡತಕ್ಕ ಬಸ್ಸು ಬಂದಿತು. ಗದ್ದಲದಲ್ಲೂ ಬಾಲಕೃಷ್ಣ ಉತ್ಸಾಹದಿಂದ ಒಳನುಗ್ಗಿದ.



ನನ್ನ ಪಾಲಿಗೆ ಕಥೆ ಎಂದರೆ ಅನುಭವವನ್ನು, ಆ ಮೂಲಕ ಜೀವನವನ್ನು ಅರ್ಥ ಮಾಡಿಕೊಳ್ಳುವ ಒಂದು ಪ್ರಯತ್ನ. ಅಸ್ಪಷ್ಟತೆಯಿಂದ ಸ್ಪಷ್ಟತೆಯ ಕಡೆಗೆ, ಅಮೂರ್ತತೆಯಿಂದ ಮೂರ್ತದ ಕಡೆ ಅನುಭವವನ್ನು ಸಾಗಿಸೋದು

ರಾಘವೇಂದ್ರ ಪಾಟೀಲ



# "221 B ಬೇಕರ್ ಸ್ಟ್ರೀಟ್"




"221B ಬೇಕರ್ ಸ್ಟ್ರೀಟ್, ಲಂಡನ್" ಇದು ಜಗತ್ಪ್ರಸಿದ್ಧ ವಿಳಾಸ. ಸರ್ ಆರ್ಥರ್ ಕಾನನ್ ಡಾಯಲ್ ಸೃಷ್ಟಿಸಿದ ಪ್ರಖ್ಯಾತ ಪತ್ತೇದಾರ ಪಾತ್ರ, ಶೆರ್ಲಾಕ್ ಹೋಮ್ಸ್‌ನ ನಿವಾಸ. ಈ ಖಾಸಗಿ ಪತ್ತೇದಾರ, ತನ್ನ ಸ್ನೇಹಿತ ಡಾ. ವ್ಯಾಟ್ಸನ್ ಜೊತೆಗೂಡಿ ಅನೇಕ ರಹಸ್ಯಗಳನ್ನು ಬಿಡಿಸುವಲ್ಲಿ, ಕೊಲೆ ಕಳವುಗಳನ್ನು ಪತ್ತೆ ಹಚ್ಚುವಲ್ಲಿ, ಕಾರ್ಯನಿರತನಾದದ್ದು ಇಲ್ಲಿಯೇ. ಪತ್ತೇದಾರಿ ಕಥಾಪ್ರಿಯರಿಗೆ ಮಾತ್ರವಲ್ಲ, ಕಥನಸಾಹಿತ್ಯದ ಬಗ್ಗೆ ಆಸಕ್ತಿಯಿರುವ ಎಲ್ಲರಿಗೆ ಶೆರ್ಲಾಕ್ ಹೋಮ್ಸ್ ಹೆಸರು ರೋಮಾಂಚಕಾರಿ. ಈ ಅಗ್ರಗಣ್ಯ ಪತ್ತೇದಾರನ ಕುರಿತಾದ ಬಹುತೇಕ ಕಥೆಗಳು ಕನ್ನಡದಲ್ಲಿ ಅನುವಾದಗೊಂಡಿವೆ. ಶರಲೇಖ ಹೋಮ ಮತ್ತು ಡಾ. ಜ. ವತ್ಸ ಎಂಬ ಹೆಸರುಗಳಲ್ಲಿ ಇವುಗಳನ್ನು ಕನ್ನಡೀಕರಿಸುವ ಯತ್ನವೂ ನಡೆದಿದೆ!

ಶೆರ್ಲಾಕ್ ಹೋಮ್ಸ್‌ನ ಅರವತ್ತು ಅದ್ಭುತ ಕಥಾನಕಗಳನ್ನು ಸೃಷ್ಟಿಸಿದ ಕಾನನ್ ಡಾಯಲ್ ವೃತ್ತಿಯಿಂದ ವೈದ್ಯನಾಗಿದ್ದ. ಅವನು ಅನೇಕ ವೈಜ್ಞಾನಿಕ ಕತೆಗಳನ್ನು, ರೊಮ್ಯಾಂಟಿಕ್ ಕಾದಂಬರಿಗಳನ್ನು ಬರೆದಿದ್ದರೂ ಯಾವುದೂ ಹೋಮ್ಸ್‌ನ ಕತೆಗಳ ಹಾಗೆ ಖ್ಯಾತಿ ಪಡೆಯಲಿಲ್ಲ. ಹೋಮ್ಸ್‌ನ ಮೊದಲ ಸಾಹಸಗಳಲ್ಲೊಂದಾದ 'A study in scarlet' ಪ್ರಕಟಿಸಲು ಯಾರೂ ಮುಂದಾಗದೇ, ಕೊನೆಗೆ ಅದರ ಎಲ್ಲ ಹಕ್ಕುಗಳನ್ನು ಕೇವಲ 25 ಪೌಂಡ್‌ಗಳಿಗೆ ಮಾರಿದ. ಅವನಿಗೆ ಅದರಿಂದ ಬಂದ ಒಟ್ಟು ಮೊತ್ತ ಅಷ್ಟೇ. ಅದೇ ಪುಸ್ತಕದ ಮೊದಲ ಮುದ್ರಣದ ಒಂದು ಪ್ರತಿ ಹತ್ತು ವರ್ಷಗಳ ಹಿಂದೆ, ಮೂವತ್ತು ಸಾವಿರ ಪೌಂಡ್‌ಗಳಿಗೆ ಮಾರಾಟವಾಯಿತು! ಸ್ಟ್ರಾಂಡ್ ಎಂಬ ಪತ್ರಿಕೆ ಶೆರ್ಲಾಕ್ ಹೋಮ್ಸ್‌ನ ಕತೆಗಳನ್ನು ಧಾರಾವಾಹಿಯಾಗಿ ಪ್ರಕಟಿಸತೊಡಗಿದ್ದೇ ಅವು ಅತ್ಯಂತ ಜನಪ್ರಿಯವಾಗಿಬಿಟ್ಟವು. ತರ್ಕಬದ್ಧ ವಿಶ್ಲೇಷಣೆಯಲ್ಲಿ, ಸಾಂಸ್ಕೃತಿಕ ವ್ಯತ್ಯಾಸಗಳನ್ನು ಗುರುತಿಸುವಲ್ಲಿ, ಮೇಲ್ನೋಟಕ್ಕೆ ಪರಸ್ಪರ ಸಂಬಂಧವಿಲ್ಲವೆಂದು ಅನಿಸುವ ಸಂಗತಿಗಳ ಹಿಂದೆ ತಳಕು ಹಾಕಿಕೊಂಡ ಎಳೆಗಳನ್ನು ಹಿಡಿಯುವಲ್ಲಿ ಪತ್ತೇದಾರ ಶೆರ್ಲಾಕ್ ಹೋಮ್ಸ್ ಅದ್ವಿತೀಯ. ತನ್ನ ಸೂಕ್ಷ್ಮಜ್ಞತೆ ಮತ್ತು ಕಥನ ಕೌಶಲಗಳನ್ನು ಬಳಸಿ ಕಥೆಯಿಂದ ಕಥೆಗೆ ವಿವರಗಳನ್ನು ಸೇರಿಸುತ್ತ, ಈ ಹೋಮ್ಸ್ ಒಬ್ಬ ಜೀವಂತ ವ್ಯಕ್ತಿಯೋ ಎಂಬಂತೆ ಕಾನನ್ ಡಾಯ್ಲ್ ಅವನ ಸುತ್ತ ಜಗತ್ತೊಂದನ್ನು ಸೃಷ್ಟಿಸಿದ.

ತನ್ನನ್ನು ಖಾಸಗಿ ಪತ್ತೇದಾರ ಎಂದು ಹೋಮ್ಸ್ ಕರೆದುಕೊಳ್ಳುತ್ತಿದ್ದ. ಅವನ ಸ್ನೇಹಿತ ಡಾ. ವ್ಯಾಟ್ಸನ್ ಮಿಲಿಟರಿ ವೈದ್ಯ. ಇಬ್ಬರೂ 1881ರಲ್ಲಿ ಲಂಡನ್‌ನಲ್ಲಿ ಭೆಟ್ಟಿಯಾದರು. ದುಡ್ಡು ಉಳಿಸುವ ಸಲುವಾಗಿ ಇಬ್ಬರೂ ಒಂದೇ ಲಾಡ್ಜ್‌ನಲ್ಲಿ ವಾಸ್ತವ್ಯ ಮಾಡಿದರು. ಮುಂದಿನ ವರ್ಷಗಳಲ್ಲಿ ಡಾ.ವ್ಯಾಟ್ಸನ್

ಮದುವೆಯಾಗಿ ಬೇರೆ ಮನೆಗೆ ಹೋಗುತ್ತಾನೆ. ಹೋಮ್ಸ್ ಮಾತ್ರ ಅದೇ ಮನೆಯಲ್ಲಿ ಮುಂದಿನ 25 ವರ್ಷಗಳ ಕಾಲ ವಾಸಿಸುತ್ತಾನೆ. ಇದೇ 221B ಬೇಕರ್ ಸ್ಟ್ರೀಟ್. ಸಾಮಾನ್ಯವಾಗಿ ಹಿರಿಯ ಸಾಹಿತಿ, ಕಲಾವಿದರ ಮನೆ ಮತ್ತು ಬಳಕೆಯ ವಸ್ತುಗಳನ್ನು ಸ್ಮಾರಕವಾಗಿ ಕಾಯ್ದುಕೊಳ್ಳುವುದು ವಾಡಿಕೆ. ಆದರೆ ಜನಪ್ರಿಯ ಪಾತ್ರವೊಂದರ ಸುತ್ತ ಸ್ಮಾರಕವೊಂದು ಎದ್ದುನಿಂತಿರುವ ಇಲ್ಲಿಯ ರೀತಿ ಅದ್ಭುತರಮ್ಯ. ಲಂಡನ್‌ನ ಈ ರಸ್ತೆಯ, ಈ ಸಂಖ್ಯೆಯ ಮನೆ, ಕಲ್ಪನೆ ಮತ್ತು ವಾಸ್ತವಗಳ ಸಂಧಿಸ್ಥಾನದಂತಿದೆ. ಹೋಮ್ಸ್‌ನನ್ನು ಕಲ್ಪನಾ ಜಗತ್ತಿಗೆ ಸಲ್ಲಲು ಬಿಡಲೊಪ್ಪದವರಂತೆ, ಕತೆಗಳಲ್ಲಿ ಸಿಗುವ ಪ್ರತಿ ವಿವರಗಳನ್ನು ಗಮನಿಸಿ, ನೂರು ವರ್ಷಗಳ ಹಿಂದಿನ ವಸ್ತುಗಳನ್ನು ಜೋಡಿಸಿ, ಈ ಮನೆಯನ್ನು ರೂಪಿಸಲಾಗಿದೆ. ತನ್ನ ಗ್ರಹಿಕೆಯ ಅಳವಿನೊಳಗೆ ಎಲ್ಲವನ್ನೂ ಕೂರಿಸಲು ಬಯಸುವ ಮನುಷ್ಯನ ಇನ್ನೊಂದು ಪ್ರಯತ್ನದಂತಿದೆ. ಕಲ್ಪನೆ ಮತ್ತು ವಾಸ್ತವದ ಜಗತ್ತುಗಳು ನಡುವಿನ ಗೆರೆದಾಟಲು ಪರಸ್ಪರ ಸೆಳೆದಾಡಿದಂತೆ ಅನಿಸುತ್ತದೆ. ಲೇಖಕನಾಗಿ ಕಾನನ್ ಡಾಯಲ್‌ನ ಕೌಶಲ್ಯ ಎಂಥದ್ದೆಂದರೆ ಕತೆಗಳಲ್ಲಿ ಹೋಮ್ಸ್‌ನ ಬಗ್ಗೆ ಆತ ಒದಗಿಸಿದ ಸಾವಿರಾರು ವಿವರಗಳಲ್ಲಿ ಒಂದಿನಿತೂ ವೈರುಧ್ಯಗಳಿಲ್ಲ.



ಶೆರ್ಲಾಕ್ ಹೋಮ್ಸ್‌ನ ಅಭಿಮಾನಿಗಳು ಜಗತ್ತಿನಾದ್ಯಂತ ಇದ್ದಾರೆ. 'ಶೆರ್ಲಾಕಿಯನ್ಸ್' ಎಂದು ತಮ್ಮನ್ನು ಕರೆದುಕೊಳ್ಳುವ ಇವರು ಹೋಮ್ಸ್ ಬಗ್ಗೆ ಸಂಶೋಧನೆಗಳನ್ನು ನಡೆಸಿದ್ದಾರೆ. ಅವನ ಜೀವನ ಚರಿತ್ರೆ ಬರೆದವರಿದ್ದಾರೆ. ಅಭಿಮಾನಿ ಸಂಘಗಳನ್ನು ಮಾಡಿಕೊಂಡಿದ್ದಾರೆ. ಹೋಮ್ಸ್‌ನ ಜನಪ್ರಿಯತೆಯಿಂದ ಬೇಸತ್ತು ಕಾನನ್ ಡಾಯಲ್ ಒಂದು ಕತೆಯಲ್ಲಿ ಅವನನ್ನು ಸಾಯಿಸಿಬಿಟ್ಟಿದ್ದ. ನಂತರ ಜನರ ಒತ್ತಾಯ ಮತ್ತು ಬೆದರಿಕೆಗೆ ಮಣಿದು ಮತ್ತೆ ಜೀವದಾನ ಮಾಡಿದ. ಇನ್ನೊಂದು ವಿಚಿತ್ರವೆಂದರೆ ಶೆರ್ಲಾಕ್ ಹೋಮ್ಸ್‌ನ ವ್ಯಕ್ತಿತ್ವಕ್ಕೆ ವಿಶಿಷ್ಟ ಛಾಪು ಕೊಟ್ಟ ಪೈಪ್ ಮತ್ತು ಟೋಪಿ ಎರಡೂ ಕಾನನ್ ಡಾಯಲ್‌ನ ಕಲ್ಪನೆ ಅಲ್ಲ. ಈ ಕತೆಗಳಿಗೆ ಚಿತ್ರ ಬರೆಯುತ್ತಿದ್ದ ಕಲಾವಿದರ ಕೊಡುಗೆ ಅದು!

'ಸಿಲ್ವರ್ ಬ್ಲೇಝ್' ಕತೆಯಲ್ಲಿ, ಇನ್‌ಸ್ಪೆಕ್ಟರ್ ಗ್ರೆಗರಿ ಮತ್ತು ಶೆರ್ಲಾಕ್ ಹೋಮ್ಸ್ ನಡುವಣ ಸಂಭಾಷಣೆ ಹೀಗಿದೆ.

''ನನ್ನ ಗಮನ ಸೆಳೆಯುವಂಥ ವಿವರವನ್ನೇನಾದರೂ ಹೇಳುವುದಿದೆಯೇ?''

''ರಾತ್ರಿ ಜರುಗಿದ, ಈ ನಾಯಿಯ ಕುರಿತಾದ ಕುತೂಹಲಕಾರಿ ಘಟನೆಯ ಬಗ್ಗೆ....''

''ಆದರೆ ಈ ನಾಯಿ ರಾತ್ರಿ ಏನೂ ಮಾಡಲಿಲ್ಲ''

''ಅದೇ ಕುತೂಹಲಕಾರಿ ಘಟನೆ''

ಪತ್ತೆದಾರನ ವಿಸಿಟಿಂಗ್ ಕಾರ್ಡ್





## ಎಸ್. ನರಸಿಂಹಯ್ಯ

# ಬೆದರಿಕೆಯ ಫಲ

### ಪೂರ್ವಾರ್ಧ

ಕಾಲೇಜು ಹುಡುಗಿ ನಳಿನಿ ಸಹಪಾಠಿ ಗಂಗಾಧರನಲ್ಲಿ ಅನುರಕ್ತಿ ಹೊಂದುತ್ತಾಳೆ. ಅವರಿಬ್ಬರ ಒಡನಾಟ ನಿಕಟವಾಗುವ ಹೊತ್ತಿಗೆ ಗಂಗಾಧರ ಒಳ್ಳೆಯ ನಡತೆಯವನಲ್ಲ, ಮೋಸಗಾರ ಅನ್ನುವ ಅಂಶ ಆಕೆಗೆ ತಿಳಿಯುತ್ತದೆ. ಅವನಿಗೆ ಬರೆದ ಪ್ರೇಮಪತ್ರಗಳು ಮತ್ತು ಅವನೊಂದಿಗೆ ತೆಗೆಸಿಕೊಂಡ ಫೋಟೋಗಳನ್ನು ಮರಳಿ ಪಡೆಯುವುದು ಹೇಗೆ ಎಂದಾಕೆಗೆ ಚಿಂತೆಯುಂಟಾಗುತ್ತದೆ. ಅಷ್ಟರಲ್ಲಿ ನಳಿನಿಯ ತಂದೆ ತಾಯಿ ಅವಳಿಗೊಬ್ಬ ಅನುರೂಪ ವರನನ್ನು ನೋಡಿ ಮದುವೆಮಾಡುವ ಪ್ರಯತ್ನದಲ್ಲಿ ತೊಡಗುತ್ತಾರೆ. ಗಂಗಾಧರನನ್ನು ಭೇಟಿಯಾಗಿ ನಳಿನಿ ಫೋಟೋ ಮತ್ತು ಪತ್ರ ಹಿಂದಿರುಗಿಸಲು ಬೇಡುತ್ತಾಳೆ. ಅವನು ಸಲ್ಲದ ಶರತ್ತನ್ನೊಡ್ಡಿ ನಿರಾಕರಿಸುತ್ತಾನೆ. ರೌಡಿ ಭೈರವನನ್ನು ಪ್ರೇಮಿಸಿ ಮದುವೆಯಾದ ತನ್ನ ಗೆಳತಿ ಮಂಜುಳೆಯನ್ನು ಸಂಪರ್ಕಿಸಿ, ಭೈರವನ ಸಹಾಯ ಪಡೆಯಲೆಂದು ಹೋದರೆ, ಅಲ್ಲಿಯೂ ಮುಖಭಂಗವಾಗುತ್ತದೆ. ಕಡೆಯ ಪ್ರಯತ್ನವಾಗಿ ನಳಿನಿ ಖ್ಯಾತ ಪತ್ತೇದಾರ ಗಾಳಿರಾಯನನ್ನು ಭೇಟಿ ಮಾಡುತ್ತಾಳೆ.

### ಉತ್ತರಾರ್ಧ-



"ನಳಿನೀ, ನೀನು ನನ್ನ ಬಳಿ ಮುಚ್ಚುಮರೆ ಮಾಡೋದು ಬೇಡ. ನಿನಗೆ ಯಾರಿಂದ ಏನು ತೊಂದರೆ ಸಂಭವಿಸಿದೆ? ಏನೊಂದು ವಿಷಯವನ್ನೂ ಮುಚ್ಚಿಡದೆ ಹೇಳು"

ಬೆರಗಾದ ನಳಿನಿಗೆ ಮಂಕು ಕವಿದಂತಾಗಲು ಉಸಿರಾಡದ ಗೊಂಬೆಯಂತಾದಳು.

ಮರುಗಳಿಗೆ ಚೇತರಿಸಿಕೊಂಡು

"ನಾ - ನಾ - ನಾನು ನಳಿನಿಯಲ್ಲ" ಎಂದಳು.

"ನನ್ನ ಬಳಿ ನಿನ್ನ ನಾಟಕಬೇಡ. ನಿ
ಗೆಳತಿಯೇ ಬಂದಿದ್ದರೆ ನಿನ್ನ ಹಾಗೆ ಕ್ಷೀಣ ಸ್ವರದ
ಮಾತನಾಡದೆ ಮನಬಿಚ್ಚಿ ಮಾತಾಡುತ್ತಿದ್ದಳು
ಮುಖದಲ್ಲಿ ಗೆಲುವಿರುತ್ತಿತ್ತು. ನಿನ್ನ ಮರ್ಯಾದೆ
ಕುಂದು ಬಾರದ ಹಾಗೆ ನೋಡಿಕೊಳ್ಳುವ ಜವಾಬ್ದಾ
ನನಗಿರಲಿ. ನಿನ್ನ ಕಥೆ ಆರಂಭವಾಗಲಿ."

ತನ್ನ, ಗಂಗಾಧರನ ಪರಿಚಯವಾ
ಲಾಗಾಯ್ತು, ಮಂಜುಳೆಯಿಂದ ತಿರಸ್ಕರಿಸಲ್ಪಡ
ವವರೆಗೆ ನಡೆದ ಪ್ರಕರಣವನ್ನು ಚಾಚೂ ತ
ದಂತೆ ಹೇಳಿದ ನಳಿನಿಯು, 'ನಿಮ್ಮನ್ನೇ ನಂ
ಬಂದಿರುವುದರಿಂದ ನನ್ನ ಗೌರವ ಉಳಿ

ಕಾಪಾಡಬೇಕೆಂದು' ಗದ್ಗದಿತಳಾಗಿ ಬೇಡಿಕೊಂಡು, ಕೈ ಮುಗಿದು ಪ್ರಾರ್ಥಿಸಿದಳು.

ಅವಳ ಕರುಣಾಜನಕ ಕಥೆ ಕೇಳಿದ ಇಬ್ಬರಿಗೂ ಆಕೆಯ ಬಗ್ಗೆ ಮರುಕವುಂಟಾಯಿತು.

ಗಂಗಾಧರನ ಬಗ್ಗೆ ತನಗೆ ಬೇಕಾದ ಮುಖ್ಯ ವಿಷಯಗಳನ್ನು ಕೇಳಿ ತಿಳಿದ ಗಾಳಿರಾಯನು, ಒಂದು ವಾರದಲ್ಲಿಯೇ ನಿನ್ನ ಕಾರ್ಯವನ್ನು ಮುಗಿಸಿಕೊಡುವೆನೆಂದು ಆಕೆಗೆ ಭರವಸೆಯಿತ್ತು, ವಾರ ಕಳೆದ ನಂತರ ಬಂದು ಕಾಣುವಂತೆ ಹೇಳಿದ.

ಎದ್ದು ನಿಂತ ನಳಿನಿಯು ಕೃತಜ್ಞತಾಪೂರ್ವಕವಾಗಿ ನಮಸ್ಕಾರ ಮಾಡಿ, ಮನಸ್ಸಿನ ಬೇಗುದಿ ಕಳೆದುಕೊಂಡು ಸಂತೋಷದಿಂದ ಹಿಂದಿರುಗಿದಳು.

''ವಾರಕಳೆದು ಬರುವಂತೆ ಹೇಳಿದಿರಲ್ಲ, ಅಷ್ಟರಲ್ಲಿಯೇ ಗಂಗಾಧರನಲ್ಲಿರುವ ಫೋಟೋ, ಪತ್ರಗಳನ್ನು ಅಪಹರಿಸುವಿರಾ? ಆತನು ಅವುಗಳನ್ನು ಗುಪ್ತವಾದ ಸ್ಥಳದಲ್ಲಿ ಅಡಗಿಸಿಟ್ಟಿರಬಹುದು.''

ನಳಿನಿಯು ಹಿಂದಿರುಗಿದ ನಂತರ ಬಾಲಚಂದ್ರನು ತನ್ನ ಅಭಿಪ್ರಾಯದ ಬಗ್ಗೆ ಪತ್ತೇದಾರನಿಗೆ ಪ್ರಶ್ನಿಸಿದ.

''ನಾನು ಅಪಹರಿಸುವ ಸಾಹಸಕ್ಕೇ ಹೋಗುವುದಿಲ್ಲ. ಅವುಗಳನ್ನು ಎಲ್ಲಿಯಾದರೂ ಬಚ್ಚಿಟ್ಟಿರಲಿ, ಆ ಚಿಂತೆಯೇನೂ ನನಗಿಲ್ಲ. ಸುಲಭವಾಗಿಯೇ ಆ ಪತ್ರಗಳು ನನ್ನ ಕೈಸೇರುವ ಹಾಗೆ ವ್ಯವಸ್ಥೆ ಮಾಡುತ್ತೇನೆ.''

''ಸುಲಭವಾಗಿ ಅಂದರೆ ಹೇಗೆ?''

''ಇನ್‌ಸ್ಪೆಕ್ಟರ್ ಬಳಿ ವಿಷಯ ಹೇಳಿ, ಆತನು ಅನುಸರಿಸಬೇಕಾದ ವಿಧಾನ ಹೇಳಿದರೆ ಸಾಕು, ನನ್ನ ಕೆಲಸ ಮುಗಿದ ಹಾಗೆಯೇ.''

''ಇನ್‌ಸ್ಪೆಕ್ಟರ್ ಅನುಸರಿಸಬೇಕಾದ ವಿಧಾನ ಏನು?''

''ಮಾಜಿ ಕಳ್ಳನೊಬ್ಬನಿಗೆ ಗಂಗಾಧರನ ಮುಖ ಪರಿಚಯ ಮಾಡಿಸುವುದು. ಆ ಪ್ರವರ ಗಂಗಾಧರನಿಗೆ ತಿಳಿಯಬಾರದು. ಪೊಲೀಸನ ಮೂಲಕ ಗಂಗಾಧರನನ್ನು ಸ್ಟೇಷನ್ನಿಗೆ ಕರೆಯಿಸಿ,

ಆತನಿಗೆ ಮಾಜಿ ಕಳ್ಳನನ್ನು ತೋರಿಸಿ, ಇವನು ಶ್ರೀಮಂತರೊಬ್ಬರ ಬಂಗಲೆಯಿಂದ ಹಣ, ಒಡವೆಗಳನ್ನು ಅಪಹರಿಸಿದ್ದಾನೆ. ನಾವು ಸೆರೆ ಹಿಡಿದನಂತರ ಒಡವೆಗಳನ್ನು ನಿನಗೆ ಮಾರಿದ್ದೇನೆಂದು ಹೇಳಿದ್ದಾನೆ. ಆ ಒಡವೆಗಳನ್ನು ಎಲ್ಲಿಟ್ಟಿರುವೆ? ತಂದುಕೊಡು, ಇಲ್ಲವಾದರೆ ನಿನ್ನ ಮೇಲೂ ಕೇಸು ಹಾಕಿ ಜೈಲಿಗೆ ಕಳುಹಿಸಬೇಕಾಗುವುದು ಎಂದು ಇನ್‌ಸ್ಪೆಕ್ಟರ್ ಬೆದರಿಕೆ ಹಾಕಬೇಕು.''

''ಬೆದರಿಕೆ ಹಾಕಿದ ಮಾತ್ರಕ್ಕೆ ಆತನು ಒಪ್ಪಿಕೊಳ್ಳುವನೇ? ನೀವು ಹೇಳೋದು ಕೇಳಿದರೆ ಸಿನಿಮಾ ಕಥೆಯಂತಿದೆ.''

''ಗಂಗಾಧರನು ಒಪ್ಪಿಕೊಳ್ಳುವುದಿಲ್ಲ. ಇನ್‌ಸ್ಪೆಕ್ಟರ್‌ನ ಬೆದರಿಕೆಗೆ ಮಣಿದರೂ ಈ ಕಳ್ಳನ ಪರಿಚಯವೇ ಇಲ್ಲವೆಂದು ಹೇಳುವನು.''

''ಆಮೇಲೆ?''

''ನಿನ್ನ ಮನೆ ಶೋಧನೆ ಮಾಡಿ ನೋಡಬೇಕಾಗುತ್ತೆ ಎಂದು ಇನ್‌ಸ್ಪೆಕ್ಟರ್ ಹೇಳಿ ಅವನನ್ನು ಪೊಲೀಸರ ಸಹಿತ ಮನೆಗೆ ಕರೆದುಕೊಂಡು ಬಂದು, ಒಂದು ಕಡೆ ಕೂರಿಸಿ, ಮನೆಯ ಶೋಧನೆಯ ನಾಟಕ ಆಡಿ, ಆ ಪತ್ರಗಳು ಮತ್ತು ಫೋಟೋಗಳನ್ನು ಹುಡುಕಿ ತೆಗೆದು, ಒಡವೆಗಳು ಸಿಗಲಿಲ್ಲ-ಬೇರೆ ಎಲ್ಲಿಟ್ಟಿರುವೆ? ಎಂದು ಬೆದರಿಸಿ, ಅವನು ನನಗೆ ಗೊತ್ತಿಲ್ಲವೆಂದೇ ಹೇಳಿದರೂ ಏಕಾಏಕಿ ಬಿಡದೆ, ಸ್ಟೇಷನ್ನಿಗೆ ಕರೆತಂದು, ಅವನಿಂದ ಬರೆಯಿಸಿಕೊಂಡು, ಒಡವೆಗಳು ಸಿಗುವವರೆಗೆ ದಿನವೂ ಸ್ಟೇಷನ್ನಿಗೆ ಹಾಜರಿ ಕೊಡಬೇಕೆಂದೂ, ತಪ್ಪಿದ್ದೇ ಆದರೆ ಒಳಗೆ ತಳ್ಳಬೇಕಾಗುವುದೆಂದು ಬೆದರಿಸಿ ಕಳುಹಿಸಿದರಾಯಿತು. ಅಲ್ಲಿಗೆ ನಮ್ಮ ಕಾರ್ಯ ಪೂರೈಸಿದ ಹಾಗೆಯೇ.''

''ನಿಮ್ಮ ಆಲೋಚನೆಯೇನೋ ಚೆನ್ನಾಗಿಯೇ ಇದೆ. ಅದರಂತೆ ನಡೆದರೆ ಪರವಾಗಿಲ್ಲ. ಫೋಟೋ, ಪತ್ರಗಳನ್ನು ಬೇರೆ ಕಡೆ ಅಡಗಿಸಿಟ್ಟಿದ್ದರೆ?''

''ಮನೆಯಲ್ಲಿಯೇ ಇರುವುದೆಂಬ ನಂಬಿ
ನನಗಿದೆ.''

''ಹಾಗೊಂದು ವೇಳೆ ಅಲ್ಲಿಲ್ಲವಾದರೆ?''

''ಬೇರೊಂದು ರೀತಿ ಉಪಾಯ ಹೂ
ಬೇಕಾಗುವುದು. ನಳಿನಿಗೆ ಭರವಸೆ ಇತ್ತಿರುವು
ರಿಂದ ಯಾವ ರೀತಿಯಿಂದಲಾದರೂ ನವ
ಕಾರ್ಯದಲ್ಲಿ ಯಶಸ್ವಿಯಾಗಲೇಬೇಕು.''

''ಆದಷ್ಟು ಬೇಗ ಈ ಕೆಲಸ ಮುಗಿಸಿಬಿ
ನಳಿನಿಯ ಬಾಳನ್ನು ಹಾಳು ಮಾಡಲು ಪತ್
ಫೋಟೋಗಳೇ ಆತನಿಗೆ ಆಧಾರವಾಗಿರುತ್ತ
ಅವುಗಳಿಲ್ಲವಾದರೆ ಅವನೇನೂ ಮಾಡು
ಹಾಗಿಲ್ಲ. ಬಾಯಿಮಾತಿನಲ್ಲಿ ಏನು ಹೇಳಿದರು
ನಡೆಯದು.''

ನಸುನಕ್ಕ ಗಾಳಿರಾಯನು, ಗೆಳೆಯನ ಹೆಗ
ಮೇಲೆ ಕೈ ಹಾಕಿ, ಕಾಫಿ ಕುಡಿಯಲು ಕರೆದ
ಕೊಂಡು ಹೊರಟ.

ಆದಷ್ಟು ಬೇಗ ಈ ಕಾರ್ಯ ಮಾಡಿ ಮುಗಿ
ಬೇಕೆಂಬ ಇಚ್ಛೆಯುಳ್ಳವನಾಗಿ, ಕಾಫಿ ಕುಡಿದಾ
ನಂತರ ಗೆಳೆಯನನ್ನು ಬೀಳ್ಕೊಟ್ಟು, ಇನ್‌ಸ್ಪೆಕ್ಟ
ನನ್ನು ಕಾಣಲು ಪೊಲೀಸ್ ಠಾಣೆಯ ದಾ
ಹಿಡಿದು ಹೊರಟ.



ಬೆಳಗಿನ ಎಂಟು ಘಂಟೆ ಸಮಯ.

ಗಾಳಿರಾಯನು ಬಾಲಚಂದ್ರನೊಡ
ನಳಿನಿಯ ವಿಷಯವಾಗಿಯೇ ಮಾತನಾಡು
ಕುಳಿತಿರಲು ಟೆಲಿಫೋನ್ ಬೆಲ್ಲು ಬಾರಿಸಿತು.

ರಿಸೀವರನ್ನು ತೆಗೆದುಕೊಂಡ ಗಾಳಿರಾಯ

''ಹಲೋ, ನಾನು ಗಾಳಿರಾಯ'' ಎಂದ.

''ನಾನು ಇನ್‌ಸ್ಪೆಕ್ಟರ್ ಜಗನ್ನಾಥ.''

ಗಾಳಿರಾಯನಿಗೆ ಫೋನ್ ಮಾಡಿದ್ದ ಇನ್‌ಸ್
ರನು ಮರುನುಡಿದ.

"ನಾನು ಒಪ್ಪಿಸಿದ ಕಾರ್ಯದ ಬಗ್ಗೆ ಮಾತನಾಡಬೇಕಾಗಿದೆಯೇ?"

"ಆ ವಿಷಯವಾಗಿ ಮಾತನಾಡಬೇಕಾದು ದೇನೂ ಇಲ್ಲ."

"ಹಾಗಾದರೆ ಬೇರೇನು ವಿಷಯ?"

"ಗಂಗಾಧರನು ಕೊಲೆಯಾಗಿದ್ದಾನೆ."

ಸೋಜಿಗನಾದ ಗಾಳಿರಾಯನು

"ಏನೂ, ಕೊಲೆಯೇ?" ಎಂದು ಕೇಳಿದ.

"ಹೌದು, ಕೊಲೆ."

"ಯಾವಾಗ ನಡೆಯಿತು?"

"ಅದೇನೂ ತಿಳಿಯದು. ನಾನು ಠಾಣೆ ಯಿಂದಲೇ ಮಾತನಾಡುತ್ತಿದ್ದೇನೆ. ಹತ್ತು ನಿಮಿಷ ಮೊದಲು ವಿಷಯ ತಿಳಿಯಿತು. ನಾನು ಆ ಕೂಡಲೇ ನಿಮಗೆ ಫೋನ್ ಮಾಡಿದೆ. ನಾನು ಈಗಲೇ ಹೋಗುತ್ತೇನೆ. ನೀವು ಅಲ್ಲಿಗೇ ಬನ್ನಿ."

ಬರುವೆನೆಂದ ಗಾಳಿರಾಯನು ರಿಸೀವರನ್ನು ಕೆಳಗಿಟ್ಟು, ಬಾಲಚಂದ್ರನೊಡನೆ ವಿಷಯ ಹೇಳಿದ.

ಆಶ್ಚರ್ಯಗೊಂಡ ಬಾಲಚಂದ್ರನು,

"ಎಂತಹ ವಿಚಿತ್ರ, ನೆನ್ನೇ ದಿನವೇ ಇನ್‌ಸ್ಪೆಕ್ಟರೊಡನೆ ನಳಿನಿಯ ವಿಷಯ ಹೇಳಿ, ಆ ಕಾರ್ಯ ಒಪ್ಪಿಸಿದಿರಿ. ಇನ್‌ಸ್ಪೆಕ್ಟರು ಇನ್ನೂ ಪ್ರಾರಂಭ ಮಾಡಿಯೇ ಇಲ್ಲವೆಂದು ತೋರುತ್ತೆ. ನಾವು ಆ ಬಗ್ಗೆಯೇ ಮಾತನಾಡುತ್ತಿದ್ದ ಹಾಗೆ ಆ ಮನುಷ್ಯನೇ ಕೊಲೆಯಾದನೆಂದರೆ ಆಶ್ಚರ್ಯ ವಲ್ಲವೇ?" ಎಂದು ಹೇಳಿದ.

"ನಿಜವಾಗಿ ಆಶ್ಚರ್ಯವೇ!"

"ಆ ಹತ್ಯೆಯ ಬಗ್ಗೆ ನಿಮ್ಮ ಊಹಾ ಯೋಚನೆಗೇನು ಹೊಳೆಯುತ್ತೆ?"

"ಈಗ ನಾನೇನೂ ಹೇಳಲಾರೆ. ಮೊದಲು ಅಲ್ಲಿಗೆ ಹೋಗಿ, ಅಲ್ಲಿನ ಪರಿಸರ ನೋಡಿದ ನಂತರ ಹೇಳಬೇಕಾಗುವುದು."

"ಹೋಗಿ ಬನ್ನಿ."

ಬಾಲಚಂದ್ರನನ್ನು ಬೀಳ್ಗೊಟ್ಟು, ಗಾಳಿ ರಾಯನು ತನ್ನ ವಾಹನದಲ್ಲಿ ಮಾರ್ಕೆಟ್ ಬೀದಿಗೆ ಹೊರಟ.



ಅಲ್ಲಿಗೆ ಹೋಗುವ ವೇಳೆಗಾಗಲೇ ಅಗಾಧ ಸಂಖ್ಯೆಯಲ್ಲಿ ಜನ ಸೇರಿದ್ದಾರೆ.

ಜನಸಂದಣಿಯಲ್ಲೇ ನುಸುಳಿ ಗಾಳಿರಾಯನು ಮನೆಯೊಳಗೆ ಹೋದ.

ಮನೆಯೊಳಗೆ ಪ್ರವೇಶ ಮಾಡುತ್ತಲೇ, ಎಡಗಡೆಯಿರುವ ರೂಮಿನಲ್ಲಿ ಗಂಗಾಧರನು ಕೊಲೆಯಾಗಿ ಬಿದ್ದಿರುವನು.

ಹರಿತವಾದ ಚಾಕುವಿನಿಂದ ಹೊಟ್ಟೆಗೆ ತಿವಿದಿರುವುದರಿಂದ ಬಲವಾದ ಗಾಯವಾಗಿ, ಆ ಗಾಯವೇ ಸಾವಿಗೆ ಕಾರಣವಾಗಿದೆ. ಸಾಯುವ ಮುನ್ನ ನೆಲದ ಮೇಲೆ ಒದ್ದಾಡಿರುವುದರಿಂದ, ರೂಮಿನ ತುಂಬಾ ರಕ್ತ ಹರಡಿದೆ. ಮೈಮೇಲಿನ ಉಡುಪುಗಳು ರಕ್ತಮಯವಾಗಿವೆ.

ಗಾಳಿರಾಯನು ಶವದ ಪರಿಸ್ಥಿತಿಯನ್ನೂ, ರೂಮಿನ ವಾತಾವರಣವನ್ನೂ ನೋಡಿದ.

ರೂಮಿನಲ್ಲಿ ಜೋಡಿಸಿಟ್ಟಿರುವ ವಸ್ತುಗಳಲ್ಲಿ ಯಾವುದನ್ನೇ ಆಗಲಿ, ಕದಲಿಸಿದ ಹಾಗೆ ತೋರ ಲಿಲ್ಲ. ಕದಲಿಸಿದ್ದರೆ ಸ್ಪಷ್ಟವಾಗಿ ತಿಳಿಯುತ್ತಿತ್ತು.

ಆ ಪರಿಸ್ಥಿತಿಯನ್ನು ಕಂಡ ಗಾಳಿರಾಯನು ಸೇಡಿನ ಪರಿಣಾಮವಾಗಿ ಹತ್ಯೆ ನಡೆದಿದೆಯಲ್ಲದೆ ಕಳ್ಳತನಕ್ಕೆ ಬಂದವನಿಂದಾಗಲಿ, ಇತರ ಕಾರಣ ಗಳಿಗೇ ಆಗಲಿ ಕೊಲೆ ನಡೆದಿಲ್ಲವೆಂದು ತೀರ್ಮಾನ ಮಾಡಿಕೊಂಡ.

''ನಾನು ನಿಮ್ಮ ನಿರೀಕ್ಷೆಯಲ್ಲಿಯೇ ಇದ್ದೆ. ನೀವು ಈತನನ್ನು ವಿಚಾರಿಸಿಕೊಳ್ಳುವಂತೆ ನೆನ್ನೆ ತಾನೇ ಹೇಳಿದಿರಿ. ಇಂದು ಬೆಳಗ್ಗೆ ಈತನ ಕೊಲೆ ನಡೆದಿದೆ.''

ಇನ್‌ಸ್ಪೆಕ್ಟರನು ಗಾಳಿರಾಯನನ್ನು ಉದ್ದೇಶಿಸಿ ಹೇಳಿದ.

''ಈ ಮನೆಯಲ್ಲಿ ಬೇರೆ ಯಾರೂ ಇಲ್ಲವೇ?''

ಗಾಳಿರಾಯನು ಇನ್‌ಸ್ಪೆಕ್ಟರನ ಮಾತಿಗೆ ತನ್ನ ಪ್ರತಿಕ್ರಿಯೆ ವ್ಯಕ್ತಪಡಿಸದೆ ತನ್ನ ಪ್ರಶ್ನೆಯನ್ನು ಆತನ ಮುಂದಿರಿಸಿದ.

''ತಮ್ಮ ಸಮೀಪ ಬಂಧುವಿನ ಮರಣ ವಾರ್ತೆ ಕೇಳಿ ಮೃತನ ತಂದೆತಾಯಿ ಇಬ್ಬರೂ ಹೇಮಗಿರಿಗೆ ಹೋಗಿದ್ದಾರೆ. ಅಲ್ಲಿಗೆ ಈ ವಿಷಾದ ವಾರ್ತೆ ಹೋಗಿದೆ. ಅವರೀಗಾಗಲೇ ಹೊರಟಿದ್ದಾರೆ.''

ಪತ್ತೇದಾರನ ಪ್ರಶ್ನೆಗೆ ಇನ್‌ಸ್ಪೆಕ್ಟರನು ಉತ್ತರಿಸಿದ.

''ಕೊಲೆಗಾರನು ಸಮಯ ನಿರೀಕ್ಷೆಯಲ್ಲಿದ್ದು, ನೆನ್ನೆ ರಾತ್ರಿ ಇಲ್ಲಿಗೆ ಬಂದು, ಇವನನ್ನು ಕೊಲೆ ಮಾಡಿ ಹೋಗಿದ್ದಾನೆಂದು ಹೇಳಬಹುದು. ಏಕಾಏಕಿ ಕೊಲೆ ನಡೆದಿರದೆ, ಬಹುದಿನಗಳ ಹೊಂಚಿನ ಸಂಚೆಂದು ಹೇಳಬಹುದು. ಏನಾದರೂ ಕಳ್ಳತನ ನಡೆದಿದೆಯೇ?''

''ಅದೇನೂ ನಡೆದ ಹಾಗಿಲ್ಲ.''

''ಸರಿ ಮುಂದಿನ ಕಾರ್ಯ ನಿರ್ವಹಿಸಿ. ನಿಮ್ಮ ಕೆಲಸ ಮುಗಿದ ನಂತರ ಬಂದು ಕಾಣುತ್ತೇನೆ.''

ಮನೆಗೆ ಮರಳಿ, ಹೊರಗಿನ ವರಾಂಡದಲ್ಲಿ ಸೋಫಾದ ಮೇಲೆ ಕುಳಿತು, ಕೊಲೆಯ ಬಗ್ಗೆ ಯೋಚನೆಗೊಳಗಾಗಿರಲು ನಳಿನಿಯ ಆಗಮನವಾಯಿತು.

''ಸರಿಯಾದ ವೇಳೆಗೆ ಬಂದಿದ್ದೀಯ. ನಿನ್ನನ್ನು ಕಂಡು ಮಾತನಾಡಬೇಕಾಗಿತ್ತು. ಕಾಣುವ ಬಗೆ ಹೇಗೆಂದು ಯೋಚನೆಗೊಳಗಾಗಿದ್ದೆ. ಕಾಕತಾಳೀಯದಂತೆ ಬಂದಿರುವೆ. ಗಂಗಾಧರನ ಕೊಲೆಯ ಸುದ್ದಿ ಕೇಳಿ ಬಂದಿದ್ದೀಯಲ್ಲವೇ?''

''ಹೌದು ಸಾರ್.''

ತಲೆಯಾಡಿಸುತ್ತಾ ಹೇಳಿದಳು ನಳಿನಿ.

''ನೀನೀಗ ದೊಡ್ಡ ಗಂಡಾಂತರದಿಂ ಪಾರಾದ ಹಾಗಾಯಿತು. ಸೂಕ್ಷ್ಮವಾಗಿ ಯೋಚಿ ನೋಡಿದರೆ ಫೋಟೋ, ಪತ್ರಗಳಿಗಾಗಿಯ ಗಂಗಾಧರನ ಹತ್ಯೆ ನಡೆದಿದೆಯೆಂದು ಹೇ ಬಹುದು.''

ನಳಿನಿಯು ತಲೆಯೆತ್ತಿ,

''ಕೊಲೆ ಯಾವ ಕಾರಣಕ್ಕಾದರೂ ನ ದಿರಲಿ. ಫೋಟೋ, ಪ್ರೇಮಪತ್ರಗಳು ನನ್ನ ಸೇರುವವರೆಗೆ ನನಗೆ ಅಪಾಯ ತಪ್ಪಿದ್ದಲ್ಲ ಎಂದಳು.

''ಫೋಟೋ, ಪತ್ರಗಳ ಬಗ್ಗೆ ಚಿಂತಿ ಕಳವಳಪಡುವ ಅವಶ್ಯಕತೆಯಿಲ್ಲ. ಆ ಕಾರ್ಯ ಬಗ್ಗೆ ಇನ್‌ಸ್ಪೆಕ್ಟರ್ ಮುತುವರ್ಜಿವಹಿಸಿ, ಅ ಪರಾಧೀನವಾಗದಂತೆ ನೋಡಿಕೊಂಡು, ನಿ ವಶ ಒಪ್ಪಿಸುವನು. ಅಥವಾ ಅಲ್ಲಿಯೇ ನಾ



ಪಡಿಸುವನು. ನನಗೀಗ ಆ ಬಗ್ಗೆ ಅಣುಮಾತ್ರವೂ ಚಿಂತೆಯಿಲ್ಲ. ಗಂಗಾಧರನು ಯಾವ ಕಾರಣಕ್ಕಾಗಿ ಕೊಲೆಯಾದ? ಹತ್ಯಾಕಾರಿ ಯಾರೆಂಬುದನ್ನು ಪತ್ತೆಮಾಡಿ ಹಿಡಿಯಬೇಕಾಗಿದೆ. ನೀನು ಯಾವ ಬಗೆಯ ಚಿಂತೆಗೊಳಗಾಗದೆ ಧೈರ್ಯವಾಗಿರು. ನಿನ್ನ ವಿವಾಹ ಕಾರ್ಯವು ಯಾವ ತರಹದ ಅಡ್ಡಿ ಆತಂಕಗಳಿಲ್ಲದೆ ನೆರವೇರುವುದು.''

ನಳಿನಿಯು ಕೃತಜ್ಞತಾಪೂರ್ವಕವಾಗಿ ನಮಸ್ಕರಿಸಿ, ಈ ನಿಮ್ಮ ಉಪಕಾರವನ್ನು ನನ್ನ ಜೀವಾವಧಿ ಮರೆಯುವುದಿಲ್ಲವೆಂದಳು.

''ನಿನ್ನ ಮತ್ತು ಗಂಗಾಧರನ ವಿಷಯವಾಗಿ ಮಂಜುಳೆಯ ಬಳಿ ಹೇಳಿ ಪ್ರಾರ್ಥಿಸಿದಂತೆ, ಬೇರೆ ಯಾರಲ್ಲಿಯಾದರೂ ಹೇಳಿರುವಿಯಾ?''

''ಯಾರಲ್ಲಿಯೂ ಹೇಳಿಲ್ಲ ಸಾರ್. ಆಕೆ ಬಳಿಯೂ ಹೇಳುತ್ತಿರಲಿಲ್ಲ. ಅವಳ ಕೈಹಿಡಿದವನು ಪಕ್ಕಾ ರೌಡಿಯಾದ್ದರಿಂದ ಅವನಿಂದ ನನ್ನ ಕೆಲಸ ಆಗುವುದೆಂದು ಭಾವಿಸಿ ಅವಳನ್ನು ಆಶ್ರಯಿಸಿದೆ.''

''ಸರಿ, ನೀನಿನ್ನು ಹೋಗಬಹುದು.''

ಗಾಳಿರಾಯನಿಗೆ ತಲೆಬಾಗಿ ನಮಸ್ಕರಿಸಿದ ನಳಿನಿಯು, ಮದುವೆಯ ಆಮಂತ್ರಣ ಪತ್ರ ಕೊಡುವೆನೆಂದು, ತಪ್ಪದೆ ಮುಹೂರ್ತದ ವೇಳೆಗೆ ಬಂದು ಆಶೀರ್ವದಿಸಬೇಕೆಂದು ಪ್ರಾರ್ಥಿಸಿ ಹಿಂದಿರುಗಿದಳು.

ಆಗ ಮಂಜುಳೆಯ ಜ್ಞಾಪಕ ಬರಲು, ಆಕೆ ಆಡಿದ ವಿಷಬಾಣದಂತಹ ಮಾತುಗಳು ಚಿತ್ತ ಫಲಕದ ಮೇಲೆ ಹರಿಯಿತು.

ಈಗ ಅವಳ ಮನೆಗೆ ಹೋಗಿ, ಚುಚ್ಚು ಮಾತುಗಳನ್ನಾಡಿ, ಮುಯ್ಯಿಗೆ ಮುಯ್ಯಿ ತೀರಿಸಿಕೊಳ್ಳಲೇ ಎಂದುಕೊಂಡಳಾದರೂ ಹೃದಯ ಹಿಂದೇಟು ಹಾಕಿತು.

ಮಂಜುಳೆಯು ನಾರಿಯಲ್ಲ, ಮಹಾಮಾರಿ. ಅವಳಿಗೆ ನಿಂದಿಸಿ ತೆಗಳಿದಾಗ, ನನ್ನ ಮೇಲೆ ಪ್ರಜ್ವಲ ಕೋಪ ತಾಳಿ, ಸೇಡು ತೀರಿಸಿಕೊಳ್ಳುವ ಆಕಾಂಕ್ಷೆಯುಳ್ಳವಳಾಗಿ ಪ್ರದೀಪನ ಮನೆಗೆ ಹೋಗಿ ನನ್ನ ಇತಿಹಾಸ ಹೇಳಿದ್ದೇ ಆದರೆ ನನ್ನ ತಲೆಯ ಮೇಲೆ ನಾನೇ ಕಲ್ಲು ಎಳೆದುಕೊಂಡಂತಾಗುವುದು ಎಂದು ಯೋಚಿಸಿ ತನ್ನ ಯೋಚನೆಗೆ ತರ್ಪಣವಿತ್ತು ಮನೆಯ ದಾರಿ ಹಿಡಿದು ಹೊರಟಳು.

ನಳಿನಿಗೆ ಧೈರ್ಯವಿತ್ತು ಬೀಳ್ಕೊಟ್ಟ ಗಾಳಿರಾಯನು, ಗಂಗಾಧರನ ಹತ್ಯಾಕಾಂಡದ ಬಗ್ಗೆ ಯೋಚನೆಗೊಳಗಾಗಿ ಕುಳಿತಿರಲು, ಇನ್‌ಸ್ಪೆಕ್ಟರನ ಆಗಮನವಾಯಿತು.

''ನಿಮ್ಮ ಕಾರ್ಯವೆಲ್ಲಾ ಪೂರೈಸಿತೇ?''

ಗಾಳಿರಾಯನ ಪ್ರಶ್ನೆಗೆ

''ಮುಗಿಸಿಕೊಂಡೇ ಬಂದಿದ್ದೇನೆ'' ಎಂದು ಉತ್ತರಿಸಿದ ಜಗನ್ನಾಥ.

''ಶವಪರೀಕ್ಷೆ ಮಾಡಿದ ಡಾಕ್ಟರು ಏನೆಂದರು?''

''ವಿಷಮಿಶ್ರಿತ ಪಾನೀಯವು ಮೃತನ ಹೊಟ್ಟೆಗೆ ಸೇರಿದೆಯೆಂದು ಡಾಕ್ಟರು ಹೇಳಿಕೆಯಿತ್ತರು. ಅವರ ಹೇಳಿಕೆ ಕೇಳಿ ನನಗೆ ಮಹದಾಶ್ಚರ್ಯವಾಯಿತು. ಗಂಗಾಧರನನ್ನು ಏಕಾಏಕಿ ಕೊಲ್ಲದೆ, ಪಾನೀಯದಲ್ಲಿ ವಿಷ ಸೇರಿಸಿ ಕೊಟ್ಟು, ಕುಡಿದು ಜ್ಞಾನ ತಪ್ಪಿದ ನಂತರ ಕೊಂದು ಹೊರಟು ಹೋಗಿದ್ದಾನೆ. ಅಂದ ಮೇಲೆ ಗಂಗಾಧರನ ಪರಿಚಿತ ವ್ಯಕ್ತಿಯಿಂದಲೇ ಹತ್ಯೆ ನಡೆದಿದೆ, ಅಲ್ಲವೇ?''

ಗಂಭೀರಭಾವ ತಾಳಿದ ಗಾಳಿರಾಯನು

''ವಿಷಮಿಶ್ರಿತ ಪಾನೀಯವಿದ್ದ ಗ್ಲಾಸಾಗಲೀ, ಬಾಟಲಾಗಲೀ ಮೃತನ ಹತ್ತಿರವಿತ್ತೇ? ನಾನು ಅಲ್ಲಿಗೆ ಬಂದು ನೋಡಿದಾಗ ಅವೇನೂ ಕಾಣಲಿಲ್ಲ'' ಎಂದ.

''ಅದೇನೂ ಇರಲಿಲ್ಲ. ಚಾಣಕ್ಯ ಬುದ್ಧಿಯ ಕೊಲೆಗಾರನು ಅದೇನನ್ನೂ ಬಿಡದೆ ತೆಗೆದುಕೊಂಡೇ ಹೋಗಿದ್ದಾನೆ. ಕೊಲೆ ಮಾಡಿದ ಆಯುಧವನ್ನೂ ಬಿಟ್ಟಿಲ್ಲ.''

"ನಳಿನಿಯ ಜೊತೆ ತೆಗೆಯಿಸಿಕೊಂಡ ಫೋಟೋ, ಆಕೆ ಅವನಿಗೆ ಬರೆದ ಪ್ರೇಮ ಪತ್ರಗಳು?"

"ಅವೂ ಸಿಗಲಿಲ್ಲ, ಎಲ್ಲಾ ಶೋಧನೆ ಮಾಡಿ ನೋಡಿದ್ದಾಯಿತು. ಮನೆಯಲ್ಲಿ ಅಡಗಿಸಿಡದೆ ಬೇರೆಲ್ಲೋ ಬಚ್ಚಿಟ್ಟಿರಬಹುದು. ಅಥವಾ ತನಗೆ ಬೇಕಾದವರ ಬಳಿ ಇಟ್ಟಿರಬಹುದೋ ಏನೋ, ನನಗೇನೋ ಹಾಗೇ ತೋರುತ್ತೆ. ಅಂಗುಲ ಜಾಗವನ್ನೂ ಬಿಡದೆ, ಪೂರ್ಣಶೋಧನೆ ಮಾಡಿ ನೋಡಿದ್ದಾಯಿತು. ಬೇರೆ ಯಾವ ವಸ್ತುವೂ ಅಪಹರಣವಾಗಿಲ್ಲ."

"ಫೋಟೋ, ಪ್ರೇಮಪತ್ರಗಳಿಗಾಗಿಯೇ ಗಂಗಾಧರನ ಹತ್ಯೆ ನಡೆದಿದೆಯೆಂದು ನಿಸ್ಸಂದೇಹವಾಗಿ ಹೇಳಬಹುದು. ಆ ಪತ್ರಗಳು, ಫೋಟೋದಿಂದ ಮೃತನಿಗೆ ಮಾತ್ರ ಪ್ರಯೋಜನವಿತ್ತಲ್ಲದೆ ಬೇರೆ ಯಾರಿಗೂ ಪ್ರಯೋಜನವಾಗದು. ಅವು ಕಳುವಾಗಿರುವುದರಿಂದ ಅವುಗಳಿಂದ ಲಾಭ ಪಡೆಯುವ ಉದ್ದೇಶವು ಕೊಲೆಗಾರನ ಮನದಲ್ಲಿರಬಹುದು. ಬಹು ದಿನಗಳಿಂದ ಹೊಂಚು ಹಾಕುತ್ತಿದ್ದು, ಮೃತನ ತಂದೆತಾಯಿ ಪರ ಊರಿಗೆ ಹೋಗಿದ್ದು ನೋಡಿ, ಮುಂದೆ ಇಂತಹ ಸುಸಮಯವು ಸಿಗಲಾರದೆಂದೆಣಿಸಿ, ರಾತ್ರಿ ಅವನ ಮನೆಗೆ ಹೋಗಿ, ವಿಷ ಬೆರೆತ ಪಾನೀಯ ಕೊಟ್ಟು, ತಾನೂ ಕುಡಿದ ಹಾಗೆ ನಟಿಸಿ, ಜ್ಞಾನತಪ್ಪಿದನಂತರ ಕೊಲೆ ಮಾಡಿ, ಬೇರೆ ಯಾವ ಅಡ್ಡಿ ಆತಂಕವೂ ಇಲ್ಲದೆ ಹೋದ್ದರಿಂದ ಫೋಟೋ, ಪತ್ರಗಳನ್ನು ಹುಡುಕಿ ತೆಗೆದು, ತನ್ನ ಕುರುಹೇನೂ ಬಿಡದೆ ತೆಗೆದುಕೊಂಡು ಹೋಗಿದ್ದಾನೆ."

ಗಾಳಿರಾಯನು ಹತ್ಯಾಕಾಂಡದ ಬಗ್ಗೆ ತನ್ನ ನೈಪುಣ್ಯತೆಯ ವಿವರಣೆ ನೀಡಿದ.



ಗಾಳಿರಾಯನ ಹೇಳಿಕೆಯಂತೆಯೇ ತನ್ನ ಯೋಚನಾಭಿಪ್ರಾಯವನ್ನು ಹೊಂದಿದ್ದ ಜಗನ್ನಾಥನು ಆ ಬಗ್ಗೆ ಆಶ್ಚರ್ಯವೇನೂ ಪಡ[...] ಕೊಲೆಗಾರನ ಬಗ್ಗೆ ನಿಮ್ಮ ಅಭಿಪ್ರಾಯವೇನೆಂದ[...] ಪ್ರಶ್ನಿಸಿದ.

"ನಳಿನಿಯ ಚಿರಪರಿಚಿತ ವ್ಯಕ್ತಿಯಿಂದ [...] ಹತ್ಯೆ ನಡೆದಿದೆಯೆಂದು ಹೇಳಬಹುದು[...] ಫೋಟೋ, ಪತ್ರಗಳ ಅಪಹರಣವೇ ಅದ[...] ಆಧಾರವಾಗಿದೆ."

"ನಳಿನಿಗೆ ಆ ರಹಸ್ಯ ತಿಳಿದಿದೆಯೆಂದ[...] ಹೇಳುವಿರಾ?"

"ಆ ಬಗ್ಗೆ ಪರೀಕ್ಷೆ ಮಾಡಿ ತಿಳಿಯಬೇಕಲ್ಲ[...] ಈಗ ಮಾತ್ರ ನಿರ್ಧಾರವಾ[...] ಹೇಳಲಾಗುವುದಿಲ್ಲ."

"ಪರೀಕ್ಷೆ ಮಾಡುವುದೆಂದರೆ ನಳಿನಿ[...] ಮೂಲಕವೇ ಪರೀಕ್ಷೆ ಮಾ[...] ತಿಳಿಯಬೇಕಲ್ಲವೇ?"

"ನನ್ನ ಆಲೋಚನೆ ಬೇರೆ ಇದೆ."

"ನಳಿನಿಯು ತನ್ನ ಆತ್ಮೀಯರ ಬ[...] ತನಗೊದಗಿದ ಪರಿಸ್ಥಿತಿ ಹೇಳಿಕೊಂ[...] ಪ್ರಾರ್ಥಿಸಿರಬಹುದು. ಆತನು ಇವಳ ಮೇ[...] ಕರುಣೆ ತೋರಿ, ಗಂಗಾಧರನ ಸ್ನೇಹ ಬೆಳೆಯಿ[...] ಕೊಲೆ ಮಾಡಿರಬಹುದೇ?"

"ಹಾಗೂ ಯೋಚನೆ ಮಾಡ[...] ಅವಕಾಶವಿದೆ. ಅದಿರಲಿ ಮೃತನ ತಂದೆ-ತಾ[...] ಯರು ಬಂದರೇ?"

"ಶವವನ್ನು ಆಸ್ಪತ್ರೆಗೆ ಸಾಗಿಸಿದನಂ[...] ಬಂದರು. ಮನೆಗೆ ಸೀಲು ಮಾಡಿಸಿದ್ದೆ. ಅವ[...] ಬಂದನಂತರ ಅವರ ವಿಚಾರಣೆ ನಡೆಯಿ[...] ಮನೆಯನ್ನು ಅವರ ಸ್ವಾಧೀನ ಒಪ್ಪಿಸಿ[...] ಅವರನ್ನು ವಿಚಾರಿಸಿದ್ದರಿಂದ ನನಗೆ ಅನುಕೂ[...] ವೇನೂ ಕಾಣಲಿಲ್ಲ. ಇದೊಂದು ವಿಲಕ್ಷ[...] ಸಮಸ್ಯೆಯಾಗಿದೆ."

ಅವರಿಬ್ಬರು ಮಾತನಾಡುತ್ತಿದ್ದ ಹಾ[...] ಬಾಲಚಂದ್ರನು ಆಗಮಿಸಿ, ವಿಷಯ ತಿಳಿದ[...] ನನ್ನ ಅಭಿಪ್ರಾಯ ಹೇಳಬೇಕೆಂದರೆ ನಳಿನಿ[...]

ಹಿತೈಷಿಯಿಂದಲೇ ಕೊಲೆ ನಡೆದಿದೆಯೆಂದು ಹೇಳಬಹುದು ಎಂದು ಹೇಳಿದ.

ಸೇವಕನು ಕಾಫಿ ತಂದಿಡಲು ಮೂವರೂ ಕಾಫಿ ಕುಡಿದರು.

ತರುವಾಯ ತಾನು ಬಂದ ಕಾರ್ಯವಾಯಿ ತೆಂದುಕೊಂಡ ಇನ್‌ಸ್ಪೆಕ್ಟರನು ಗಾಳಿರಾಯನಿಂದ ಬೀಳ್ಕೊಂಡು ಹಿಂದಿರುಗಿದ.

''ನಿಮ್ಮ ಬುದ್ಧಿಪರೀಕ್ಷೆಗೆ ಇದೊಂದು ಸವಾಲಾಗಿದೆ,''

ಇನ್‌ಸ್ಪೆಕ್ಟರನು ಹಿಂದಿರುಗಿದ ನಂತರ ಬಾಲ ಚಂದ್ರನು ನುಡಿದ.

''ಕೊಲೆ, ಕಳ್ಳತನ, ದರೋಡೆಗಳು ನಡೆದಾಗ ನಮ್ಮ ಬುದ್ಧಿಪರೀಕ್ಷೆ ಇದ್ದೇ ಇರುತ್ತದೆ. ಕೆಲವು ಸಾಮಾನ್ಯ ರೀತಿಯಲ್ಲಿದ್ದರೆ ಹಲವು ಕಠಿಣ ಸಮಸ್ಯೆಯನ್ನೊಳಗೊಂಡಿರುತ್ತೆ,''

ಗಾಂಭೀರ್ಯದಿಂದ ನುಡಿದ ಗಾಳಿರಾಯ.

''ಗಂಗಾಧರನ ಕೊಲೆಯ ಬಗ್ಗೆ ನಿಮ್ಮ ಊಹಾಯೋಚನೆ ಏನೇ ಇರಲಿ, ನನ್ನ ಯೋಚನೆ ಒಂದು ರೀತಿ ಇದೆ.''

''ಏನಂತಹ ಯೋಚನೆ?''

''ನನ್ನ ಸಂದೇಹ ನಳಿನಿಯ ಮೇಲೇ ಇದೆ.''

''ಅದಕ್ಕೇನು ಆಧಾರವಿದೆ?''

''ಏಕಾಏಕಿ ಕೊಂದರೆ ಫೋಟೋ, ಪತ್ರಗಳಿಗಾಗಿ ಕೊಲೆ ಮಾಡಿದ್ದೆಂದು ಸಾಬೀತಾಗುವುದು. ಆ ಅಪರಾಧದಿಂದ ತಪ್ಪಿಸಿಕೊಳ್ಳಲಾಗುವುದಿಲ್ಲ. ಆ ಕಾರಣ ತಾನು ನಿರಪರಾಧಿಯೆಂದು ತೋರಿಸಿಕೊಳ್ಳಲು ನಿಮ್ಮಲ್ಲಿಗೆ ಬಂದು ವಿಷಯ ಹೇಳಿ, ಆತನನ್ನು ಕೊಲೆ ಮಾಡಿರಬಾರದೇಕೆ? ನಿಮಗೆ ಆ ಕೆಲಸ ಒಪ್ಪಿಸಿರುವುದರಿಂದ ಅವಳ ಮೇಲೆ ಸಂದೇಹಪಡಲು ಆಸ್ಪದವೇ ಇರುವುದಿಲ್ಲ. ಕೊಲೆಯ ಸಮಾಚಾರ ಹೊಸದಾಗಿ ಕೇಳಿದಂತೆ ನಟಿಸಿ, ನಿಮ್ಮಲ್ಲಿಗೆ ಬಂದಿರಬಾರದೇಕೆ?''

''ಆಕೆ ಮಾಡುವುದಾಗಿದ್ದರೆ ರಹಸ್ಯವಾಗಿಯೇ ಮಾಡುತ್ತಿದ್ದಳು. ಕೊಲೆ ಮಾಡಲು ಸಿದ್ಧತೆ ಮಾಡಿಕೊಂಡು, ಇಂತಹ ಸ್ಥಳಕ್ಕೆ ಬರಬೇಕೆಂದು ತಿಳಿಸಿ, ಅಲ್ಲಿಗೆ ಬಂದ ನಂತರ ಕೊಂದು ಹಿಂದಿರುಗುತ್ತಿದ್ದಳು. ಮಂಜುಳೆಯ ಬಳಿಗೆ ಹೋಗುವಂತಹ ಅವಶ್ಯಕತೆಯೇ ಇರುತ್ತಿರಲಿಲ್ಲ.''



''ಪ್ರತಿಯೊಬ್ಬ ಕನ್ನಡಿಗನ ವಾಚನಾಭಿರುಚಿಯ ಆದ್ಯ ಪ್ರವರ್ತಕರು'' ಎಂದು ನಾವು ಬಣ್ಣಿಸಿದ್ದು ಸುಮ್ಮನೆಯೆ ಮತ್ತೆ? ಎನ್. ನರಸಿಂಹಯ್ಯನವರನ್ನು 'ಪತ್ತೆಹಚ್ಚಿ' ಮಾತನಾಡಿಸಿ ಬಂದದ್ದಕ್ಕೆ ನಿಮ್ಮಿಂದ ಬಂದಿರುವ ಮೆಚ್ಚುನುಡಿಗಳೆ ಇದಕ್ಕೆ ನಿದರ್ಶನ. ತಮ್ಮ ವಾಚನಾಭಿರುಚಿ ಬೆಳೆಯಲು ನರಸಿಂಹಯ್ಯ ಹೇಗೆ ಕಾರಣರಾದರು ಎಂದು ಕೃತಜ್ಞತೆಯಿಂದ ನೆನಪಿಸಿಕೊಂಡು ಬಂದ ಮಾರ್ದನಿಗಳು ನೂರಾರು. ಉತ್ಸಾಹದಿಂದ ಪ್ರತಿಕ್ರಿಯಿಸಿದ ನಿಮಗೆ, ಸಂದರ್ಶನ ನೀಡಿ ಸಹಕರಿಸಿದ ನರಸಿಂಹಯ್ಯನವರಿಗೆ ನಮ್ಮ ಕೃತಜ್ಞತೆಗಳು.

''ನಳಿನಿಗೂ, ಕೊಲೆಗೂ ಸಂಬಂಧವಿಲ್ಲವೆಂದ ಮೇಲೆ ಯಾರಿಂದ ಹತ್ಯೆ ನಡೆದಿದೆಯೆಂದು ನಿಮ್ಮ ಭಾವನೆಯಾಗಿದೆ? ನಳಿನಿಗೂ, ಗಂಗಾಧರನಿಗೂ ನಡೆದ ಪ್ರೇಮಪ್ರಕರಣ, ಪರಸ್ಪರ ಪತ್ರಗಳ ವಿನಿಮಯ, ಫೋಟೋ ತೆಗೆಯಿಸಿಕೊಂಡ ವಿಷಯ, ಮಂಜುಳೆಯ ವಿನಃ ಬೇರೆ ಯಾರಿಗೂ ತಿಳಿಯದು. ಅವರಿಬ್ಬರ ವ್ಯವಹಾರ ಲೀಲೆ ಆ ರೀತಿ ರಹಸ್ಯವಾಗಿ ನಡೆದಿದೆ. ಮಂಜುಳೆಯಿಂದ ಛೀಮಾರಿ ಹಾಕಿಸಿಕೊಂಡು, ನಿಮ್ಮನ್ನು ಆಶ್ರಯಿಸಿದಳು. ನೀವು ಇನ್‌ಸ್ಪೆಕ್ಟರೊಡನೆ ಹೇಳಿದಿರಿ. ಅವರು ಕಾರ್ಯೋನ್ಮುಖರಾಗುತ್ತಿದ್ದ ಹಾಗೆ ಗಂಗಾಧರನು ಕೊಲೆಯಾದ. ಹತ್ಯೆ ನಡೆದು ಫೋಟೋ, ಪತ್ರಗಳು ಮಾತ್ರ ಅಪಹರಣವಾಗಿವೆಯೆಂದರೆ ವಿಷಯ ತಿಳಿದವರಿಂದ ಮಾತ್ರ ಸಾಧ್ಯವಲ್ಲದೆ ಬೇರೆಯವರಿಂದ ಸಾಧ್ಯವಿಲ್ಲ. ಫೋಟೋ ಮತ್ತು ಪ್ರೇಮಪತ್ರಗಳಿಗಾಗಿಯೇ ಹತ್ಯೆ ನಡೆದಿದೆ. ನೀವು ನಿಧಾನವಾಗಿ ಯೋಚಿಸಿ ನೋಡಿ. ನಿಮ್ಮ ಯೋಚನೆಯೇನಿದ್ದರೂ ನಮಗೆಲ್ಲಾ ತದ್ವಿರುದ್ಧವಾಗಿರುತ್ತೆ. ಆದರೂ ನನ್ನ ಮನಸ್ಸು ತಡೆಯದೆ ಮೆದುಳಿಗೆ ಹೊಳೆದುದನ್ನು ಹೇಳಬೇಕಾಯಿತು. ಹೇಳಿಯೂ ಆಯಿತು,''

ತನ್ನ ಆಲೋಚನೆಯ ಏನೊಂದು ಅಂಶವನ್ನೂ ಮುಚ್ಚಿಡದೆ ಹೇಳಿದ ಬಾಲಚಂದ್ರ.

ಆ ತಕ್ಷಣ ತನ್ನ ಪ್ರತಿಕ್ರಿಯೆಯೇನೂ ವ್ಯಕ್ತಪಡಿಸದ ಗಾಳಿರಾಯನು ಕಣ್ಣುಗಳನ್ನು ಮುಚ್ಚಿಕೊಂಡು ಹಾಗೇ ಯೋಚನೆಗೊಳಗಾದ.

ಬಾಲಚಂದ್ರನು ಮಾತನಾಡದೆ ಮೂಕನಂತೆ ಕುಳಿತ.

ಯೋಚನೆಯಿಂದ ವಿಮುಕ್ತನಾದ ಗಾಳಿರಾಯನು ಕಣ್ತೆರೆದು, ಬಾಲಚಂದ್ರನು ಎದುರಿಗೇ ಕುಳಿತಿದ್ದರೂ ಏನೊಂದು ಮಾತೂ ಆಡದೆ, ಫಟ್ಟನೆ ಎದ್ದು ಹೊರಗೆ ನಡೆದ.

ಗಾಳಿರಾಯನ ಗುಣವಿಶೇಷವನ್ನು ತಿಳಿದಿದ್ದ ಬಾಲಚಂದ್ರನು, ಆ ವೇಳೆಯಲ್ಲಿ ಯಾವ ತರಹದ ಅಡ್ಡಿ ಆತಂಕಗಳನ್ನು ತಂದೊಡ್ಡದೆ ಹತ್ಯೆಯ ಬಗ್ಗೆ ಏನೋ ಯೋಚನೆ ಹೊಳೆದಿದೆ ಆ ಯೋಚನೆಯನ್ನು ಕಾರ್ಯರೂಪಕ್ಕೆ ತರಲು ಹೊರಟಿದ್ದಾನೆಂದುಕೊಂಡು, ಸೇವಕನೊಡನೆ ಮಾತನಾಡಿ, ತಾನೂ ಹೊರಗೆ ನಡೆದ.

ಪೊಲೀಸ್‌ಠಾಣೆಗೆ ಹೋದ ಗಾಳಿರಾಯನು ಇನ್‌ಸ್ಪೆಕ್ಟರ್ ಜಗನ್ನಾಥನೊಡನೆ ಪ್ರತ್ಯೇಕವಾ ಆತನು ನಿರ್ವಹಿಸಬೇಕಾದ ಕಾರ್ಯದ ಬಗ್ ವಿವರಣೆ ನೀಡಲು, ಪ್ರತಿಯಾಡದ ಜಗನ್ನಾಥನು, ಪೊಲೀಸಿನವರ ಮೂಲಕ ರೌಡಿ ಭೈ ವನನ್ನು ಠಾಣೆಗೆ ಕರೆಯಿಸಿಕೊಂಡ.

ಠಾಣೆಗೆ ಬಂದ ಭೈರವನು ಇನ್‌ಸ್ಪೆಕ್ಟ ಎದುರಿಗೆ ವಿನೀತಭಾವದಿಂದ ನಿಂತುಕೊಂಡ.

ಇನ್‌ಸ್ಪೆಕ್ಟರ್ ಪರವಾಗಿ ಪತ್ತೇದಾರನು,

''ಗಂಗಾಧರನು ಕೊಲೆಯಾದ ಸಂಗ ನಿನಗೆ ತಿಳಿದಿದೆಯಲ್ಲವೇ?'' ಎಂದು ಕೇಳಿದ.

ನಳಿನಿಯ ಪ್ರವರವನ್ನು ಜ್ಞಾಪಕಕ್ಕೆ ತಂದ ಕೊಂಡ ಭೈರವನು,

''ತಿಳಿದಿದೆ ಸಾರ್'' ಎಂದು ಹೇಳಿದ.

''ನಿನ್ನ ಪ್ರೇಯಸಿ ಮಂಜುಳೆಯ ಬಳಿ ನಳಿನಿಯು ಬಂದು, ತನ್ನ, ಗಂಗಾಧರನ ಪ್ರೇ ಪ್ರಕರಣವನ್ನು ಹೇಳಿದ ಸಂಗತಿಯೂ ನಿನ ತಿಳಿದಿದೆಯೆಂದಹಾಗಾಯಿತು. ನಿನ್ನಾಕೆಯ ಮೂಲಕವೇ ತಿಳಿದಿರುವೆ, ಅಲ್ಲವೇ?''

''ಹೌದು ಸಾರ್.''

''ನಿನ್ನಾಕೆ ನಿನ್ನ ಬಳಿ ಹೇಳಿದುದೇನು? ಅದ ನೀನೇನು ಹೇಳಿದೆ? ಏನೊಂದು ವಿಷಯವನ್ ಮುಚ್ಚಿಡದೆ ಹೇಳಬೇಕು. ನೀನು ಸುಳ್ಳು ಹೇಳಿದ ನೀನಾಗಿಯೇ ತಪ್ಪನ್ನು ಒಪ್ಪಿಕೊಂಡಂತಾ ವುದು, ಹೇಳು.''

ತನಗೂ, ಮಂಜುಳೆಗೂ ನಳಿನಿಯ ಬ ನಡೆದ ಮಾತುಕತೆಯನ್ನು ಹೇಳಿದ ಭೈರವ

ಅದು ಬಿಟ್ಟು ಬೇರೆ ಏನೂ ತಿಳಿಯದೆಂದು ಹೇಳಿದ.

"ಇಲ್ಲೇ ನೀನು ಮುಚ್ಚುಮರೆ ಮಾಡು ತ್ತಿರುವೆ. ನಿನ್ನ ಆಟವೇನೂ ನಮ್ಮ ಬಳಿ ನಡೆಯದು. ಸತ್ಯ ಹೇಳು."

"ಪ್ರಮಾಣವಾಗಿ ಬೇರೆ ಏನೂ ಗೊತ್ತಿಲ್ಲ ಸಾರ್."

"ಗಂಗಾಧರನನ್ನು ಸಂಧಿಸಿಯೇ ಇಲ್ಲವೇ?"

"ಸತ್ಯವಾಗಿ ಸಂಧಿಸಲಿಲ್ಲ. ಅವನ ಮುಖ ಹೇಗಿದೆಯೆಂದು ಗೊತ್ತಿಲ್ಲ. ನನ್ನಾಕೆ ಪತ್ರಿಕೆ

"ನಾನು ಅಂತಹ ಪಾಪದ ಕೆಲಸ ಮಾಡಿಲ್ಲ ಸಾರ್."

"ಪುಣ್ಯದ ಕೆಲಸ ಮಾಡಿರುವೆಯಾ? ಏನೇನು ಒಡವೆಗಳು ಕಳುವಾಗಿವೆ? ಹಣ ಎಷ್ಟಿತ್ತು ಎಂದು ಮೃತನ ತಂದೆತಾಯಿಯರು ಹೇಳಿಕೆ ಇತ್ತು, ಬರೆದು ಕೊಟ್ಟಿದ್ದಾರೆ. ಕಳುವಾದ ಆಭರಣ, ಹಣವು ನಿನ್ನ ಮನೆಯಲ್ಲೇ ಇದೆ."

"ಏನೂ ಇಲ್ಲ ಸಾರ್, ನಿಮಗೆ ಅನುಮಾನವಿದ್ದರೆ ಶೋಧನೆ ಮಾಡಿ ನೋಡಿ."

"ಬೇರೆ ಕಡೆ ಅಡಗಿಸಿಟ್ಟಿರಬಹುದು."



ತೋರಿಸಿ ಹೇಳಿದನಂತರವೇ ಅವನು ಕೊಲೆ ಯಾದನೆಂದು ತಿಳಿದದ್ದು."

"ನಿನ್ನ ಮಾತು ನಿಜವೇ?"

"ಪ್ರಮಾಣವಾಗಿ ನಿಜ ಸಾರ್."

ಗಂಗಾಧರನನ್ನು ನೀನೇ ಕೊಲೆ ಮಾಡಿದೆ ಯೆಂದು ಸಾಬೀತಾಗಿದೆ. ಅದಕ್ಕೆ ಸಾಕ್ಷ್ಯಾ ಧಾರವೂ ಸಿಕ್ಕಿದೆ. ಕೊಲೆ ಮಾಡಿದ್ದು ಮಾತ್ರವಲ್ಲ, ದ್ರವ್ಯಾಭರಣಗಳನ್ನೂ ಅಪಹರಿಸಿಕೊಂಡು ಬಂದಿರುವೆ."

ಭೈರವನ ಮುಖ ಕಳಾಹೀನವಾಯಿತು. ಪತ್ತೇ ದಾರನು ಆ ನೋಟವನ್ನು ಗಮನಿಸದಿರಲಿಲ್ಲ.

"ಎಲ್ಲಾ ಸುಳ್ಳು ಸಾರ್. ನನಗಾಗದವರು ನಿಮ್ಮ ಬಳಿ ದೂರು ಹೇಳಿರಬಹುದು."

"ನಿನ್ನ ಮನೆಯಲ್ಲಿ ಒಡವೆಗಳು ಸಿಕ್ಕರೆ ಆಗ ತಪ್ಪೊಪ್ಪಿಕೊಳ್ಳುವೆಯಾ?"

"ನನ್ನ ಮನೆಯಲ್ಲಿ ಒಡವೆಗಳೇನೋ ಇದೆ ಸಾರ್. ಆ ಒಡವೆಗಳೇ ನಮ್ಮವೆಂದು ಗಂಗಾಧರನ ಅಪ್ಪ, ಅಮ್ಮ ಹೇಳಿದರೆ ನೀವು ನಂಬಲೇಬೇಕಾಗುತ್ತೆ. ಆಗ ನಾನೇನು ಮಾಡುವ ಹಾಗಿದೆ?"

"ನೀನು ಆ ಒಡವೆಗಳನ್ನು ಯಾರಲ್ಲಿ ಮಾಡಿ ಸಿದ್ದು, ಯಾವ ಅಂಗಡಿಯಿಂದ ಕೊಂಡದ್ದು

ಎಂದು ರುಜುವಾತುಪಡಿಸಬೇಕಾಗುತ್ತೆ. ಹಣದ ಬಗ್ಗೆ ಯಾರೇನೂ ಮಾಡುವ ಹಾಗಿಲ್ಲ.''

ಭೈರವನು ನಿರುತ್ತರನಾದ.

ಇನ್‌ಸ್ಪೆಕ್ಟರರಿಗೆ ಸೂಕ್ಷ್ಮವಾಗಿ ಎಚ್ಚರಿಕೆ ನೀಡಿದ ಗಾಳಿರಾಯನು, ಇಬ್ಬರು ಪೊಲೀಸಿನವರನ್ನು ತನ್ನ ಸಂಗಡ ಕರೆದುಕೊಂಡು ಹೊರಟ.

''ಅವರೀಗ ನಿನ್ನ ಮನೆ ಶೋಧನೆಗೆ ಹೊರಟದ್ದಾರೆ, ಈಗಲೂ ಕಾಲ ಮಿಂಚಿಲ್ಲ, ನಿಜ ಹೇಳು,''

ಗಾಳಿರಾಯನು ಕಣ್ಮರೆಯಾದ ನಂತರ ಜಗನ್ನಾಥನು ಭೈರವನನ್ನು ಉದ್ದೇಶಿಸಿ ಹೇಳಿದ.

''ನಾನು ಸತ್ಯವನ್ನೇ ಹೇಳಿದ್ದೇನೆ ಸಾರ್. ನಳಿನಿಯು ನನ್ನ ಮನೆಗೆ ಬಂದು ಮಂಜುಳೆಯೊಡನೆ ಮಾತಾಡಿದ್ದೇ ತಪ್ಪಾಗಿ ಹೋಗಿದೆ.''

''ನಿನ್ನ ಹೇಳಿಕೆಯು ಎಷ್ಟು ನಿಜ, ಎಷ್ಟು ಸುಳ್ಳೆಂಬುದು ಪತ್ತೇದಾರನು ಬಂದನಂತರ ತಿಳಿಯುತ್ತೆ. ಈಗ ಮಾತನಾಡಿ ಫಲ ಇಲ್ಲ.''

ತನ್ನ ಹೇಳಿಕೆ ಪಡೆದವನು ಗಾಳಿರಾಯನೆಂದು ಭೈರವನಿಗೆ ಮಂದಟ್ಟಾಯಿತು.

''ಪತ್ತೇದಾರರು ಹೋದರೆಂದ ಮೇಲೆ ನನಗೆ ಭಯವಿಲ್ಲ ಸಾರ್.''

''ಅದ್ಹೇಗೆ?''

''ಅನ್ಯಾಯವನ್ನು ಮೆಟ್ಟಿ ತುಳಿಯುವ ಅವರು, ನ್ಯಾಯ ಮಾರ್ಗದಲ್ಲಿಯೇ ನಡೆಯುವರಲ್ಲದೆ ಯಾವ ಕಾರಣಕ್ಕೂ ದಾರಿ ತಪ್ಪುವುದಿಲ್ಲ.''

''ನಾನು ದಾರಿ ತಪ್ಪುತ್ತೇನೆಂದು ನಿನ್ನ ಭಾವನೆಯೇ?''

''ಹಾಗೇನೂ ಇಲ್ಲ ಸಾರ್, ದಯವಿಟ್ಟು ತಪ್ಪಾಗಿ ತಿಳಿಯಬೇಡಿ.''

''ಸರಿ, ಈಗ ಹೆಚ್ಚು ಮಾತು ಬೇಡ. ಮನೆ ಶೋಧನೆಗೆ ಹೊರಟಿರುವ ಅವರು ಬರುವವರೆಗೆ ಹೊರಗೆ ಕುಳಿತಿರು.''

ಮೌನವಾಗಿ ತಲೆಯಾಡಿಸಿದ ಭೈರವನು ಹೊರಗೆ ಬಂದು ಕುಳಿತ.

ಅವನು ಅಲ್ಲಿಂದ ತಪ್ಪಿಸಿಕೊಂಡು ಹೋಗ
ಹಾಗೆ ಪೊಲೀಸಿನವರಿಬ್ಬರು ಅವನಿಗೆ ಕಾ
ಲಾದರು. ಅವರಿಗೆ ವಂಚಿಸಿ ಪರಾರಿಯಾದ
ಅವನೇ ಅಪರಾಧಿಯೆಂದು ತೀರ್ಮಾನವಾಗುವು



ಗಾಳಿರಾಯನು ಪೊಲೀಸಿನವರೊಡನೆ ಬಂ
ದನ್ನು ಕಂಡ ಮಂಜುಳೆಯು, ಗಾಬರಿಯಾ
ಪ್ರಶ್ನಾರ್ಥಕ ದೃಷ್ಟಿಯಿಂದ, ಅವರ ಮುಖಗಳ
ನೋಡಿದಳು.

ಗಾಳಿರಾಯನ ಮುಖ ಪರಿಚಯವಿಲ್ಲ
ಕಾರಣ ಇವರು ಪೊಲೀಸ್ ಅಧಿಕಾರಿ ಇರಬ
ದೆಂದು ಊಹೆ ಮಾಡಿಕೊಂಡಳು.

''ನಳಿನಿಯ ಪ್ರೇಮಿ ಗಂಗಾಧರನನ್ನು ಕೊ
ಮಾಡುವಂತೆ ಭೈರವನಿಗೆ ಹೇಳಿದವಳು ನೀ
ಅಲ್ಲವೇ?''

ಬೆರಗು ನೋಟದಿಂದ ತನ್ನ ಮು
ನೋಡುತ್ತಿದ್ದ ಮಂಜುಳೆಗೆ ಕೇಳಿದ, ಗಾಳಿರಾ

''ನಾನೇ...? ನಾನೆಂದಿಗೂ ಆ ಮಾ
ಹೇಳಿಲ್ಲ.''

ಗಾಬರಿ ಮತ್ತು ಭೀತಿಯ ಧ್ವನಿಯ
ಹೇಳಿದಳು ಮಂಜುಳೆ.

''ಮತ್ತೇನೆಂದು ಹೇಳಿದೆ?''

''ಏನೂ ಹೇಳಲಿಲ್ಲ.''

''ಗಂಗಾಧರನನ್ನು ಕೊಂದು, ಪ್ರೇಮಪ
ಗಳು ಮತ್ತು ಫೋಟೋ ತರುವಂತೆ ಮಂ
ಳೆಯು ನನಗೆ ಹೇಳಿ ಒತ್ತಾಯಪಡಿಸಿದ್ದರಿ
ಅವಳ ಮಾತನ್ನು ಅಲ್ಲಗಳೆಯದೆ, ಗಂಗಾಧರನ
ಕೊಂದು, ಪ್ರೇಮಪತ್ರಗಳು, ಫೋಟೋ ಸ
ದ್ರವ್ಯಾಭರಣಗಳನ್ನು ಅಪಹರಿಸಿದೆನೆಂದು ಭ
ವನು ಪೊಲೀಸ್ ಸ್ಟೇಷನ್ನಿನಲ್ಲಿ ಹೇಳಿಕೆ ನಿ
ದ್ದಾನೆ. ನೀನು ನಮ್ಮ ಬಳಿ ಏನೂ ಅರಿಯದ
ಳಂತೆ ನಾಟಕ ಆಡುತ್ತೀಯಲ್ಲ.''

"ಸತ್ಯವಾಗಿ ನಾನೇನೂ ಹೇಳಿಲ್ಲ. ಅವರು ಕೊಲೆಯನ್ನೂ ಮಾಡಿಲ್ಲ. ಎಲ್ಲಾ ನೀವೇ ಹುಟ್ಟಿಸಿಕೊಂಡು ಹೇಳುತ್ತಿದ್ದೀರ. ನನ್ನ ಮಾತು ನಂಬಿ."

"ಸತ್ಯ, ಪ್ರಮಾಣಗಳಿಗೆ ಈ ಕಾಲದಲ್ಲಿ ಬೆಲೆಯಿದೆಯೇ? ನಿನ್ನವನು ಎಲ್ಲಾ ಹೇಳಿ ಮುಗಿಸಿರುವಾಗ ನೀನು ಏನೇನೋ ಹೇಳುವೆಯಲ್ಲ. ಒಡವೆ, ಹಣವನ್ನು ಎಲ್ಲಿ ಬಚ್ಚಿಟ್ಟಿದ್ದಾನೆ ಹೇಳು?"

"ಪ್ರಮಾಣವಾಗಿ ನನಗೇನೂ ಗೊತ್ತಿಲ್ಲ. ಅವರಿಂದ ಕೊಲೆಯೂ ನಡೆದಿಲ್ಲ."

"ಅವನಿಂದ ಕೊಲೆ ನಡೆದಿಲ್ಲವೆಂದು ಹೇಗೆ ಹೇಳುತ್ತೀಯ?"

"ಮಾಡಿದ್ದರೆ ನನ್ನ ಬಳಿ ಹೇಳದೆ ಇರುತ್ತಿರಲಿಲ್ಲ."

"ಹಾಗಿದ್ದ ಮೇಲೆ ನಿನ್ನಿಂದ ಕೊಲೆ ನಡೆದಿದೆಯೆಂದು ಹೇಳಬೇಕಾಗಿದೆಯೇ?"

"ನಾನೇಕೆ ಕೊಲೆ ಮಾಡಲಿ?"

"ನಳಿನಿಯ ಬೇಡಿಕೆಗೆ ಮನ್ನಣೆಯಿತ್ತು ಕೊಲೆ ಮಾಡಿದ್ದೀಯ?"

"ಖಂಡಿತಾ ಕೊಲೆ ಮಾಡಿಲ್ಲ."

"ಯಾರು ಮಾಡಿದ್ದಾರೆಂದು ಮನೆಯ ಶೋಧನೆ ಮಾಡಿದನಂತರ ತಿಳಿಯುತ್ತೆ. ನಮ್ಮ ಕಾರ್ಯ ಮುಗಿಯುವವರೆಗೆ ಏನೊಂದು ಮಾತೂ ಆಡದೆ ಮೌನವಾಗಿ ಕುಳಿತಿರಬೇಕು."

ಪ್ರತಿಯಾಡದ ಮಂಜುಳೆಯು ತಲೆಯಾಡಿಸಿದಳು.

ಅವಳ ಎದುರಿಗೇ ಗಾಳಿರಾಯನು ಶೋಧನೆ ಆರಂಭ ಮಾಡಿದ.

ಆರಂಭದಲ್ಲಿ ಟ್ರಂಕು, ಪೆಟ್ಟಿಗೆಗಳನ್ನು ಶೋಧಿಸಿ ಬಳಿಕ ಒಡವೆಗಳಿರುವ ಸ್ಥಳ ತೋರಿಸುವಂತೆ ಕೇಳಿದ.

ಮಂಜುಳೆಯು ಒಡವೆಗಳಿರುವ ಚಿಕ್ಕ ಪೆಟ್ಟಿಗೆಯನ್ನೇ ತಂದು ಗಾಳಿರಾಯನ ಮುಂದಿರಿಸಿದಳು.

ಒಡವೆಗಳನ್ನು ಒಂದೊಂದಾಗಿ ನೋಡುತ್ತಾ, ಜೇಬಿನಿಂದ ಚೀಟಿ ತೆಗೆದು ಒಡವೆಗಳ ಪಟ್ಟಿ ನೋಡುವಂತೆ ನಟಿಸುತ್ತಾ, ಎಲ್ಲವನ್ನೂ ಹಿಂದಿರುಗಿಸಲು ಮಂಜುಳೆಗೆ ಸಂತೋಷವಾಯಿತು.

ಗಾಡ್ರೇಜ್ ಬೀರುವಿನ ಬಾಗಿಲು ತೆಗೆದ ಗಾಳಿರಾಯನು, ಭೈರವನ ಉಡುಪುಗಳನ್ನು ತೆಗೆದು ಒಂದೊಂದಾಗಿ ಶೋಧಿಸುತ್ತಾ, ಪಕ್ಕದಲ್ಲಿ ತೆಗೆದಿಡುತ್ತಿರುವನು.

ಮಂಜುಳೆಯು ಎದಿರಿಗೇ ಇದ್ದು ನೋಡುತ್ತಿರುವಳು.

ಭೈರವನ ಉಡುಪುಗಳನ್ನೆಲ್ಲಾ ನೋಡಿಯಾದ ನಂತರ ಮಂಜುಳೆಯು ಜೋಡಿಸಿಟ್ಟಿದ್ದ ಸೀರೆಗಳನ್ನು ತೆಗೆಯತೊಡಗಿದ.

"ಅಲ್ಲಿ ಸೀರೆಗಳನ್ನು ಬಿಟ್ಟು ಬೇರೆ ಏನೂ ಇಲ್ಲ, ಬಿಡಿ. ನೀವು ಸಿಕ್ಕಾಬಟ್ಟೆ ಎಳೆದುಹಾಕಿದರೆ ಸೀರೆಗಳ ಮಡಿಕೆಗಳು ಕೆಟ್ಟು ಹಾಳಾಗುತ್ತೆ."

ಮಂಜುಳೆಯು ಮುಂದಾಗಿಯೇ ಎಚ್ಚರಿಸಿದಳು.

"ನಾನೇನೂ ಹಾಳು ಮಾಡುವುದಿಲ್ಲ. ನಿಧಾನವಾಗಿ ನೋಡಿ, ಹಾಗೇ ತೆಗೆದಿಡುತ್ತೇನೆ."

ಎಂದ ಗಾಳಿರಾಯನು ತನ್ನ ಕಾರ್ಯವನ್ನು ಮುಂದುವರಿಸಿದ.

ಮಂಜುಳೆಯು ಮುಂದೆ ಬಂದು, ಸೀರೆಗಳನ್ನು ಎತ್ತಿಕೊಡುವುದಕ್ಕೆಂದು ಹೋಗಲು ಆಕೆಯನ್ನು ತಡೆದ ಗಾಳಿರಾಯನು,

"ನೀನು ಸುಮ್ಮನೇ ಕುಳಿತುಕೊ. ನಾನೇನೂ ಕೊಂಡೊಯ್ಯುವುದಿಲ್ಲ" ಎಂದು ಹೇಳಿ ನಿಧಾನವಾಗಿ ನೋಡತೊಡಗಿದ.

ಆರು ಸೀರೆಗಳನ್ನು ನೋಡಿಯಾದ ನಂತರ ಏಳನೆಯ ಸೀರೆಯ ನಡುವೆ, ಕವರಿನಲ್ಲಿ ಜೋಪಾನವಾಗಿಟ್ಟಿದ್ದ ಪತ್ರಗಳು ಮತ್ತು ಫೋಟೋ ಸಿಕ್ಕಿತು.

ಎದುರಿಗಿದ್ದು ನೋಡುತ್ತಲೇ ಇದ್ದ ಮಂಜುಳೆಯ ಜೀವವೇ ಹೋದಂತಾಯಿತು. ತಾನು ಇವುಗಳನ್ನು ಬೇರೆ ಕಡೆ ಬಚ್ಚಿಡದೆ, ಸೀರೆಗಳ ನಡುವೆ ಇಟ್ಟಿದ್ದು ಮಹಾಪರಾಧವಾಯಿತೆಂದುಕೊಂಡಳು. ಈಗ ಗಂಡಾಂತರ ಸಮಸ್ಯೆಯಿಂದ



ಪಾರಾಗುವ ಬಗೆ ಹೇಗೆಂದು ಚಿಂತೆಗೊಳಗಾದಳು.

"ಈ ಪತ್ರ, ಫೋಟೋಗಳಿಗಾಗಿ ಅಲ್ಲವೇ ನೀನು ಗಂಗಾಧರನನ್ನು ಕೊಲೆ ಮಾಡಿದ್ದು?"

ಫೋಟೋ ಮತ್ತು ಪತ್ರಗಳನ್ನು ನೋಡಿದನಂತರ ಗಾಳಿರಾಯನು ಮಂಜುಳೆಯನ್ನು ಉದ್ದೇಶಿಸಿ ಕೇಳಿದ.

ಮಂಜುಳೆಗೆ ಮಾತನಾಡಲು ಬಾಯಿ ಬಾರದಂತಾಯಿತು.

"ಮರ್ಯಾದೆಯಿಂದ ಹೇಳು, ಇಲ್ಲವಾದರೆ ಸ್ಟೇಷನ್ನಿಗೆ ಕರೆದುಕೊಂಡು ಹೋಗಿ ಬಲಾತ್ಕಾರದಿಂದ ಬಾಯಿ ಬಿಡಿಸಬೇಕಾಗುತ್ತೆ. ಪೊಲೀಸಿನವರು ಯಾವ ರೀತಿ ಬಾಯಿ ಬಿಡಿಸುತ್ತಾರೆ ಎಂಬ ವಿಚಾರ ನಿನ್ನ ಕೈಹಿಡಿದ ಭೈರವನಿಗೆ ಚೆನ್ನಾಗಿ ತಿಳಿದಿದೆ. ನೀನು ನಿಜ ಹೇಳಿದರೆ ಯಾವ ರೀತಿಯ ಹಿಂಸೆಯನ್ನೂ ಕೊಡುವುದಿಲ್ಲ, ಹೇಳು."

"ಮಂಜುಳೆಯ ಮಾನ ಉಳಿಸಲು ಆ ಕೆಲಸ ಮಾಡಿದೆ."

ಜೀವಸತ್ತ ಧ್ವನಿಯಲ್ಲಿ ಹೇಳಿದಳು ಮಂಜುಳ.

"ಮಾನ ಉಳಿಸಲು ಅಂದರೆ? ವಿವರವಾಗಿ ಹೇಳು."

"ನಳಿನಿಯ ಮೇಲೆ ಸಿಟ್ಟಾಗಿ ಗದರಿ ಕಳುಹಿಸಿದರೂ ಆಮೇಲೆ ಅವಳ ಮೇಲೆ ಕನಿಕರ ಉಂಟಾಯಿತು. ನನ್ನ ಬಾಳೇನೋ ಹೀಗಾಯಿತು. ನಳಿನಿಯಾದರೂ ಗಂಡನನ್ನು ಕಟ್ಟಿಕೊಂಡು ಸುಖವಾಗಿ ಬಾಳಲಿ ಎಂದುಕೊಂಡು ಗಂಗಾಧರನಲ್ಲಿಗೆ ಹೋಗಿ ನಳಿನಿಯು ನಿನಗೆ ಬರೆದಿರುವ ಫೋಟೋ, ಪತ್ರಗಳನ್ನು ಕೊಡೆಂದು ಕೇಳಿ ಪಡೆಯಬೇಕೆಂದುಕೊಂಡೆ. ಆದರಾತನು ಸುಲಭವಾಗಿ ಕೊಡಲಾರನೆಂದರಿತು, ಮೋಸದಿಂದ ಅಪಹರಿಸಿ ತರಬೇಕೆಂದು ಸಂಕಲ್ಪ ಮಾಡಿಕೊಂಡೆ. ಸಮಯ ನಿರೀಕ್ಷೆಯಲ್ಲಿದ್ದು ಆತನೊಬ್ಬನೇ ಮನೆಯಲ್ಲಿರುವ ವೇಳೆ ನೋಡಿ, ನನಗೆ ಬೇಕಾದ ಸಿದ್ಧತೆ ಮಾಡಿಕೊಂಡು, ಅವನಲ್ಲಿಗೆ ಹೋಗಿ ನಳಿನಿಗೆ ಹೀಯಾಳಿಸಿ ಬೈದ ಹಾಗೆ ನಟಿಸಿ ಅವನಿಗೆ ನನ್ನ ಮೇಲೆ ನಂಬಿಕೆ ಬರುವಂತ ಮಾಡಿದೆ. ನಳಿನಿಯ ಮೇಲೆ ನನಗೆ ಮಹಾ ಕ್ರೋಧವಿರುವುದರಿಂದ ಸೇಡು ತೀರಿಸಿಕೊಳ್ಳಲು ಫೋಟೋ, ಪತ್ರಗಳು ಬೇಕಾಗಿವೆಯೆಂದು ಹೇಳಿ ಉಪಾಯದಿಂದ ಪಡೆದು, ಮುಂದೆ ಇವನು ನನ್ನನ್ನು ಬಿಡಲಾರ, ನಳಿನಿಯ ಸಂಸಾರವನ್ನೂ ಹಾಳು ಮಾಡುವನು, ಆದ್ದರಿಂದ ಇವನನ್ನು ಉಳಿಸಬಾರದೆಂದುಕೊಂಡು, ವಿಷ ಸೇರಿಸಿದ್ದ ಪಾನೀಯವನ್ನು ಕುಡಿಯಲು ಕೊಟ್ಟು, ನಾನೂ ಕುಡಿದ ಹಾಗೆ ನಟಿಸಿ, ಅವನು ಕುಡಿದು ಪ್ರಜ್ಞೆ ತಪ್ಪಿದನಂತರ ಚಾಕುವಿನಿಂದ ಇರಿದು ಏನೊಂದು ಕುರುಹೂ ಬಿಡದೆ ಹಿಂದಿರುಗಿದೆ."

ನಸುನಕ್ಕ ಗಾಳಿರಾಯನು,

"ಬಹು ಚೆನ್ನಾಗಿ ಕಥೆ ಕಟ್ಟಿ ಹೇಳುತ್ತೀಯ ಹೀಗೆ ಹೇಳಿದ ಮಾತ್ರಕ್ಕೆ ನಂಬುತ್ತೇನೆಂದ ಕೊಂಡೆಯಾ?" ಎಂದ.

ಪೊಲೀಸಿನವರಿಬ್ಬರೂ ಬೆರಗಾದರು.

ಮಂಜುಳೆಯ ಹೇಳಿಕೆ ಕೇಳಿ ನಿಜವೆಂದೆ ನಂಬಿದವರು, ಪತ್ತೇದಾರನು ಹೇಳಿದ್ದು ಕೇ ಸೋಜಿಗರಾದರು.

"ನಾನೇನೂ ಸುಳ್ಳು ಹೇಳಿಲ್ಲ."

"ನೀನು ಹೇಳಿದ್ದರಲ್ಲಿ ಇಪ್ಪತ್ತೈದು ಭಾ ನಿಜಾಂಶವಿದ್ದರೆ ಎಪ್ಪತ್ತೈದು ಭಾಗ ಸುಳ್ಳಿ ಅಂಶಗಳಿಂದಲೇ ಕೂಡಿದೆ. ಹೇಗೆಂದು ನೀನ ಪ್ರಶ್ನೆ ಹಾಕಿ ಉತ್ತರ ಪಡೆಯುವ ಬದಲು ನಾನೆ ಹೇಳುತ್ತೇನೆ ಕೇಳು. ನಳಿನಿಯ ಮೇಲೆ ಗದ ಕಳುಹಿಸಿದ ನಂತರ ಆಕೆಯ ಮೇಲೆ ಕನಿಕ ವೇನೂ ಉಂಟಾಗಿಲ್ಲ. ಈ ರೀತಿ ಉಂಟಾಗಿದ್ದ ಭೈರವನಿಗೆ ಹೇಳಿ ಅವನನ್ನು ಒಪ್ಪಿಸಿದ್ದರೆ ಸಾಕಿತ್ತು ಆತನು ಗಂಗಾಧರನ ಮೂಲಕ ಫೋಟೋ

ಪತ್ರಗಳನ್ನು ವಾಪಾಸು ಪಡೆಯದಿರುತ್ತಿರಲಿಲ್ಲ. ನೀನು ಆಡಿದ ಮಾತಿಗೆ ಪಶ್ಚಾತ್ತಾಪಗೊಂಡು, ನಳಿನಿಗೆ ಉಪಕಾರ ಮಾಡುವ ದೆಶೆಯಿಂದ ಫೋಟೋ, ಪತ್ರಗಳನ್ನು ಅಪಹರಿಸಿದ್ದರೆ, ಅವುಗಳನ್ನು ನಿನ್ನಲ್ಲಿ ಇಟ್ಟುಕೊಳ್ಳದೆ ನಳಿನಿಗೆ ಕೊಟ್ಟು, ಪ್ರದೀಪನನ್ನು ಮದುವೆಯಾಗಿ ಸುಖವಾಗಿ ಬಾಳಿಕೊಂಡಿರೆಂದು ಹೇಳುತ್ತಿದ್ದೆ. ಫೋಟೋ, ಪತ್ರಗಳನ್ನು ಅಪಹರಿಸಿ ನಳಿನಿಗೆ ಬೇರೊಂದು ರೀತಿ ತೊಂದರೆ ಕೊಟ್ಟು, ಕಾಡಬೇಕೆಂಬ ದುರುದ್ದೇಶವು ನಿನ್ನ ಮನದಲ್ಲಿತ್ತು. ಗಂಗಾಧರನಿಗೆ ಪ್ರಜ್ಞೆ ತಪ್ಪಿಸಿ, ಪತ್ರ, ಫೋಟೋವನ್ನು ಅಪಹರಿಸಿಕೊಂಡು ಬರಬೇಕೆಂಬ ಯೋಚನೆ ನಿನ್ನ ಮನದಲ್ಲಿತ್ತು. ಅವನಿಗೆ ಪ್ರಜ್ಞೆ ಬಂದನಂತರ ವಿಷಯ ಗೊತ್ತಾಗದೆ ಇರುತ್ತಿರಲಿಲ್ಲ. ಆಮೇಲೆ ನಿನ್ನನ್ನು ಸುಮ್ಮನೆ ಬಿಡುತ್ತಿದ್ದನೆಂದುಕೊಂಡೆಯಾ? ಫೋಟೋ, ಪತ್ರಗಳು ಇಲ್ಲದೇ ಹೋದರೂ ನಳಿನಿಯ ಮದುವೆಯಾಗಲು ಬಿಡುತ್ತಿರಲಿಲ್ಲ. ಈ ಬಗ್ಗೆ ನೀನು ಮುಂದಾಲೋಚನೆ ಮಾಡಿಯೇ ಗಂಗಾಧರನನ್ನು ಕೊಲೆ ಮಾಡಿರುವೆ. ಗಂಗಾಧರನಿಗೆ ಮಾತಿನಿಂದ ಮರುಳು ಮಾಡಿ, ಅವನ ಮನ ಪೊಲಿಸಿ, ವಿಷಬೆರೆತ ಪಾನೀಯವನ್ನು ಕುಡಿಯಲು ಕೊಟ್ಟು, ಅನಂತರ ಕೊಲೆಮಾಡಿ, ಅಲ್ಲಿಂದ ಕಣ್ಮರೆಯಾಗಿರುವೆ. ಫೋಟೋ ಮತ್ತು ಪತ್ರಗಳು ಮಾತ್ರ ಅಪಹರಣವಾಗಿವೆಯೆಂಬ ವಿಷಯ ಕೇಳಿ ನಿನ್ನ ಮೇಲೆ ನನಗೆ ಸಂದೇಹ ವುಂಟಾಯಿತು. ಫೋಟೋ, ಪತ್ರಗಳ ರಹಸ್ಯ ತಿಳಿದವಳು ನೀನು ಮಾತ್ರ. ನಿನ್ನ ಮೂಲಕ ಭೈರವನಿಗೆ ತಿಳಿಯಿತು. ನೀನು ವಿಶೇಷ ಎಚ್ಚರಿಕೆಯಿಂದ, ಮುಂಜಾಗರೂಕತೆ ವಹಿಸಿ, ಆ ಕಾರ್ಯ ನಿರ್ವಹಿಸಿರುವೆ. ಈಗ ಫೋಟೋ, ಪತ್ರಗಳು ನೀನೇ ಅಡಗಿಸಿಟ್ಟಿದ್ದೀಯೆಂದು ಊಹಿಸಿ, ಇವುಗಳನ್ನು ಹೊರತೆಗೆಯಲು ನಾನು ಈ ರೀತಿ ನಾಟಕ ಆಡಬೇಕಾಯಿತು. ನಾನು ಊಹೆ ಮಾಡಿ ಹೇಳಿದೆನಾದರೂ ನಾನು ಹೇಳಿದಂತೆಯೇ ನಡೆದಿದೆಯೆಂಬುದರಲ್ಲಿ ಸಂಶಯವಿಲ್ಲ.''

ಗಾಳಿರಾಯನು ತನ್ನ ನೈಪುಣ್ಯತೆಯ ಬಗ್ಗೆ ದೀರ್ಘ ವಿವರಣೆ ನೀಡಿದ.

ಮಂಜುಳೆ ಮತ್ತು ಪೊಲೀಸಿನವರು ಬೆರಗಾಗಿ ದಿಗ್ಭ್ರಮೆಗೊಂಡರು.

''ನಿನ್ನಿಂದ ಗಂಗಾಧರನ ಹತ್ಯೆ ನಡೆದಿದೆಯೆಂಬುದಕ್ಕೆ ಇದಕ್ಕಿಂತ ಹೆಚ್ಚಿನ ಆಧಾರ ಬೇಕಿಲ್ಲ. ನ್ಯಾಯಾಲಯದಲ್ಲಿ ನೀನು ನಿರಪರಾಧಿಯೆಂದು ಸಾಧಿಸಬಹುದು. ಲಾಯರನ್ನಿಟ್ಟು ವಾದಿಸಬಹುದು. ನೀನೇನು ಮಾಡಿದರೂ ಶಿಕ್ಷೆಯಿಂದ ತಪ್ಪಿಸಿಕೊಳ್ಳುವ ಹಾಗಿಲ್ಲ. ಆ ಬಗ್ಗೆ ನಳಿನಿಗೆ ಯಾವ ರೀತಿಯ ತೊಂದರೆ ಬಾರದ ಹಾಗೆ ನೋಡಿಕೊಳ್ಳಬೇಕಾದ್ದು ನನ್ನ ಮುಖ್ಯ ಕರ್ತವ್ಯವಾಗಿರುತ್ತೆ.''

ಮಂಜುಳೆಯು ಯಂತ್ರದ ಬೊಂಬೆಯಂತೆ ನಿಂತಿರಲು ಗಾಳಿರಾಯನೇ ಪುನಃ ಮಾತನಾಡಿದ.

ಆಗಲೂ ಮಂಜುಳೆಯು ಬಾಯ್ದೆರೆದು ಏನೊಂದು ಮಾತೂ ಆಡಲಿಲ್ಲ.

ಗಾಳಿರಾಯನ ಅನುಮತಿಯಂತೆ ಪೊಲೀಸಿನವರು ಮಂಜುಳೆಯನ್ನು ತಮ್ಮ ಸಂಗಡ ಕರೆದುಕೊಂಡು ಹೊರಡಲು, ಬಾಗಿಲು ಮುಚ್ಚಿ, ಬೀಗ ಹಾಕಿದ ಗಾಳಿರಾಯನು ಹಿಂದಿನಿಂದ ಹೊರಟ.



ಪೊಲೀಸಿನವರೊಡನೆ ಹೋದ ಗಾಳಿರಾಯನು, ಅವರ ಸಹಿತ ಮಂಜುಳೆಯೊಡನೆ ಬಂದುದನ್ನು ಕಂಡ ಜಗನ್ನಾಥನು ಆಶ್ಚರ್ಯಗೊಂಡರೂ ತೋರಿಸಿಕೊಳ್ಳದೆ ವಿಷಯ ತಿಳಿಯುವ ಆತುರವುಳ್ಳವನಾಗಿ ಪ್ರಶ್ನಾರ್ಥಕ ದೃಷ್ಟಿಯಿಂದ ಗಾಳಿರಾಯನ ಮುಖ ನೋಡಿದ.

ಕುರ್ಚಿಯ ಮೇಲೆ ಕುಳಿತ ಗಾಳಿರಾಯನು ''ಗಂಗಾಧರನನ್ನು ಕೊಲೆ ಮಾಡಿದ ಕೊಲೆ ಪಾತಕಿ

ಇವಳೆ. ಇವಳನ್ನು ಒಳಗೆ ತಳ್ಳಿ, ಒಳಗಿರುವವನನ್ನು ಬಿಟ್ಟು ಕಳುಹಿಸಿ'' ಎಂದು ಹೇಳಿ ಫೋಟೋ, ಪತ್ರಗಳನ್ನು ಮೇಜಿನ ಮೇಲಿಟ್ಟ.

ಫೋಟೋ, ಪತ್ರಗಳನ್ನು ನೋಡಿದ ಜಗನ್ನಾಥನು,

''ಇವು ಎಲ್ಲಿದ್ದುವು? ಹೇಗೆ ಪತ್ತೇ ಮಾಡಿ ಹಿಡಿದಿರಿ?'' ಎಂದು ಕೇಳಿದ.

ಠಾಣೆಯನ್ನು ಬಿಟ್ಟು ಹೊರಟಲಾಗಾಯ್ತು ಹಿಂದಿರುಗಿ ಬರುವವರೆಗೆ ನಡೆದುದನ್ನು ಹೇಳಿದ ಗಾಳಿರಾಯನು ಮುಂದಿನ ಕೆಲಸ ನಿಮಗೆ ಸೇರಿರುವುದರಿಂದ ವಿಶೇಷ ಎಚ್ಚರಿಕೆಯಿಂದ ನೋಡಿಕೊಳ್ಳಬೇಕೆಂದು ಹೇಳಿದ.

''ನೀವು ಹೇಳಿದ್ದೇನೋ ಸರಿ. ಈಕೆಯನ್ನು ನ್ಯಾಯಾಲಯಕ್ಕೆ ಹಾಜರುಪಡಿಸಲು ಫೋಟೋ, ಪತ್ರಗಳನ್ನು ನೀಡಬೇಕಾಗುವುದು. ಆಗ ನಳಿನಿಯ ಪ್ರವರ ಬಲವಾಗಿ ಅವಳ ವಿವಾಹಕ್ಕೆ ಅಡಚಣೆಯಾಗುವುದಿಲ್ಲವೇ?'',

ತನ್ನ ಸಂದೇಹವನ್ನು ಹೊರಗೆಡವಿದ ಜಗನ್ನಾಥ.

''ಈಕೆ ಕೊಲೆ ಮಾಡಿರುವುದು ನಿಜ. ಆಕೆಯ ಮಾನ ಉಳಿಸಬೇಕಾದ್ದು ನಮ್ಮ ಪ್ರಮುಖ ಕರ್ತವ್ಯ. ನೀವು ಬೇರೆ ಬಲವಾದ ಸಾಕ್ಷ್ಯಾಧಾರಗಳನ್ನು ಒದಗಿಸಿಕೊಳ್ಳಿ. ಭೈರವನು ಗಲಾಟೆ ಮಾಡಬಹುದು. ಅವನಿಗೆ ಎಚ್ಚರಿಕೆ ನೀಡಿ. ಬೇಕಾದರೆ ಲಾಯರನ್ನಿಟ್ಟು ಕೇಸು ನಡೆಯಿಸಲಿ.''

''ಭೈರವನನ್ನು ನಾನು ನೋಡಿಕೊಳ್ತೇನೆ, ಬಿಡಿ. ಇಲ್ಲೇ ಹೊರಗಡೆ ಇದ್ದಾನಲ್ಲ. ಈಕೆ ಬಂದುದನ್ನು ನೋಡಿಯೂ ಇರಬಹುದು. ಈಗಲೇ ಕರೆಯಿಸಿ, ಎಚ್ಚರಿಕೆ ನೀಡಿ ಕಳಿಸುತ್ತೇನೆ.''

''ನನ್ನ ಕಾರ್ಯ ಮುಗಿದಂತಾಯಿತು. ನಾನಿನ್ನು ಹೊರಡುತ್ತೇನೆ'',

ಎಂದ ಗಾಳಿರಾಯನು ಬಾಲಚಂದ್ರನಿಗೆ ಫೋನ್ ಮಾಡಿ, ಇನ್‌ಸ್ಪೆಕ್ಟರರಿಂದ ಬೀಳ್ಗೊಂಡು ಹಿಂದಿರುಗಿದ.

ಇನ್‌ಸ್ಪೆಕ್ಟರನು ಭೈರವನನ್ನು ಕರೆಯಿಸಿ ಆತನೊಡನೆ ವಿಷಯ ಹೇಳಲು, ದಿಗ್ಭ್ರಮೆ ಗೊಂಡ ಆತನು, ಮಂಜುಳೆಯು ನಳಿನಿಯ ವಿಷಯವಾಗಿ ಅಂದು ಹೇಳಿದ್ದನ್ನು ಮೆಲುಕ ಹಾಕಿ, ನನ್ನೊಡನೆ ಹೇಳಿದ್ದರೆ ಸುಲಭವಾಗಿ ಬ ಹರಿಸುತ್ತಿದ್ದೆನೇ ಎಂದುಕೊಂಡ.

ಮಿಂಚಿ ಹೋದ ಮೇಲೆ ಚಿಂತೆ ಮಾ ಫಲವೇನು?

''ನೀನಿನ್ನು ಯೋಚನೆ ಮಾಡಿ ಸುಖ ಇಲ್ಲ ಮಂಜುಳೆಗೆ ಶಿಕ್ಷೆ ತಪ್ಪುವುದಿಲ್ಲ. ನಿನ್ನ ಮುಂದಿ ದಾರಿ ನೋಡಿಕೋ.''

ಭೈರವನಿಗೆ ಹಿತೋಕ್ತಿ ಹೇಳಿದ ಇನ್‌ಸ್ಪೆಕ್ಟರನ ಮನೆಯ ಬೀಗದ ಕೈ ಕೊಟ್ಟು ಕಳುಹಿಸಿದ.

ಗಾಳಿರಾಯನು ತನ್ನ ಬಂಗಲೆಗೆ ಹಿಂದಿರ ಗುವ ವೇಳೆಗೆ ಬಾಲಚಂದ್ರನು ಅವನಿಗಾ ಕಾಯುತ್ತಾ ಕುಳಿತಿರುವನು.

ಗೆಳೆಯನೊಡನೆ ತನ್ನ ಕಾರ್ಯ ಚಟುವಟಿ ಯನ್ನು ಹೇಳಿದ ಗಾಳಿರಾಯನು ಚಾಣಕ್ಯ ತಂತ ದಿಂದ ಕೊಲೆ ಮಾಡಿದ್ದರೂ ಬಹು ಸುಲಭವಾ ಸಿಕ್ಕಿಬಿದ್ದಳೆಂದು ಹೇಳಿದ.

''ನಳಿನಿಯ ಘನತೆ, ಗೌರವವನ್ನು ನೀವ ಕಾಪಾಡಿದಂತಾಯಿತು. ಮುಂದೇನ ಮಾಡುತ್ತೀರ?''

ಬಾಲಚಂದ್ರನ ಪ್ರಶ್ನೆಗೆ ಗಾಳಿರಾಯನು

''ನಳಿನಿಯು ಬಂದನಂತರ ಅವಳ ಪ್ರೇ ಪತ್ರ, ಫೋಟೋಗಳನ್ನು ವಾಪಾಸು ಕೊ ತ್ತೇನೆ. ಅಥವಾ ಅವಳ ಎದುರಿಗೇ ಸು ಹಾಕುತ್ತೇನೆ. ಅಲ್ಲಿಗೆ ಈ ಸಮಸ್ಯೆ ಮುಗಿ ಹಾಗೇಯೇ'' ಎಂದು ಉತ್ತರಿಸಿದ.

ಅವರಿಬ್ಬರು ಮಾತನಾಡುತ್ತಿದ್ದ ಹಾ ನಳಿನಿಯು ಆಗಮಿಸಿದಳು.

''ಸರಿಯಾದ ಸಮಯಕ್ಕೆ ಬಂದಿರುವೆ,''

ಎಂದ ಗಾಳಿರಾಯನು ಫೋಟೋ, ಪ ಗಳನ್ನು ತೋರಿಸಿ, ನೀನು ಬರೆದ ಪತ್ರಗಳ

ತೆಗೆಯಿಸಿಕೊಂಡ ಫೋಟೋ ಇವೇ ಅಲ್ಲವೇ? ಎಂದು ಕೇಳಿದ.

ಅವುಗಳನ್ನು ನೋಡಿದ ನಳಿನಿಯು ಸಂತೋಷದಿಂದ ಹೌದೆಂದು ತಲೆಯಾಡಿಸಿದಳು.

ಆಕೆಯ ಎದುರಿಗೆ ಅವುಗಳಿಗೆ ಬೆಂಕಿಯಿಟ್ಟು ದಹಿಸಿದ ಗಾಳಿರಾಯನು ಇನ್ನು ಆ ಭೀತಿ, ಕಳವಳ ಬಿಟ್ಟು ನಿಶ್ಚಿಂತೆಯಿಂದಿರಬಹುದೆಂದು ಹೇಳಿದ.

"ಈ ನಿಮ್ಮ ಉಪಕಾರವನ್ನು ನನ್ನ ಜೀವಾವಧಿ ಮರೆಯಲಾರೆ. ನೀವೇ ದೇವರ ಹಾಗೆ ಬಂದು ನನ್ನ ಮಾನ ಕಾಪಾಡಿದಂತಾಯಿತು. ನಿಮ್ಮ ಬಳಿ ನನ್ನ ಅಳಲನ್ನು ತೋಡಿಕೊಂಡಿದ್ದಕ್ಕೂ ಸಾರ್ಥಕವಾಯಿತು. ನಿಮಗೆ ನನ್ನ ಅನಂತಾನಂತ ನಮಸ್ಕಾರಗಳು,"

ಕೃತಜ್ಞತಾಪೂರ್ವಕವಾಗಿ ಹೇಳಿದಳು ನಳಿನಿ.

ಗಾಳಿರಾಯನ ಆಜ್ಞೆಯಂತೆ ಸೇವಕನು ಮೂವರಿಗೂ ಬಾದಾಮಿ ಹಾಲು ತಂದಿತ್ತ.

ಮೂವರೂ ನಿಧಾನವಾಗಿ ಬಾದಾಮಿ ಹಾಲನ್ನು ಹೀರಿದರು.

ತರುವಾಯ ಎದ್ದು ನಿಂತ ನಳಿನಿಯು ಮದುವೆಯ ಆಹ್ವಾನ ಪತ್ರಿಕೆ ತಂದು ಕೊಡುವೆನೆಂದೂ, ತಪ್ಪದೆ ನೀವಿಬ್ಬರೂ ಮುಹೂರ್ತದ ವೇಳೆಗೆ ಬಂದು ಮನಃಪೂರ್ವಕವಾಗಿ ಆಶೀರ್ವದಿಸಬೇಕೆಂದೂ ಪ್ರಾರ್ಥಿಸಿ ಹಿಂದಿರುಗಿದಳು.

ನಳಿನಿಗೆ ಬೆದರಿಸಿದವನು ಕೊಲೆಯಾದ. ಬೆದರಿಸಲು ಹೊಂಚು ಹಾಕಿದವಳು ಕಾರಾಗ್ರಹ ವಾಸಿಯಾದಳು.

ಸತ್ಯಕ್ಕೆ ಸಾವಿಲ್ಲ – ಅಸತ್ಯಕ್ಕೆ ಜಯವಿಲ್ಲ.





ಕುರ್ಚಿಯ ಮೇಲೆ ಕುಳಿತ ಗಾಳಿರಾಯನು –

"ಗಂಗಾಧರನನ್ನು ಕೊಲೆ ಮಾಡಿದ ಕೊಲೆ ಪಾತಕಿ ಇವಳೇ. ಇವಳನ್ನು ಒಳಗೆ ತಳ್ಳಿ ಒಳಗಿರುವವನನ್ನು ಬಿಟ್ಟು ಕಳುಹಿಸಿ' ಎಂದು ಹೇಳಿ ಫೋಟೋ, ಚಿತ್ರಗಳನ್ನು ಮೇಜಿನ ಮೇಲಿಟ್ಟ.

ಫೋಟೋ, ಚಿತ್ರಗಳನ್ನು ನೋಡಿದ ಜಗನ್ನಾಥನು –

"ಇವು ಎಲ್ಲಿದ್ದುವು? - ಹೀಗೆ ಚಿತ್ರ ಮಾಡಿ ಹಿಡಿದಿರಿ?" ಎಂದು ಕೇಳಿದ

ಎಚ್ ನರಸಿಂಹಯ್ಯ






# ಸಖೀಗೀತ

ಚಂದ್ರಶೇಖರ ಆಲೂರು

ಇದೊಂದು ದೀರ್ಘ ಪ್ರಯಾಣ.

ವಿವಾಹದಂತೆ, ದಾಂಪತ್ಯದಂತೆ. ಎಲ್ಲ ದೀರ್ಘಪ್ರಯಾಣ, ಯಾತ್ರೆಗಳ ಆರಂಭ
ಉಲ್ಲಾಸದಿಂದ, ಉತ್ಸಾಹದಿಂದ ತುಂಬಿರುತ್ತದೆ. ಶಾಲಾ ಮಕ್ಕಳಲ್ಲಿ ಮೊದಲ ಬಾರಿ ಟ್ರಿ
ಹೊರಡುವಾಗ ಇರುವ ಸಂಭ್ರಮದಂತೆ. ವೈವಾಹಿಕ ಜೀವನಕ್ಕೆ ಅಡಿಯಿಟ್ಟಾಗ ಜೀವವನ್ನು ಆವರಿಸಿ
ಚೈತನ್ಯದಂತೆ! ಆದರೆ ದಾರಿ ಕ್ರಮಿಸುವಾಗ ಕ್ರಮೇಣ ಏನೋ ಒಂದು ಬಗೆಯ ನಿರುತ್ಸಾಹ, ಬೇಸ

ಸುಸ್ತು ಆವರಿಸುತ್ತದೆ, ದಾಂಪತ್ಯದ ಹಾದಿ ಕ್ರಮಿಸಿದಂತೆಯೇ. ಮರಳಿ ಮನೆಗೆ ಹೋಗುವ ತವಕ. (ಆದರೆ ದಾಂಪತ್ಯದಲ್ಲಿ ಮರಳುವ ಹಾದಿಯಿಲ್ಲ. ಅದು ಏಕಮುಖ ಪಯಣ!)

ಆದರೂ ಹಾದಿ ಮಧ್ಯದ ತಂಗುದಾಣಗಳು, ಪ್ರಯಾಣದ ಜೊತೆಗಾರರು ದೀರ್ಘ ಪ್ರಯಾಣದ ಮಧ್ಯ ಆವರಿಸಿದ ಮಂಕನ್ನ ದೂರ ತಳ್ಳುತ್ತಾರೆ. ಒಂದು ಕ್ಷಣ ಕವಿದ ಮಂಕು ಮಂಜಿನಂತೆ ದೂರ ಸರಿದು ಉಲ್ಲಾಸ ಸ್ಥಾಯಿಯಾಗುತ್ತದೆ. ಹೀಗಾಗಿ ಇಂಥ ಪ್ರಯಾಣಗಳಲ್ಲಿ ಬೇಸರಭಾವ ಸಂಚಾರಿ ಅಷ್ಟೆ.

ಹಲವು ತಿಂಗಳ ಹಿಂದೆ ನಾವು ಕೆಲವು ಗೆಳೆಯರು ಇಂಥದೊಂದು ದೀರ್ಘ ಪ್ರಯಾಣ ಕೈಗೊಂಡಿದ್ದೆವು. ಅದು ಹಳೆಯ ಮಾಡೆಲ್ ಜೀಪ್. ಆದರೂ ಕೆಲಸದ ಒತ್ತಡಗಳಿದ್ದರಿಂದ, ಒಂದೇ ಬಾರಿಗೆ ಸಾಧ್ಯವಾದಷ್ಟು ಇಡೀ ಕರ್ನಾಟಕದ ಉದ್ದಗಲವನ್ನೂ ನೋಡುವುದು ಈ ಪ್ರಯಾಣದ ಉದ್ದೇಶವಾಗಿತ್ತು. ತೀರ್ಥಹಳ್ಳಿಯಿಂದ ಕುಪ್ಪಳ್ಳಿಗೆ ಹೋದವರು ಅಲ್ಲಿಂದ ಹುಲಿಕಲ್ ಘಾಟಿಯಿಂದ ಘಟ್ಟ ಇಳಿದು ಸಮುದ್ರ ಸೇರುವುದೆಂದು ತೀರ್ಮಾನಿಸಿದೆವು.

ಆಕಾಶದ ತುಂಬಾ ಆನೆಗಳ ಹಿಂಡಿನಂತೆ ತೂನೆಯುತ್ತಿದ್ದ ಕಾರ್ಮೋಡಗಳು ಮಲೆನಾಡಿನ ಹಸಿರನ್ನು ಹಸಿರುಗಪ್ಪಾಗಿ ಮಾಡಿದ್ದವು. ಸಹ್ಯಾದ್ರಿಯ ಪರ್ವತಗಳ ಮೇಲೆ ಮೋಡಗಳ ನೆರಳು ನಾಟ್ಯವಾಡುತ್ತಿತ್ತು. ಇನ್ನೂ ಸಂಜೆಯ ಹೊಸ್ತಿಲಲ್ಲಿದ್ದರೂ ಮುಸ್ಸಂಜೆ ದಾಟಿದಂತೆ ಕಾಣುತ್ತಿತ್ತು. ಯಾವ ಕ್ಷಣದಲ್ಲಾದರೂ ಆಕಾಶ ಕಳಚಿ ಬೀಳುವಂತಿತ್ತು. ಆದರೆ ನಮ್ಮ ಹೃದಯ-ಮನಸ್ಸು ಇದಾವುದನ್ನೂ ಲೆಕ್ಕಿಸುವ ಸ್ಥಿತಿಯಲ್ಲಿರಲಿಲ್ಲ.



ಸ್ವಲ್ಪ ದೂರ ಸಾಗುವಷ್ಟರಲ್ಲೇ ಸುರಿಮಳೆ. ನಮ್ಮ ಜೀಪು ಸ್ಲೋ ಸೈಕಲ್ ರೇಸಿನಲ್ಲಿ ಹೋಗುವಂತೆ ನಿಧಾನವಾಗಿ ಚಲಿಸುತ್ತಿತ್ತು. ಎದುರೂ ವಾಹನಗಳಿಲ್ಲ. ಹಿಂದೆಯೂ ವಾಹನಗಳಿಲ್ಲ. ಅಕ್ಕ-ಪಕ್ಕ, ಹಿಂದೆ-ಮುಂದೆ ಮಳೆ, ಬರೀ ಮಳೆ. ಆರ್ಭಟಿಸುವ ಗುಡುಗು ಸಿಡಿಲು; ಕ್ಷಣಕ್ಕೊಮ್ಮೆ ಆಕಾಶದಲ್ಲೇ ಹುಟ್ಟಿ ಆಕಾಶವನ್ನೇ ಸೀಳಿಕೊಂಡು ಹೋಗುತ್ತಿದ್ದ ಮಿಂಚು. ನಮ್ಮ ಟಾರ್ಪಾಲಿನ್ ಟಾಪಿನ ಜೀಪು ತನ್ನಂತೆಯೇ ನಮ್ಮನ್ನೂ ಮಲೆನಾಡಿನ ಮಳೆಗೆ ಒಡ್ಡಿತ್ತು. ವಿಶ್ವಸುಂದರಿಗಳನ್ನು ನೀವಾಳಿಸಿ ಎಸೆಯುವಂಥ ನಿಸರ್ಗದ ವೈಭವ. ಪ್ರತಿ ಕ್ಷಣವನ್ನೂ ಕತ್ತರಿಸಿ ಇಡುವಂತಿದ್ದರೆ, ಇಂಥ ದೃಶ್ಯವನ್ನು ಸ್ಟಿಲ್ ಮಾಡುವಂತಿದ್ದರೆ, 'ಸ್ವಾಚೂ' ಮಾಡುವಂತಿದ್ದರೆ... ಯಾರೊಬ್ಬರ ಬಾಯಲ್ಲೂ ಮಾತಿಲ್ಲ. ಮತ್ತೆ ಜೀವನದಲ್ಲಿ ಇಂಥ ನೋಟ ಸಿಕ್ಕುವುದಿಲ್ಲ ಎಂಬಂತೆ ಎಲ್ಲರೂ ಉಸಿರು ಬಿಗಿಹಿಡಿದು ಮಳೆಯಲ್ಲಿ ತೋಯುತ್ತಿರುವ ಸಹ್ಯಾದ್ರಿಯಲ್ಲಿ ಲೀನವಾಗಿದ್ದೆವು. ನೋಡ ನೋಡುತ್ತಿದ್ದಂತೆಯೇ ಆಕಾಶದಲ್ಲಿದ್ದ ಅಲ್ಪಸ್ವಲ್ಪ ಬೆಳಕಿನ ಕಂಬಿಗಳು ಕಿರಣಗಳಾಗಿ ನಂತರ ಇನ್ನೂ ಕ್ಷೀಣಿಸುತ್ತಾ ಮೋಡದ ಕಪ್ಪಲ್ಲಿ ಕರಗಿಹೋದವು. ಮಳೆಸುರಿದಷ್ಟೂ ಒತ್ತರಿಸಿಕೊಂಡು ಬರುವ ಉತ್ಕಟ ಪ್ರೇಮಿಯ ಮೋಹದಂತೆ ಮೋಡಗಳು ಮತ್ತಷ್ಟು, ಮತ್ತಷ್ಟು ದಟ್ಟವಾಗುತ್ತ ಇಡೀ ಮಲೆನಾಡು ಮಳೆಯಲ್ಲಿ, ಕತ್ತಲಲ್ಲಿ ಕರಗಲಾರಂಭಿಸಿತು.

ಇದ್ದಕ್ಕಿದ್ದಂತೆ ಜೀಪ್ ಓಡಿಸುತ್ತಿದ್ದ ಗೆಳೆಯ 'ಮೈಗಾಡ್' ಎಂದ. ವಾಟರ್ ಬಾಕ್ಸ್‌ಗಳಿಂದ ತುಂಬಿದ್ದ ಜೀಪಿನಲ್ಲಿ ಗಂಟೆಗಳ ನಂತರ ಮೊಳಗಿದ ಮೊದಲ ಮಾತು. ಎಲ್ಲರೂ ಒಟ್ಟಿಗೆ 'ಯಾಕೋ' ಅಂದೆವು. 'ಹೆಡ್‌ಲೈಟ್ಸ್ ಆನ್ ಆಗ್ತಾ ಇಲ್ಲ' ಎಂದ ಗೆಳೆಯ. 'ಆಗುವಷ್ಟು ದೂರ ಓಡಿಸಿ ಎಲ್ಲಾದರೂ ಮಟ್ಟಸ ಜಾಗದಲ್ಲಿ ನಿಲ್ಲಿಸು.' 'ಹಗಲಾದರೇನು, ಇರುಳಾದರೇನು ಕಾಡಹರಟೆ ಇದ್ದೇ ಇದೆಯಲ್ಲ' 'ಕಾಡಹರಟೆ

ಅಲ್ಲ ಕಾಡಿನಲ್ಲಿ ಹರಟೆ'... ಹೀಗೆ ನಾನಾ ದನಿಗಳು. ಆ ಗುಂಪಿನಲ್ಲಿ ಮದುವೆಯಾಗಿ 10-12 ವರ್ಷವಾದವರು, ಇನ್ನೂ ಹನಿಮೂನ್ ಬ್ಲಷ್ ಆರದವರು... ಎಲ್ಲ ಥರದವರೂ ಇದ್ದರು. ಗುಂಪಿನ ಸರಾಸರಿ ವಯಸ್ಸು ಮೂವತ್ತು ಇದ್ದಿರಬಹುದು! ಎಲ್ಲ ನದಿಗಳು ಕಡೆಗೆ ಸಾಗರ ಸೇರುವಂತೆ ಯುವಕರ (ಅಥವಾ ಗಂಡಸರ!) ಗುಂಪಿದ್ದಾಗ ಎಲ್ಲ ಚರ್ಚೆಯೂ ಅಂತಿಮವಾಗಿ ತಲುಪುವುದು ಹೆಣ್ಣನ್ನೇ ಅಂತೆಯೇ ನಮ್ಮ ಮಾತುಗಳು ರಾಜ್ಯದ, ರಾಷ್ಟ್ರದ ರಾಜಕಾರಣ ಮುಗಿಸಿ ಕಡೆಗೆ ಹೆಣ್ಣಿನ ಸುತ್ತ ಗಿರ ಹೊಡೆಯಲಾರಂಭಿಸಿದವು. ಒಬ್ಬ ಗೆಳೆಯ ಜೀಪಿನಲ್ಲಿ ಜ್ಞಾನೋದಯವಾದವನಂತೆ ದಿಢೀರ್ ಎಂದ ಹೇಳಿದ: ''ಈ ಮದುವೆ ಅನ್ನೋದನ್ನ ಯಾವ ಬಡ್ಡೀಮಗ ಕಂಡುಹಿಡಿದ ಗುರು... ಮದುವೆ ಅಂದ ಸ್ವಾತಂತ್ರ್ಯದ ನಾಶ, losing ourselves'' ಮತ್ತೊಬ್ಬ ಅವನಿಗೆ ಕುಮ್ಮಕ್ಕು ಕೊಡುವವನಂತೆ ''ಈಗಿ ದಿನಗಳಲ್ಲಿ ದಾಂಪತ್ಯ ಎಂದರೆ 'ಸಾಟರ್ಡೆ ಸೆಕ್ಸ್' ಎಂಬಂತಾಗಿದೆ. ಕಾಮದ ಅಗ್ನಿಯಲ್ಲಿ ಎರಡ ಜೀವಿಗಳು ಬೆಸೆದು ಒಂದಾಗುವ ಬದಲು ಇಂದು ಸೆಕ್ಸ್, ಊಟ, ತಿಂಡಿಯ ಹಾಗೆ ಕೇವಲ ಅಗತ್ಯ ಮಟ್ಟದಲ್ಲಿ ನಿಂತಿದೆ'' ಇನ್ನೊಬ್ಬ ಒಗಟು ಹೇಳುವಂತೆ ''ದಾಂಪತ್ಯ neither resist nor asist ಎನ್ನು ಸ್ಥಿತಿ'' ಎಂದ.

... ಹೀಗೇ ಸಾಗಿ ಅದು ಹೇಗೋ ಮರಣಶಯ್ಯೆಯಲ್ಲಿ ಅಮಿತಾಬ ಹೇಳಿದ ಅಮರವಾಕ್ಯ ಪ್ರಸ್ತಾಪ ಬಂತು: 'ಪತ್ನಿಯರೆಲ್ಲ ಮನದನ್ನೆಯರಲ್ಲ'. ಹೊರಗೆ ಮೋಡ ಕವಿದ ಆಗಸದಲ ಮಿಂಚಿನಿಂದ ಬೆಳಗುವ ಗಿರಿಶಿಖರ; ಕೊನೆಯಿಲ್ಲವೆಂಬಂತೆ ಸುರಿವ ಮಳೆ. ಜೀಪಿನೊಳಗೆ ಶಾ ಕವುಚಿಕೊಂಡು ಕುಕ್ಕುರುಗಾಲಲ್ಲಿ ಕುಳಿತು ಚರ್ಚೆ: ಪತ್ನಿಯರೆಲ್ಲ ಮನದನ್ನೆಯರಲ್ಲ. ಇದ ಪ್ರಸ್ತಾಪಿಸಿದವನು ಹಿರಿಯ ವಿವಾಹಿತ ಎಂದು ಬಿಡಿಸಿ ಹೇಳಬೇಕಿಲ್ಲ. ಇದಕ್ಕೆ ಸಹಜವಾಗಿಯೇ ನ ವಿವಾಹಿತನಿಂದ ಆಕ್ಷೇಪ ಬಂತು. ಇದೊಂದು ಅಂತಾರಾಷ್ಟ್ರೀಯ ಸಮಸ್ಯೆ ಎಂಬಂತೆ ಕೆಲವರು ಪ ಹೋಗಬೇಕೋ ವಿರುದ್ಧ ಹೋಗಬೇಕೋ ಗೊತ್ತಾಗದೆ ಗೊಂದಲದಲ್ಲಿ ಬಿದ್ದರು. ಆಗ 'ಮಧ್ಯ ಹೇಳಿದ: 'ಪತ್ನಿಯರೆಲ್ಲ ಮನದನ್ನೆಯರಲ್ಲ' ಎಂಬ ಮಾತನ್ನು 'ಪತ್ನಿಯರೆಲ್ಲ ಸರ್ವಕಾಲಕ ಮನದನ್ನೆಯರಲ್ಲ' ಎಂದೂ ಬದಲಿಸಬಹುದು. ಮತ್ತೊಬ್ಬ ಸಣ್ಣ ಕರೆಕ್ಷನ್ ಎನ್ನುತ್ತಾ 'ಮನದನ್ನೆಯ ಸರ್ವಕಾಲಕ್ಕೂ ಮನದನ್ನೆಯಲ್ಲ' ಎಂದು ಹೊಸ ಬಾಂಬ್ ಸಿಡಿಸಿದ. ಒಂದು ಕ್ಷಣ ಎಲ್ಲ ಸ್ತಬ್ಧರಾದೆವು.



ಅಂದರೆ ನಮ್ಮ ಮಾತುಗಳು ಪತ್ನಿಯ ವಿರುದ್ಧವೋ ಅಥವಾ ವಿವಾಹವೆಂಬ ಸಂಸ್ಥೆಯ ವಿರುದ್ಧವೋ ಅಥವಾ ಮನದನ್ನೆ ಪಟ್ಟ ಕೂಡಾ ಶಾಶ್ವತವಾದುದಲ್ಲ ಎಂದು ಹೇಳುವ ಮೂಲಕ ಮನಸ್ಸಿನ ಚಾಂಚಲ್ಯದ ಬಗೆಗಿನ ಚರ್ಚೆಯೋ ಎಂಬುದು ಯಾರಿಗೂ ಅರ್ಥವಾಗಲಿಲ್ಲ.

ಈ ಮಧ್ಯ ಒಬ್ಬ ವೇದಾಂತಿಯಂತೆ ಹೇಳಿದ: ನಮ್ಮ ಭಾರತದಲ್ಲಿ ಬಹುಪಾಲು ದಾಂಪತ್ಯಗಳು ಉಳಿದಿರುವ ಕಾರಣ ಗೊತ್ತಾ? ಮನೆ, ಆಸ್ತಿ ಎಲ್ಲವನ್ನೂ ಭಾಗ ಮಾಡಿಕೊಳ್ಳುವ ಮನುಷ್ಯ ಮಗುವನ್ನು ಭಾಗ ಮಾಡಿಕೊಳ್ಳಲಾರ. ಕೇವಲ ಜವಾಬ್ದಾರಿ, ಹಕ್ಕಿನ ಮಾತಷ್ಟೇ ಅಲ್ಲ, ಒಂದು ವಿಚಿತ್ರ ನಿಮಗೆ ಗೊತ್ತಿದೆಯಾ. ನಾನು ಬಲ್ಲ ಎಷ್ಟೋ ಮುದುಡಿದ್ದ, ನಿರ್ಜೀವವಾಗಿದ್ದ ದಾಂಪತ್ಯಗಳು ಮಗುವಾದ ಬಳಿಕ ಅರಳಿವೆ. ನಿಜಕ್ಕೂ ಜೀವ ಕೂಡಿಕೊಂಡಿವೆ. ದಾಂಪತ್ಯದ ಏಕತಾನತೆಯಲ್ಲಿ ಮಗು-ಮಕ್ಕಳು ಗಂಡ-ಹೆಂಡಿರ ನಡುವೆ ಚೈತನ್ಯ ಚಿಮ್ಮಿಸುವ ಚಿಲುಮೆಗಳು.

.... ಇದೆಲ್ಲಾ ತೀರಾ ಗಂಭೀರವಾಗುತ್ತಿದೆ ಅನ್ನುವಾಗ ನಮ್ಮ ಟೀಂನ ಬೇಬಿ ಮೆಂಬರ್ ನಾನೊಂದು ಪ್ರಸಂಗ ಹೇಳ್ತೀನಿ ಕೇಳ್ರೋ ಎಂದ:



ನಮ್ಮ ಪಕ್ಕದ ಮನೇಲಿ ಒಂದು ಸಂಸಾರ ಇದೆ. ಗಂಡ ಹೆಂಡತಿ ಇಬ್ಬರೂ ಪೂರ್ವ-ಪಶ್ಚಿಮ. ನಾನೆಂದೂ ಅವರಿಬ್ಬರೂ ಜೊತೆಯಾಗಿ ಓಡಾಡಿದ್ದು ನೋಡಿಲ್ಲ. ನಗು-ನಗುತ್ತಾ ಇರಲಿ, ಬರೀ ಮಾತಾಡಿದ್ದು ನೋಡಿಲ್ಲ. ಅವರ ಮನೇಲಿ ಯಾವಾಗಲೂ ಮಧ್ಯಾಹ್ನದ ಟಿ.ವಿ. ಸೀರಿಯಲ್‌ಗಳಲ್ಲಿರುತ್ತಲ್ಲ ಆ ಥರ ಉಸಿರುಗಟ್ಟಿದ ವಾತಾವರಣ ಇರುತ್ತೆ. ಆದರೆ ಅಂಕಲ್ಲು-ಆಂಟಿ ಇಬ್ಬರಿಗೂ ನನ್ನ ಕಂಡ್ರೆ ಇಷ್ಟ. ಅವರ ಮಗ ನನ್ನ ಕ್ಲಾಸ್‌ಮೇಟ್ ಆಗಿದ್ದ. ಹೀಗಾಗಿ ಅವರ ಮನೇಲಿ ನನಗೆ ತುಂಬಾ ಸಲುಗೆ.

'ನಿಮ್ಮ ಅಂಕಲ್ಲು ಯಾರೂಂತ ಗೊತ್ತಾಯ್ತು ಬಿಡೋಲೇ ಅವ್ನು ಭಾರಿ ಖಯಾಲಿ ಆಸಾಮಿ ಅಲ್ವೇನೋ...' 'ನೋಡೋ, ಅವ್ನು ಇವ್ನು ಅನ್ಬೇಡ ಅವರು ಸಖತ್ ಬ್ರಿಲಿಯಂಟ್ ಗೊತ್ತಾ, ಚೆಸ್‌ನಲ್ಲಿ ಯಾರನ್ನಾದ್ರೂ ಒಂದ್ನಿಮಿಷದಲ್ಲಿ ಚಿತ್ ಮಾಡ್ತಾರೆ' 'ಇರಲಿ ಮುಂದೆ ಅದೇನ್ ಕತೆ ಹೇಳ್ಲಾ...'

ಅವರು ಒಂದ್ಸಲ ಗುಂಡು ಹಾಕ್ತಾ ಕುಳಿತಿದ್ರು. ಮನೇಲಿ ಯಾರೂ ಇರಲಿಲ್ಲ. ನನ್ನನ್ನೂ ಕರೆದ್ರು. 'ಬಾರಯ್ಯಾ ಕೂತ್ಕೊ ನೀನೂ ಸ್ವಲ್ಪ ತೆಗೊಳಯ್ಯಾ... ಇದು ಫಾದರ್ಲಿ ಅಡ್ವೈಸ್ ಕಣಯ್ಯಾ' ಅಂದ್ರು. 'ಇಲ್ಲ ನಂಗೆ ಇಷ್ಟ ಆಗಲ್ಲ' ಅಂದೆ. ಇದನ್ನು ತೆಗೊಳ್ಳದೇ ಇದ್ರೇ ಜೀವನದಲ್ಲಿ ನೀನು ಏನೋ ಮುಖ್ಯವಾದದ್ದನ್ನ ಮಿಸ್ ಮಾಡ್ತಿದೀಯ ಅಂತ ಕಣಯ್ಯ, ಹೋಗಲಿ ಬಿಡು ನಾನು ಫೋರ್ಸ್ ಮಾಡಲ್ಲ ಅಂದ್ರು. ನಂತರ ಅದೂ ಇದೂ ಮಾತಾಡುತ್ತಾ ದಿಢೀರನೆ 'ನನ್ನ ವಯಸ್ಸು ಎಷ್ಟಿರಬಹುದು ಹೇಳು' ಅಂದ್ರು. ನಾನು ಅವರಿಗೆ ಖುಷಿ ಆಗಲೀಂತ 45-46 ಇರಬಹುದು ಎಂದೆ. 'ನೋನೋ ಇಲ್ಲಯ್ಯ I am fifty five. ಯಾರಿಗೂ ಹೇಳಿಲ್ಲ. ನಿಂಗೊಂದು ಸರ್‌ಪ್ರೈಸ್ ವಿಷಯ ಹೇಳ್ತೀನಿ ಕೇಳು' ಎಂದು ಏಕ್‌ದಂ, 'ನಾನು ಇಪ್ಪತ್ತು ವರ್ಷದಿಂದ ನನ್ನ ಹೆಂಡತಿ ಜತೆ ಮಲಗಿಲ್ಲ' ಅಂದ್ರು.

ಗೆಳೆಯನೊಬ್ಬ ಮತ್ತೆ ಬಾಯಿ ಹಾಕಿದ. ''ನಾನು ಮೊದಲೇ ಹೇಳಲಿಲ್ಲೇನೋ ಅವನ್ದು ಬೇಜಾನ್ ಅಫೇರ್ಸ್ ಅಂತ.'' ''ಇರಲಿ ಮುಂದೆ ಕೇಳೋ''- ಅಂಕಲ್ ಮಾತು ಕೇಳಿ ನಂಗೆ ನಿಜಕ್ಕೂ ಶಾಕ್ ಆಯ್ತು. ನಾನು ''ಆಂಟಿ...'' ಎಂದು ಪ್ರಶ್ನಾರ್ಥಕವಾಗಿ ಅವರನ್ನು ನೋಡಿದೆ. ಅವರು ಅದೊಂದು ದೇಶಾವರಿ ವಿಷಯ ಎಂಬಂತೆ 'ನಂಗೆ ಇಷ್ಟ ಇಲ್ಲ ಅಂದ್ರೆ, ಅವಳಿಗೂ ಇಷ್ಟ ಆಗ್ಬಾರ್ದು ಅಂತ ಅರ್ಥ ಕಣಯ್ಯಾ'

ಎಂದರು. 'ಒಂದು ದಿನವೂ ನಗುನಗ್ತಾ ಮಾತಾಡದೆ, ಒಡನಾಡದೆ ಇಪ್ಪತ್ತು ವರ್ಷ ಜೊತೆ
ಇರೋದಕ್ಕಿಂತ ಡೈವೋರ್ಸ್ ತಗೋಬಹುದಿತ್ತಲ್ಲ. ಹೀಗೆ ತೋರಿಕೆಗಾಗಿ ಉಸಿರು ಬಿಗಿಹಿಡಿದುಕೊಂ
ಶ್ರೀಮಂತವಾಗಿ ಬಾಳುವೆ ಮಾಡುವುದಕ್ಕಿಂತ ಸ್ವತಂತ್ರವಾಗಿದ್ದರೆ ಚಂದ ಇರ್ತಿತ್ತಲ್ವಾ ಅಂಕಲ್' ಎಂ

'ನಿನಗೆ ಅದೆಲ್ಲಾ ಗೊತ್ತಾಗಲ್ಲಯ್ಯ... ನೀನಿನ್ನೂ ಹುಡುಗ' ಎಂದರು.

ನಾನು, ಅವರು ಹೇಳುವುದೂ ನಿಜ ಇರಬಹುದು ಅಂದುಕೊಂಡು ಸುಮ್ಮನಾದೆ. ಅದಾದ ಸ
ದಿನಕ್ಕೆ ಅಂಕಲ್‌ಗೆ ಸ್ಟ್ರೋಕ್ ಆಯ್ತು. ಆರು ತಿಂಗಳು ಆಸ್ಪತ್ರೆಯಲ್ಲಿದ್ದರು. ಆಂಟಿ ಇಡೀ ದಿನ ಅ
ಇರ್ತಿದ್ರು. ನಾನು ನಾಲ್ಕಾರು ಸಲ ಅವರನ್ನ ನೋಡೋಕೆ ಹೋಗಿದ್ದೆ. ಅಂಕಲ್ ಹೆಂಡತಿಯ ಬಗ್ಗೆ ಸ
ಮೃದುವಾಗಿ ಕಾಣ್ತಿದ್ದರು. ಆಂಟಿಯಲ್ಲೂ ಗಡಸುತನದ ಬದಲು ಮಾರ್ದವತೆ ಕಾಣ್ತಿತ್ತು. ಅವ
ಪತ್ನಿಯ ಕರ್ತವ್ಯಪ್ರಜ್ಞೆ ಇತ್ತೋ, ದಾದಿಯ ಸೇವಾನಿಷ್ಠೆ ಇತ್ತೋ, ಪ್ರೇಯಸಿಯ ಪ್ರೀತಿ ಇತ್ತೋ; ಅಥ
ಯಾವುದೇ ಮನುಷ್ಯ ಕಷ್ಟದಲ್ಲಿರುವ ಇನ್ನೊಬ್ಬ ಮನುಷ್ಯನಿಗೆ ಮಾಡಬೇಕಾದ ಸಹಾಯ ಎ
ಭಾವವಿತ್ತೋ ನನಗೆ ತಿಳಿಯಲಿಲ್ಲ...

ಆಗ ಒಬ್ಬ ಗೆಳೆಯ ಬಿರುಸಿನಿಂದ ಹೇಳಿದ: "ನನಗೆ ಈ ಸೆಂಟಿಮೆಂಟ್ಸ್ ಇಷ್ಟ ಆಗೋಲ್ಲ ಕಣ
ನಾನೂ ಎಷ್ಟೊ ಕಡೆ ನೋಡಿದ್ದೇನೆ, ಓದಿದ್ದೇನೆ. ಹೆಂಡತಿ ಅಪ್ಪನ ಹಾಗೆ ಎಂದು ಎಲ್ಲ ಅವತಾರ ಮ
ವೃದ್ಧಾಪ್ಯದಲ್ಲಿ ಹೆಂಡತಿ ಬಳಿ ಮರಳುವ ಅನೇಕ ಗಂಡಸರಿದ್ದಾರೆ. ಇದ್ದಕ್ಕಿದ್ದಂತೆ ಹೆಂಡತಿ ಗಂಡನ ತಪ್ಪ
ಕ್ಷಮಿಸಿ ಮಾತೃಭಾವದಿಂದ ಗಂಡನನ್ನು ನೋಡಿಕೋತಾಳೆ... ಮಣ್ಣು...ಮಸಿ... ನನಗೆ ಇದೆಲ್ಲ ಆಡ
ಗಾದೆ ಥರ ಕಾಣುತ್ತೆ: 'ಇಟ್ಟುಕೊಂಡವಳು ಇರೋತನಕ ಕಟ್ಟಿಕೊಂಡವಳು ಕಡೇತನಕ...' ಎ
ತಮಾಷೆ!" ಮತ್ತೊಬ್ಬ ಮಧ್ಯ ಪ್ರವೇಶಿಸಿ ಹೇಳಿದ: "ಇರಲಿ ಬಿಡೋ ಎಕ್ಸೈಟ್ ಆಗಬೇ
ಸಂಬಂಧಗಳ ವಿಚಾರದಲ್ಲಿ ಲೆಕ್ಕಾಚಾರದ ಹಾಗೆ ಎರಡೆರಡ್ಲ ನಾಕು ಅಂತ ಹೇಳೋಕೆ ಆಗಲ್ಲ..."

ಹೊರಗೆ ಮಲೆನಾಡಿನ ಮಳೆ ಸುರಿಯುತ್ತಲೇ ಇತ್ತು. ಒಳಗೆ ಚರ್ಚೆಗೆ ಬಿಸಿ ಏರುತ್ತಿತ್ತು. ಇದೆಲ್ಲ ಗಂಡುಗಳ ಲೋಕವಾಯ್ತು. ಹೆಣ್ಣಿನ ಲೋಕ ಹೇಗಿರುತ್ತದೆ? ಸುರಿವ ಮಳೆಯಲ್ಲಿ ನೆನಪೊಂದು ನುಗ್ಗಿಬಂತು.

ಆಕೆ ಸ್ಫುರದ್ರೂಪಿ ತರುಣಿ. ಸಿನಿಮಾ ತಾರೆಯಂತೆ ಝಗಮಗಿಸುವ ರೂಪವಲ್ಲ. ಬೆಳದಿಂಗಳಲ್ಲಿ ಅದ್ದಿ ತೆಗೆದವಳಂತೆ ಕಾಣುತ್ತಾಳೆ. ಅಪೂರ್ವ ಕಾಂತಿ. ನಾಲ್ಕು ಜನರಲ್ಲಿ ಎದ್ದು ಕಾಣುವ ಸೌಂದರ್ಯ. ತನ್ನ ಇರವಿನಿಂದಲೇ ಎಂಥ ನೀರಸ ವಾತಾವರಣಕ್ಕೂ ಲವಲವಿಕೆ ತರಬಲ್ಲ ಲಾವಣ್ಯವತಿ. ಆತನೂ ಕಡಿಮೆ ಏನಲ್ಲ. ಅವಳ ರೂಪು, ಪ್ರತಿಭೆ ಎಲ್ಲದಕ್ಕೂ ಅನುರೂಪನಾದ ಪತಿ. ಇಬ್ಬರೂ



ಎಂ.ಎನ್.ಸಿ.ಯಲ್ಲಿ ಅಧಿಕಾರಿಗಳು. ಮುದ್ದಾದ ಮಗು 'ಸ್ವರ್ಗಕ್ಕೆ ಕಿಚ್ಚು ಹಚ್ಚೆಂದ' ಎಂಬಂಥ ಸಂಸಾರ. ಬಂಗಲೆಯಂಥ ಮನೆ. ಇಬ್ಬರಿಗೂ ಒಂದೊಂದು ಕಾರು. ಹಿರಿಯರು ಮಾಡಿಟ್ಟ ಘನವಾದ ಆಸ್ತಿ ಬೇರೆ. ಸಾಂಪ್ರದಾಯಿಕ ಹಿನ್ನೆಲೆಯ ಸುಖೀ ಕುಟುಂಬ.

ಈಚೆಗೆ ಆ ಗೆಳತಿ ಅಕಸ್ಮಾತ್ತಾಗಿ ಸಿಕ್ಕಳು. ಕಾಫಿಯೊಂದಿಗೆ ವೆದರ್, ಸೈಕ್ಲೋನ್, ಆಸ್ಟ್ರೇಲಿಯದ ಎದುರು ಭಾರತದವರು ಬಿಕನಾಸಿಗಳಂತೆ ಆಡುತ್ತಿರುವುದು... ಮುಂತಾಗಿ ಲೋಕಾಭಿರಾಮದ ಮಾತು. ಸಿಡಿಮಿಡಿಗೊಂಡಂತೆ ಕಂಡ ಅವಳು ಹಳೆಯ ಗೆಳೆತನದ ಸಲುಗೆಯಿಂದ ಹೇಳಿದಳು: ''ಮತ್ತೆ ವೆದರ್ ವಿಷಯ ಮಾತಾಡಬೇಡ. ನಾನು ನಿನ್ನ ಶತ್ರು ಅಲ್ಲ'' ಎಂದು ನಕ್ಕಳು. ಎರಡೂ ಕೆನ್ನೆಯಲ್ಲಿ ಮೋಹಕ ಕುಳಿಗಳು. ''ನಿನ್ನ ಗಂಡ 'ಡಿಂಪಲ್' ಅಂತ ಕರೀತಾನ'' ಎಂದು ನಾನೂ ನಕ್ಕೆ. ಅದು ಅವಳಿಗೆ ನಾವು ಕ್ಯಾಂಪಸ್‌ನಲ್ಲಿ ಇಟ್ಟ ಹೆಸರು. ಗಲಿಬಿಲಿಗೊಂಡಂತೆ ಕಂಡ ಅವಳು ಓಹ್ ಎಂದು ಮತ್ತೆ ನಕ್ಕಳು. ಮತ್ತೆ ಕುಳಿಗಳು.

ನಕ್ಕು ಹಗುರಾದ ನಂತರದ ಮಾತು ಅಂತರಂಗದ ಅನಿಸಿಕೆಗಳಿಗೆ ದನಿಯಾಯ್ತು. ಹೀಗೇ ಮಾತಿನ ಮಧ್ಯ ಅವಳು ಥಟ್ಟನೆ ''ನಂಗಂತೂ ಬಹಳಷ್ಟು ಸಲ ನೀನಾ ಗುಪ್ತ ಅಥವಾ ಆ ಡ್ಯಾನ್ಸರ್ ಥರ ಇರಬೇಕಿತ್ತು ಅನಿಸುತ್ತೆ. ಯಾವ ಬಂಧನವೂ ಇಲ್ಲ. ನನ್ನದೇ ಮಗು ಪಡೆಯಲು ಯಾವುದೋ ಒಂದು ಸಾಧನ. ಸಂಸಾರದ ಯಾವ ತಲೆ ನೋವಿಲ್ಲದೆ ಮಗುವೊಂದಿಗೆ ಏನು ಮಜವಾಗಿ ಬದುಕಬಹುದು...'' ಎಂದಳು.

ನನಗೆ ಶಾಕ್ ಆಯ್ತು. ಅವಳ ಕಣ್ಣುಗಳನ್ನೇ ನೋಡಿದೆ. ಅದರಲ್ಲಿ ಎಂದಿನ ತುಂಟತನವಿರಲಿಲ್ಲ. ಕಣ್ಣ ಕೆಳಗೆ ಮೊದಲ ಬಾರಿಗೆ ಕಪ್ಪು ಗೆರೆಯೊಂದನ್ನು ಕಂಡಂತಾಯ್ತು. ಅವಳ ದನಿಯಂತೆಯೇ ಕಣ್ಣುಗಳಲ್ಲೂ ಗಾಂಭೀರ್ಯವಿತ್ತು. ಆ ಕ್ಷಣದಲ್ಲಿ ನಾನೂ ಅವಳಂತೆಯೇ ಏನೂ ಆಲೋಚಿಸದೆ ಅಕಸ್ಮಾತ್ತಾಗಿ ಎಂಬಂತೆ ಹೇಳಿದೆ: ''ಇಲ್ಲಮ್ಮ ವಿವಾಹವೇ ಹಾಗೆ... ಅಥವಾ ಎಲ್ಲ ಸಂಬಂಧಗಳೂ ಹಾಗೆ. ಇಲ್ಲಿರುವವರಿಗೆ ಹೊರಗೆ ಸುಖ ಅನ್ನಿಸುತ್ತೆ. ಹೊರಗಿರುವವರಿಗೆ ಇಲ್ಲಿ ಸುಖ ಅನ್ನಿಸುತ್ತೆ. ನಾವು ನಿಜಕ್ಕೂ ಸ್ವತಂತ್ರ ಪ್ರವೃತ್ತಿಯವರಾಗಿದ್ದರೆ We should not expect too much from marriage ಅದೂ ಕೂಡಾ ನೀನು ಆರಾಧಿಸುವ ಸಂಗೀತದಂತೆ, ನೃತ್ಯದಂತೆ, ನೀನು ಆಸೆಪಟ್ಟು ಆರಿಸಿಕೊಂಡ ಉದ್ಯೋಗದಂತೆ, ನಿನ್ನ ಬದುಕಿನ ಒಂದು ಭಾಗ ಅಂದುಕೋ. ಅದೇ ಸರ್ವಸ್ವ ಅಲ್ಲ. ನಮ್ಮ ಜೀವನವೆಲ್ಲ ಮದುವೆಯಲ್ಲೇ ಮುಳುಗಿದೆ ಎಂದು ಏಕೆ ಭ್ರಮಿಸಬೇಕು. ದಾಂಪತ್ಯ ಒಂದು ಉನ್ನತ ಸ್ನೇಹದ ಹಾಗೆ, ನಮ್ಮತನ ಉಳಿಸಿಕೊಂಡೇ ಒಂದಾಗಬೇಕು...''

''ನೀನು ಹೇಳ್ತಾ ಇರ್ತೀಯ ಗಂಡ ಹೆಂಡತಿ ಸ್ವತಂತ್ರವಾಗಿರಬೇಕು, ಸ್ನೇಹಿತರ ಥರ ಇರ್ಬೇಕು ಅಂತ. ಆದರೆ ಅದು ಸುಲಭ ಅಲ್ಲ. ಮದುವೆ ಅಂದ್ರೇನೆ ಹೊಂದಾಣಿಕೆ, ಜೀವನದ ವಿವಿಧ ಹಂತಗಳಲ್ಲಿ. It demands too much ಕೆಲವೊಮ್ಮೆ ನಿನ್ನ ಆತ್ಮಾಭಿಮಾನವನ್ನೇ ಕೊಡಬೇಕಾಗುತ್ತದೆ. ನನಗೆ ಇಂಗ್ಲಿಷ್‌ನ 'ಕಂಪ್ಯಾನಿಯನ್' ಅನ್ನೋ ಪದ ಮೊದಲಿಂದಲೂ ತುಂಬ ಇಷ್ಟ. ಕನ್ನಡದಲ್ಲಿ ಸಂಗಾತಿ, ಒಡನಾಡಿ ಅನ್ನಬಹುದಾ? ನನಗೆ ಅದನ್ನ ಗಂಡನಲ್ಲಿ ಕಂಡುಕೊಳ್ಳುವುದಕ್ಕಿಂತ ಮಗುವಿನಲ್ಲಿ ಕಂಡುಕೊಳ್ಳುವುದು ಸುಲಭ ಅನ್ನಿಸಿದೆ. ಮಗುವನ್ನು ಹೊರುವುದು ಹೆರುವುದು ಕಷ್ಟ ಅನ್ನಿಸಿದರೂ ಅದನ್ನು ಸಲಹುವುದು

ಖುಷಿ ಕೊಡುತ್ತೆ. ನಿನಗೆ ಗೊತ್ತಾ ನೀವು ಗಂಡಸರು ತಿಳಿದಿರುವಂತೆ ಮಗು ಹುಟ್ಟಿದ ತಕ್ಷಣ ಅಮ್ಮನಿಗೇನ
ಅಕ್ಕರೆ ಉಕ್ಕುವುದಿಲ್ಲ. ಪಕ್ಕದಲ್ಲಿ ಅದೇನೋ ಗೊಂಬೆ ಥರ ಬಿದ್ದಿದೆ ಅನಿಸುತ್ತದೆ. ಕ್ರಮೇಣ ಅದ
ಇಷ್ಟವಾಗುತ್ತೆ. ಮಗುವನ್ನು ಪ್ರೀತಿಸಲು, ಸಾಕಲು, ಬೆಳೆಸಲು ಹೆರಲೇಬೇಕೆಂದೇನಿಲ್ಲ. ದೇವಕ
ಯಶೋದೆ ನಡುವಣ ಅಂತರ ನಿನಗೂ ಗೊತ್ತು...''

ದೀರ್ಘ ಸ್ವಗತವೆಂಬಂತೆ ಹೇಳುತ್ತಲೇ ಹೋದಳು.

ಅವಳನ್ನು ರೇಗಿಸಬೇಕೆನ್ನಿಸಿತು, ಹೇಳಿದೆ: ''ಮಗು ನಿನಗೆ submissive ಆಗಿರೋದ್ರಿಂ
ಹಾಗನ್ನುತ್ತೆ. ಮಗುವಿನ ಮಮತೆ ನಿನಗೆ ಆಪ್ತವಾಗಿ ಕಾಣುತ್ತೆ, ಮಗು ನಿನ್ನ ಜತೆ ಎಲ್ಲೂ ಕಾಂಪಿಟ
ಮಾಡಲ್ಲ, ನಿನ್ನ 'ಅಹಂ'ನ ತಣಿಸುತ್ತೆ. ಅದರ ಅಸಹಾಯಕತೆ, ಬಳ್ಳಿಯಂತೆ ನಿನ್ನ ಕಾಲನ್ನು ತೊಡರುವ
ಅಪ್ಪಿಕೊಳ್ಳುವ ರೀತಿ ನಿನಗೆ ಆಪ್ತವಾಗುತ್ತದೆ. ಆದರೆ ಅದು ನಿನ್ನ ಅವಲಂಬಿಸುವುದು ಕಡಿಮೆಯಾದ
ನಿನಗೆ ಬೇಸರವಾಗುತ್ತದೆ. ಅದು ಯಾವಾಗಲೂ ನಿನ್ನ ಮೇಲೇ ಡಿಪೆಂಡ್ ಆಗಿರ್ಬೇಕು ಅಂತ ಇ
ಪಡ್ತೀಯ. ಆದರೆ ಮಗು ಎಷ್ಟು ದಿನ ಮಗುವಾಗಿಯೇ ಇರುತ್ತೆ?''

''ಹೇ, ಸ್ಟಾಪ್. ನಿಲ್ಲಪ್ಪಾ. ಸರಳವಾದ ಪ್ರೀತೀನ ಕಾಂಪ್ಲಿಕೇಟ್ ಮಾಡ್ಬೇಡ. ತಾಯಿಗೆ ಮಗು ಸ
ಮಗುವೇ. ಹೋಗಲಿ ಬಿಡು. ಅಪರೂಪಕ್ಕೆ ಸಿಕ್ಕಿದೀವಿ. ಮತ್ತೆ ಅದೇ ಕ್ಯಾಂಪಸ್‌ನ ವಾದವಿವಾದ ಏಕೆ
ಆದರೂ ನಿನ್ನನ್ನು ಒಂದು ಮಾತು ಕೇಳಬೇಕು ಅನ್ನಿಸ್ತಿದೆ. ನೀನು ನಿಜ ಹೇಳಬೇಕು. ನಂಗೊತ್ತು ನೀ
ಸುಳ್ಳು ಹೇಳಲ್ಲ. Are you happy with your married life?... Hundred percent?
ನೋಡು, ಟೇಬಲ್ ಅಥವಾ ಕಾಫಿಕಡೆ ನೋಡುತ್ತಾ ಹೇಳಬೇಡ, ನನ್ನ ಮುಖ ನೋಡುತ್ತಾ ಹೇಳು
ಎಂದಳು.

ನಾನು ನಿಜಕ್ಕೂ ಒಂದು ಕ್ಷಣ ಅಪ್ರತಿಭನಾದೆ. ನಂತರ ಸಾವರಿಸಿಕೊಂಡು ಅವಳ ಮು
ನೋಡುತ್ತಾ 'ಓಕೆ!' ಎಂದೆ.

ಅವಳು ಯುದ್ಧ ಗೆದ್ದವಳಂತೆ ಸಂಭ್ರಮದ ನಗೆ ನಗುತ್ತಾ, ''ನೋಡಿದೆಯಾ ನೀನು 'ಹುಂ' ಅಥ
'ಎಸ್' ಅನ್ನಲಿಲ್ಲ. ಮಾತಿನ ಬಳಕೆಯಲ್ಲಿ 'ಓಕೆ'ಗೂ 'ಎಸ್'ಗೂ ಇರುವ ಅಂತರ ನಿನಗೂ ಗೊತ್ತು
ಎಂದಳು. ಅವಳ ಕೆನ್ನೆಯಲ್ಲಿ ಬಿದ್ದ ಕುಳಿಗಳನ್ನೇ ದಿಟ್ಟಿಸುವಾಗ ಈಗಲೂ ವಾದ ಗೆಲ್ಲಬೇಕೆಂಬ ಮಗು
ಹಟ ಇವಳಲ್ಲಿ ಇನ್ನೂ ಇದೆಯಲ್ಲ ಎಂದು ಖುಷಿಯಾಯ್ತು. ನನಗೆ ಪ್ರತಿವಾದಕ್ಕೆ ಇಳಿಯ
ಮನಸ್ಸಾಗಲಿಲ್ಲ. ನಗುವಿನ ನಂತರದ ಅವಳ ಚಂದದ ವಿಷಾದಭರಿತ ಮುಖ ನೋಡುತ್ತಾ, ನೋಡು
ನೆನಪಿಗೆ ಬಂದದ್ದು ಎಂದೋ ಓದಿದ, ಆಗಾಗ್ಗೆ ಕೇಳುವ 'ಆಲ್‌ಸೊ ರ್‍ಯಾನ್.'



ಜೀಪ್‌ನಲ್ಲಿ ಚರ್ಚೆ ನಡೆದೇ ಇತ್ತು. ಏನೋ ನೀನು ಈ ಜೀಪ್‌ನಲ್ಲೇ ಇಲ್ಲ. ಬೇರಾವುದೋ ಕ
ಲೋಕಕ್ಕೆ ಹೋಗಿದ್ದೆಯಾ. ಎಂಥ ಇಂಟರೆಸ್ಟಿಂಗ್ ಚರ್ಚೆ ನಡೆಯುತ್ತಿದೆ. ನಿನ್ನ ಅಮೂಲ್ಯವ
ನುಡಿಮುತ್ತುಗಳು ಉದುರಲೇ ಇಲ್ಲವಲ್ಲ'' ಎಂದು ಗೆಳೆಯನೊಬ್ಬ ರೇಗಿಸಿದ. ಹೌದು ನಾನು ಏ
ಮಾತಾಡಲೇ ಇಲ್ಲವಲ್ಲ ಅನ್ನಿಸಿದಾಗ ನೆನಪಿಗೆ ಬಂದದ್ದು 'ಆಲ್‌ಸೊ ರ್‍ಯಾನ್.'

ವಿ.ಸ. ಖಾಂಡೇಕರರು ಯಯಾತಿಗೆ ಬರೆದ ಪಾರ್ಶ್ವಭೂಮಿಯಲ್ಲಿ ಈ ಮಾತು ಹೇಳುತ್ತಾರೆ.
ಶಕುಂತಲೆಯನ್ನು ಹರಸುವಾಗ 'ಯಯಾತಿಗೆ ಶರ್ಮಿಷ್ಠೆ ಅಕ್ಕರೆಯವಳಾಗಿದ್ದ ಹಾಗೆ ನೀನಾದರೂ

ಪತಿಗೆ ಅಕ್ಕರೆಯವಳಾಗು' ಎಂಬ ಮಾತು ಖಾಂಡೇಕರರನ್ನು ತುಂಬಾ ಕಾಡುತ್ತದೆ. ಪುರಾಣದ ಯಯಾತಿ ವಾರ್ಧಕ್ಯದ ಶಾಪ ಪಡೆದಾಗ, ತನ್ನ ತಾರುಣ್ಯವನ್ನು ಹಿಂದಿರುಗಿಸಬೇಕೆಂದು ಬೇಡುವಾಗ 'ದೇವಯಾನಿಯೊಡನೆ ಸುಖೋಪಭೋಗವನ್ನ ಪಡೆಯುವುದರಲ್ಲಿ ನನಗಿನ್ನೂ ಸಮಾಧಾನವಾಗಿಲ್ಲ, ಆ ವಿಷಯದಲ್ಲಿ ನಾನಿನ್ನೂ ಅತೃಪ್ತ. ಆದ್ದರಿಂದ ಕೃಪೆ ತೋರಿ ನನ್ನ ತಾರುಣ್ಯ ಹಿಂದಿರುಗಿಸಬೇಕು' ಎನ್ನುತ್ತಾನೆ. ಹೀಗಿರುವಾಗ ಕಣ್ವರು ಯಾಕೆ ''ಯಯಾತಿಗೆ ಶರ್ಮಿಷ್ಠೆ ಪ್ರಿಯವಾಗಿದ್ದಂತೆ...'' ಎಂದು ಹರಸಿದರು ಎಂಬ ಜಿಜ್ಞಾಸೆಯಲ್ಲಿ ಮುಳುಗಿ ಹೇಳುತ್ತಾರೆ: ಮದುವೆಯೇನೋ ಎಲ್ಲರಿಗೂ ಆಗುತ್ತದೆ- ಬೆರಳೆಣಿಕೆಯ ಬ್ರಹ್ಮಚಾರಿಗಳನ್ನು ಹಾಗೂ ಅಷ್ಟೇ ಬ್ರಹ್ಮವಾದಿನಿಗಳನ್ನು ಹೊರತುಪಡಿಸಿ! ಆದರೆ ಎಲ್ಲ ಪತಿ ಪತ್ನಿಯರೂ ಒಬ್ಬರೊಬ್ಬರನ್ನು ಉತ್ಕಟವಾಗಿ ಪ್ರೀತಿಸುತ್ತಿರುತ್ತಾರೆ ಎಂದು ಸುತರಾಂ ಹೇಳಲಾಗುವುದಿಲ್ಲ. ಕ್ರೀಡಾ ಸ್ಪರ್ಧೆಗಳ ಬಯಲಿನಲ್ಲಿ 'ಆಲ್‌ಸೊ ರ‍್ಯಾನ್'- ಅವರೂ ಓಡಿದರು ಎನ್ನಿಸಿಕೊಳ್ಳಬೇಕಾದ ಸ್ಪರ್ಧಿಗಳು, ಕುದುರೆಗಳು ಇರುತ್ತವಲ್ಲವೆ? ನೂರರಲ್ಲಿ ಅರವತ್ತು ಎಪ್ಪತ್ತರಷ್ಟು ದಾಂಪತ್ಯಗಳು ಅದೇ ಜಾತಿಗೆ ಸೇರಿರುತ್ತವೆ. ಅಂಥ ಸಂಸಾರಗಳು ಸುಖವಾಗಿದ್ದ ಹಾಗೆ ಕಾಣುತ್ತವೆ; ಆದರೆ ಅಲ್ಲಿ ಪ್ರೀತಿಯ ಉತ್ಕಟತೆ ಇರುವುದಿಲ್ಲ. ಇದು ಆಲ್‌ಸೊ ರ‍್ಯಾನ್ ಎಂಬಂತ ದಾಂಪತ್ಯ.

ನಮ್ಮೆಲ್ಲರ ದಾಂಪತ್ಯ ಹೀಗಾಗುವುದು ಬೇಡ ಅಲ್ಲವೆ!





ಹೊರಗೆ ನೋಡಿದೆ. ಮಳೆ ನಿಂತಿತ್ತು. ಆದರೆ ಮಧುರ ದಾಂಪತ್ಯದಲ್ಲಿರುವಂತೆ ಗಾಳಿ, ಮಿಂಚ
ಆರ್ಭಟ ಸಾಗಿತ್ತು. ನಮ್ಮ ಚರ್ಚೆಗೆ ಈಗ 'ಆಲ್‌ಸೊ ರ್‍ಯಾನ್' ಆಹಾರ ಒದಗಿಸಿತ್ತು. ನಾನು ಜೀಪಿಳಿ
ಬಂದೆ. ಇಳಿದ ತಕ್ಷಣ ಏನೂ ಕಾಣಲಿಲ್ಲ. ನಂತರ ನಿಧಾನವಾಗಿ ನೋಡಿದರೆ ಗರೆ ಕೊರೆದಂತೆ ಕಾಣು
ಪರ್ವತಗಳು. ಸುತ್ತಲೂ ಕಣಿವೆ. ಕೆಳಗೆ ಆಳವಾದ ಪ್ರಪಾತ. ಎಲ್ಲವೂ ಗೆರೆಕೊರೆದು ಇಟ್ಟ
ನಿಖರವಾಗಿ, ಪ್ರತ್ಯೇಕವಾಗಿ ಕಾಣುತ್ತಿದ್ದವು, ಕತ್ತಲ ಬೆಳಕಿನಲ್ಲಿ. ನಿಶೆಯಲ್ಲಿ ಕರಗಿದ ಸಹ್ಯಾದ್ರಿ ಪರ್ವ
ಶ್ರೇಣಿ ಕಂಡು ನಾನು ಮೂಕನಾದೆ. ಹಾಗೇ ದೃಷ್ಟಿ ಹೊರಳಿಸಿದರೆ ಬಹುದೂರದಲ್ಲಿ ಒಂದು ಇಡೀ ಮ
ಬೆಳಕಿನಿಂದ ಬೆಳಗುತ್ತಿತ್ತು. ರೆಂಬೆಕೊಂಬೆ, ಎಲೆಎಲೆಗಳ ಮೇಲೂ ಕಿರುಹಣತೆ ಹೊತ್ತಿಸಿ ಇಟ್ಟ
ಕಾಣುತ್ತಿತ್ತು. ಗಗನದಲ್ಲಿದ್ದ ನಕ್ಷತ್ರಗಳೆಲ್ಲ ಯಾವುದೋ ಅಯಸ್ಕಾಂತದ ಸೆಳೆತಕ್ಕೆ ಸಿಕ್ಕು ಆ ಮರ
ಆಶ್ರಯಿಸಿ ಅಲಂಕರಿಸಿದಂತಿತ್ತು. ಮಿಂಚು ಹುಳುಗಳು ಇಡೀ ಮರವನ್ನು ಅಷ್ಟೇ ದಟ್ಟವ
ಆವರಿಸಿದ್ದವು.

ಎಂಥ ದೃಶ್ಯ, ಬಣ್ಣನೆಗೆ ನಿಲುಕದ್ದು!

ಈ ಗಂಧರ್ವ ಲೋಕವನ್ನ, ಪ್ರಕೃತಿಯ ಬೆಡಗನ್ನ, ಭೂದೇವಿಯ ಲಾಸ್ಯವನ್ನ ನೋಡುವಾಗ: ಈ
ಈ ಕ್ಷಣ, ಅವಳೂ ನನ್ನೊಂದಿಗಿದ್ದಿದ್ದರೆ ಎಷ್ಟು ಚೆನ್ನಿತ್ತು ಅನಿಸಿತು.

ನಮ್ಮೆಲ್ಲರ ದಾಂಪತ್ಯ ದೀಪಾವಳಿಯ ಬೆಳಕಾಗಲಿ!

ಚಂದ್ರಶೇಖರ [illegible]



ವಿಶ್ವ ಭಾರತಿ - 6



## ಅರ್ನೆಸ್ಟ್ ಹೆಮಿಂಗ್ವೇ

# ಬೇಟೆಯ ನಂತರ

ಜಿಮ್ ಗಿಲ್‌ಮೋರ್, ಕೆನಡಾದಿಂದ ಹಾರ್ಟನ್ಸ್ ಕೊಲ್ಲಿಗೆ ಬಂದವನು ಅಲ್ಲಿ ಮುದುಕ ಕಮ್ಮಾರನೊಬ್ಬನ ಅಂಗಡಿ ಕೊಂಡುಕೊಂಡ. ಕುಳ್ಳಗೆ, ಕಪ್ಪಗೆ, ದೊಡ್ಡ ಮೀಸೆ ಹೊಂದಿದ್ದು, ದೊಡ್ಡ ಕೈಗಳಿದ್ದ ಜಿಮ್ ಕುದುರೆ ಲಾಳ ಕಟ್ಟುವುದರಲ್ಲಿ ನಿಸ್ಸೀಮ. ಕಮ್ಮಾರರ ಮೇಲಂಗಿಯನ್ನು ಧರಿಸಿರುವಾಗಲೂ ಆತ ಅಷ್ಟೇನು 'ಕಮ್ಮಾರ'ನಾಗಿ ತೋರುತ್ತಿರಲಿಲ್ಲ. ಜಿಮ್ ಅಂಗಡಿ ಮಾಳಿಗೆಯ ಮೇಲೇ ಉಳಕೊಂಡು ಡಿ.ಜೆ. ಸ್ಮಿತ್ ಎಂಬುವವರ ಮನೆಯಲ್ಲಿ ಊಟ ಮಾಡಿಕೊಂಡಿದ್ದ.

ಸ್ಮಿತ್ ಮನೆಯಲ್ಲಿ ಕೆಲಸಕ್ಕಿದ್ದ ಹುಡುಗಿ ಲಿಜ್‌ಕೋಟ್ಸ್. ದೊಡ್ಡ ದೇಹದ, ಶುಭ್ರ ಹೆಂಗಸು ಶ್ರೀಮತಿ ಸ್ಮಿತ್‌ಗೆ ಲಿಜ್ ಅಚ್ಚುಮೆಚ್ಚು. ಲಿಜ್‌ನಷ್ಟು ಚೊಕ್ಕಟ ಹುಡುಗಿಯನ್ನು ನಾನು

## ಅರ್ನೆಸ್ಟ್ ಹೆಮಿಂಗ್ವೇ (1899-1961)



ಸಾಹಿತ್ಯ ಜಗತ್ತಿಗೊಬ್ಬನೇ ಹೆಮಿಂಗ್ವೇ ಎನ್ನುವಷ್ಟರ ಮಟ್ಟಿಗೆ ಕೊಂಡಾಡಲ್ಪಡುವ ಅರ್ನೆಸ್ಟ್ ಹೆಮಿಂಗ್ವೇ ಅಮೆರಿಕದ ಮುಖ್ಯ ಲೇಖಕ. ಕತೆ-ಕಾದಂಬರಿಗಳನ್ನು ಸಂಗ್ರಹವಾಗಿ, ಎಷ್ಟು ಬೇಕೋ ಅಷ್ಟು ಅಲಂಕಾರದೊಂದಿಗೆ, ತಪಶ್ಚರ್ಯೆಯ ನೇಮವೆನಿಸುವಷ್ಟರ ಮಟ್ಟಿಗೆ ನಿಖರವಾಗಿ, ಸರಳವಾಗಿ ಬರೆದ ಈ ಕಾದಂಬರಿಕಾರನ ಕೃತಿಗಳು ಯಾವತ್ತಿಗೂ ತಾಜಾ. ಐವತ್ತೈದು ಕತೆ, ಒಂದು ನೀಳ್ಗತೆ, ಆರು ಕಾದಂಬರಿ ಮತ್ತು ಎರಡು ಕತೆಯೇತರ ಬರಹಗಳನ್ನು ಬರೆದ ಹೆಮಿಂಗ್ವೇ, ಸಾಹಿತ್ಯ ಪ್ರಕಾರದಂತೆ ಸ್ವಂತ ಬದುಕಿನಲ್ಲೂ ಅನೇಕ ಪ್ರಯೋಗಗಳನ್ನು ಮಾಡಿ ದಣಿದವ. ಆತನ 'ದಿ ಓಲ್ಡ್ ಮ್ಯಾನ್ ಅಂಡ್ ದಿ ಸೀ (1952)' ಸದಾ ಚರ್ಚೆಯಲ್ಲಿರುವ ಕೃತಿ. ವ್ಯಕ್ತಿತ್ವ, ಕಥನಗಾರಿಕೆ, ತಾತ್ವಿಕತೆ ಎಂದೆಲ್ಲ ಬೇರ್ಪಡಿಸಿ ಬೆಲೆಕಟ್ಟಲಾಗದಂತಿದ್ದ ಹೆಮಿಂಗ್ವೇ 1954ರಲ್ಲಿ ನೊಬೆಲ್ ಪ್ರಶಸ್ತಿ ಪಡೆದ. 1961ರಲ್ಲಿ ಆತ್ಮಹತ್ಯೆ ಮಾಡಿಕೊಂಡ. ಹೆಮಿಂಗ್ವೇಯ ಸರಳ-ನೇರ-ಸಂಕ್ಷಿಪ್ತ-ಯಾರನ್ನೂ ಒಲ್ಲೈಸದ ಗಂಭೀರ ಶೈಲಿಯ ಸಣ್ಣಕತೆಯೊಂದನ್ನು ಕೊಡುತ್ತಿದ್ದೇವೆ.

ನೋಡೇ ಇಲ್ಲ ಎಂದು ಯಾವಾಗಲೂ ಶ್ರೀಮತಿ ಸ್ಮಿತ್ ಹೇಳುತ್ತಿದ್ದಳು. ಗರಿಗರಿಯಾದ ಹತ್ತಿಬಟ್ಟೆಯ ಬಣ್ಣದ ಏಪ್ರನ್ ಧರಿಸಿ, ಯಾವಾಗಲೂ ಶಿಸ್ತಾಗಿ ತೋರುತ್ತಿದ್ದ ಲಿಜ್‌ಗೆ ಚಂದದ ಕಾಲುಗಳಿದ್ದವು. ಆಕೆ ಯಾವಾಗಲೂ ನೀಟಾಗಿ ಹಿಂದೆ ಬಾಚಿ ಕೂದಲನ್ನು ಮುಡಿ ಕಟ್ಟಿರುವುದನ್ನು ಜಿಮ್ ಗಮನಿಸಿದ್ದ. ಅವಳ ಮುಖ ಗೆಲುವಾಗಿ ಚೆನ್ನಾಗಿದೆ ಎಂದಾತ ಇಷ್ಟಪಡುತ್ತಿದ್ದ. ಆದರೆ ಅವಳ ಬಗ್ಗೆ ಅಷ್ಟೇನೂ ಯೋಚಿಸುತ್ತಿರಲಿಲ್ಲ. ಲಿಜ್‌ಗೆ ಕೂಡ ಜಿಮ್‌ನನ್ನು ಕಂಡರೆ ತುಂಬಾ ಇಷ್ಟ. ಅವನು ಅಂಗಡಿಯಿಂದ ರಸ್ತೆಗಿಳಿಯುವುದನ್ನು ನೋಡಲು ಅವಳು ಸಮಯ ಸಿಕ್ಕಾಗೆಲ್ಲ ಅಡಿಗೆ ಮನೆಯ ಕಿಟಕಿಗೆ ಧಾವಿಸುತ್ತಿದ್ದಳು. ಅವನ ಮೀಸೆ, ನಕ್ಕಾಗ ಹೊಳೆಯುತ್ತಿದ್ದ ಬಿಳೀಹಲ್ಲು, ಇವೆಲ್ಲ ಅವಳಿಗೆ ಬಹಳ ಸೇರುತ್ತಿದ್ದವು. ಸ್ಮಿತ್ ದಂಪತಿಗಳಿಗೆ ಅವನು ಹಿಡಿಸುತ್ತಿದ್ದ ಮತ್ತು ಅವನನ್ನು ಕಮ್ಮಾರ ಎಂದು ಹೇಳಲು ಬರುವಂತೆಯೇ ಇಲ್ಲ ಎನ್ನುವುದನ್ನು ಸಹ ಗಮನಿಸಿ ಲಿಜ್‌ಗೆ ಖುಷಿಯಾಗುತ್ತಿತ್ತು. ಒಂದಿನ ಅವನು ವಾಷ್ ಬೇಸಿನ್‌ನಲ್ಲಿ ಅಂಗಿ ತೋಳು ಮಡಚಿ ಕೈತೊಳೆಯುವಾಗ ಅವನ ತೋಳುಗಳ ಮೇಲಿದ್ದ ಕಪ್ಪುಕೂದಲು ನೋಡಿದ ಅವಳಿಗೆ, ಅದೂ ಸಹ ಎಷ್ಟು ಚೆನ್ನಾಗಿದೆ ಅನ್ನಿಸಿತು. ಬಿಸಿಲು ಕಾಣದ ತೋಳಿನ ಭಾಗ ಬೆಳ್ಳಗೆ ಹೊಳೆಯುತ್ತಿದ್ದುದನ್ನೂ ಅವಳು ಒಂಥರಾ ಮಜಾ ತೆಗೆದುಕೊಂಡು ಮೆಚ್ಚಿಕೊಂಡಳು.

ಅದು ಐದು ಮನೆಗಳಿದ್ದ ಊರು. ಊರಿನಲ್ಲೊಂದು ದಿನಸಿ ಅಂಗಡಿ, ಅಂಚೆ ಕಛೇರಿ, ಸ್ಮಿತ್‌ರನ್ನೊಳಗೊಂಡು ಐದಾರು ನಾಗರಿಕರ ಮನೆ. ಆಗಾಗ ಜನರಲ್ ಸ್ಟೋರ್ ಮುಂದೆಯೋ, ಪೋಸ್ಟ್ ಆಫೀಸ್ ಮುಂದೆಯೋ ನಿಲ್ಲಿಸಿದ ಒಂದೆರಡು ಗಾಡಿಗಳು ಕಂಡುಬರುತ್ತಿದ್ದವು. ಮನೆಗಳೆಲ್ಲಾ ಎಲ್ಮ್ ಮರಗಳ ತೋಪಿನಲ್ಲಿದ್ದುವು. ಕಾಲ್ದಾರಿಯಲ್ಲಿ ಮರಳ ರಾಶಿ. ಮುಖ್ಯರಸ್ತೆ ದಾಟದರೆ ಎರಡೂ ಪಕ್ಕ ಸಾಗುವಳಿಯ ಹೊಲ,

ಮತ್ತು ಮರಮುಟ್ಟುಗಳನ್ನು ಶೇಖರಿಸಿದ್ದ ಸಾ
ಡಿಪೋ ಇದ್ದುವು. ಇನ್ನು ಸ್ವಲ್ಪ ಮೇಲೆ ಹೋದ
ಮೆಥಾಡಿಸ್ಟ್ ಚರ್ಚ್‌ವೊಂದಿತ್ತು. ಅದಕ್ಕೆ ಎದು
ದಿಕ್ಕಿನಲ್ಲಿ ರಸ್ತೆಯ ಕೆಳಭಾಗದಲ್ಲಿ ಇದ್ದಿದ್ದು ಒಂ
ಶಾಲೆ. ಕೆಂಪು ಬಣ್ಣ ಬಳಿದುಕೊಂಡಿದ್ದ ಕಮ್ಮಾರ
ಅಂಗಡಿ ಶಾಲೆಯ ಎದುರು ಇತ್ತು.

ಬೆಟ್ಟದಿಂದ ಊರಿಗಿಳಿಯುವ ದಾರಿ
ದಾಗಿತ್ತು. ಮರಳಿನಿಂದ ಮುಚ್ಚಿಹೋಗಿತ್ತು.

ಸ್ಮಿತ್ ಮನೆಯ ಹಿತ್ತಲ ಬಾಗಿಲಲ್ಲಿ ನಿಂ
ಕಾಡು ಉದ್ದಕ್ಕೂ ಹರಿದದ್ದು ಕಾಣಸುತ್ತಿ
ಅಲ್ಲೊಂದು ಸರೋವರದ ತನಕ ಬೆಳೆದ ಕಾ
ಅಲ್ಲಿಂದ ಕೊಲ್ಲಿಯನ್ನು ಸುತ್ತುವರೆದು ಮುಂ
ವರಿದಿತ್ತು. ಬೇಸಗೆಯಲ್ಲಿ ಆ ಕಡೆ
ಹಾಯಿಸಿದರೆ ಕಣ್ಣಿಗೆ ಹಬ್ಬ! ಉಜ್ವಲ ನೀಲಿಬಣ್ಣ
ಕೊಲ್ಲಿ, ಸುತ್ತುವರೆದ ಬಿಳೀ (ಹಿಮದ) ಹೊ
ಕೆಗಳು, ಮೇಲ್ಗಡೆಯಿದ್ದ ಶರ್ಲ್‌ವಾಯ್ ಪ
ಮತ್ತು ಮಿಚಿಗನ್ ಸರೋವರದಿಂದ ಬೀಸಿಬ
ತ್ತಿದ್ದ ತಂಗಾಳಿ... ಹಿತ್ತಲ ಬಾಗಿಲಲ್ಲಿ ನಿಂತು ಲಿ
ಸರೋವರದಲ್ಲಿ ಅಲುಗದೆ ಸಾಗುತ್ತಿದ್ದ ಲೊ
ದದಿರು ಸಾಗಿಸುವ ಸರಕು ದೋಣಿಗಳನ್ನು ನೋ
ವಳು. ಅವು ಕದಲುತ್ತಲೇ ಇಲ್ಲ ಎಂದು ಒಮ್ಮೆ
ಅನ್ನಿಸಿದರೆ ಅವಳು ಒಳಹೊಕ್ಕು ಮತ್ತಷ್ಟು ಪ
ಗಳನ್ನು ಒಣಗಿಸಿ ಮತ್ತೆ ಬಾಗಿಲಿಗೆ ಧಾವಿಸುತ್ತಿದ್ದ
ಆಗವು ದೂರದಲ್ಲಿ ಚಿಕ್ಕಯಾಗಿರುತ್ತಿದ್ದವು.

ಈ ನಡುವೆ ಲಿಜ್‌ಗೆ ಜಿಮ್‌ದೇ ಧ
ಆದರೆ ಅವನೇನೂ ಅವಳನ್ನು ಅಷ್ಟೊಂದು ಗ
ನಿಸಿದಂತೆ ತೋರುತ್ತಿರಲಿಲ್ಲ. ಅಂಗಡಿ
ರಿಪಬ್ಲಿಕನ್ ಪಕ್ಷ ಮತ್ತದರ ನಾಯಕನ ಕು
ಅವನು ಡಿ.ಜೆ.ಸ್ಮಿತ್ ಜತೆ ಸ್ವಲ್ಪ ಹರಟುತ್ತ
ಸಂಜೆಗಳಲ್ಲಾದರೆ ಮುಂದುಗಡೆಯ ಕೋಣೆಯ
ದೀಪದ ಪಕ್ಕ ಕುಳಿತು ಪೇಪರೋದು
ಇಲ್ಲವೇ ಕೊಲ್ಲಿಯಲ್ಲಿ ಗಾಳ ಹಾಕಿ ಮಿ
ಹಿಡಿಯಲು ಸ್ಮಿತ್ ಅನ್ನೂ ಕರೆದುಕೊಂಡು ಒ
ಲಾಟೀನಿನ ಸಮೇತ ಹೊರಡುತ್ತಿದ್ದ.

ಚಳಿಗಾಲದ ಒಂದು ದಿನ ಅವನು, ಸ್ಮಿತ್ ಮತ್ತು ಚಾರ್ಲಿವೈಮನ್ ಕೂಡಿ ಜಿಂಕೆ ಶಿಕಾರಿಗೆಂದು ಹೊರಟರು. ಗಾಡಿ, ಗುಡಾರ, ಗುದ್ದಲಿ, ಪಿಕಾಸಿ, ಬಂದೂಕುಗಳು ಮತ್ತು ಎರಡು ನಾಯಿಗಳ ಜತೆ ಸಜ್ಜಾಗಿ ಹೊರಟ ಅವರಿಗೆ ಬುತ್ತಿ ಕಟ್ಟಿಕೊಡಲು ಶ್ರೀಮತಿ ಸ್ಮಿತ್ ಮತ್ತು ಲಿಜ್ ಒಂದೇ ಸಮನೆ ನಾಲ್ಕು ದಿನ ತಿಂಡಿ, ಅಡುಗೆ ಮಾಡುತ್ತಿರಬೇಕಾಯಿತು. ಆಗಲೂ ಜಿಮ್‌ಗೆ ಅಂತ ವಿಶೇಷವಾಗಿ ಏನಾದರೂ ತಯಾರಿಸಿ ಕೊಡೋಣ ಅನ್ನುವ ತವಕ, ಲಿಜ್‌ಗೆ. ಆದರೆ ಶ್ರೀಮತಿ ಸ್ಮಿತ್ ಗಮನಕ್ಕೆ ಬಂದರೆ? 'ಬೇಡಪ್ಪಾ' ಅಂತ ಸುಮ್ಮನಾಗಿಬಿಟ್ಟಳು. ಒಂದಷ್ಟು ಗೋಧಿ ಹಿಟ್ಟು ಮತ್ತು ಮೊಟ್ಟೆಗಾಗಿ ಶ್ರೀಮತಿ ಸ್ಮಿತ್ ಅನ್ನು ಕೇಳಿದ್ದರೆ, ಅಥವಾ ಅವಳೇ ಕೊಂಡು ತಂದಿದ್ದರೂ ಅವರೇನೂ ಹೇಳುತ್ತಿರಲಿಲ್ಲ; ಆದರೂ ಲಿಜ್ ಸಂಕೋಚಪಟ್ಟುಕೊಂಡಳು.

ಜಿಮ್ ಜಿಂಕೆ ಶಿಕಾರಿಗೆ ಹೋದ ದಿನಗಳಲ್ಲಂತೂ ಲಿಜ್ ಸದಾಕಾಲ ಅವನ ಬಗ್ಗೆಯೇ ಯೋಚಿಸುತ್ತಿದ್ದಳು. ಅವನಿಲ್ಲದೆ ದಿನಕಳೆಯುವುದು 'ಅಬ್ಬಬ್ಬಾ' ಅನಿಸುವಷ್ಟು ದುಸ್ಸಾಧ್ಯವಾಗಿತ್ತು. ಅವನ ಕುರಿತು ಯೋಚಿಸುತ್ತಾ ಅವಳು ಸರಿಯಾಗಿ ನಿದ್ದೆಯೇ ಮಾಡಲಾರದಾಗಿದ್ದಳು. ಆದರೂ ಅದರಲ್ಲೇನೋ ಖುಷಿಯಿದೆ ಅಂತ ಅವಳಿಗನ್ನಿಸುತ್ತಿತ್ತು. ಬೇಟೆಗೆ ಹೋದವರು ವಾಪಸ್ಸಾಗುವ ಹಿಂದಿನ ರಾತ್ರಿಯಂತೂ ಅವಳು ಕಣ್ಣೇ ಮುಚ್ಚಲಿಲ್ಲ. ರೆಪ್ಪೆಗೆ ರೆಪ್ಪೆ ಹಾಕಿದ ಗಳಿಗೆಯಲ್ಲೂ ನಿದ್ದೆ ಬರದೇ ಒದ್ದಾಡುತ್ತಿರುವ ಸ್ವಪ್ನ ಬಿದ್ದು, ನಿಜವಾಗಿ ನಿದ್ದೆಗೆಟ್ಟದ್ದು ಮತ್ತು ಕನಸಿನಲ್ಲಿ ನಿದ್ರಾಹೀನತೆ ಅನುಭವಿಸಿದ್ದು ಎಲ್ಲ ಒಂದರೊಳಗೊಂದು ಬೆರೆತುಹೋಗಿತ್ತು. ರಸ್ತೆಯಲ್ಲಿ ಗಾಡಿ ಕಾಣಿಸಿದ್ದೇ ಅವಳಿಗೆ ಶಕ್ತಿಯೆಲ್ಲಾ ಸೋರಿಹೋದಂತೆನಿಸಿ ಹೊಟ್ಟೆಯಲ್ಲಿ ವಿಚಿತ್ರ ಕಲಮಲವಾಯಿತು. ಜಿಮ್ ಗಾಡಿಯಿಂದಿಳಿಯುವತನಕ ಕಾಯುವ ತಾಳ್ಮೆಯಿಲ್ಲದಂತೆ ಚಡಪಡಿಸತೊಡಗಿದವಳಿಗೆ ಅವನು ಬಂದದ್ದೇ ಎಲ್ಲ ಸರಿಹೋಗಿಬಿಡುತ್ತದೆನ್ನುವ ಹರ್ಷಾತಿರೇಕ ಉಂಟಾಯಿತು.



ಗಾಡಿ, ಮನೆಮುಂದಿದ್ದ ದೊಡ್ಡ ಎಲ್ಮ್ ಮರದ ಕೆಳಗೆ ನಿಂತಕೂಡಲೇ ಶ್ರೀಮತಿ ಸ್ಮಿತ್ ಮತ್ತು ಲಿಜ್ ಹೊರಹೋಗಿ ಬಂದವರನ್ನು ಎದುರುಗೊಂಡರು. ಮೂವರು ಗಂಡಸರ ಮುಖದ ಮೇಲೂ ಹುಲುಸಾದ ಕಪ್ಪು ಬೆಳೆ. ಗಾಡಿಯ ಹಿಂಭಾಗದಲ್ಲಿ ಕಡ್ಡಿಕಾಲುಗಳನ್ನು ಚಾಚಿಕೊಂಡು ಬಿದ್ದಿದ್ದ ಮೂರು ಜಿಂಕೆಗಳಿದ್ದವು. ಶ್ರೀಮತಿ ಸ್ಮಿತ್ ಮುಂದೆ ಸಾಗಿ ಗಂಡನಿಗೆ ಮುತ್ತಿಟ್ಟಳು. ಆತ ಅವಳನ್ನು ತಬ್ಬಿಕೊಂಡ. ಜಿಮ್ ಹಲ್ಲುಬಿಟ್ಟು 'ಹಲೋ ಲಿಜ್' ಅಂದ. ಜಿಮ್ ಮರಳುತ್ತಿದ್ದಂತೆಯೇ 'ಏನೋ ಆಗಿಬಿಡುತ್ತದೆ' ಎಂದು ಬಲವಾಗಿ ನಂಬಿಕೊಂಡು ವಿಚಿತ್ರ ಉದ್ವೇಗ ಅನುಭವಿಸುತ್ತಿದ್ದಳು, ಲಿಜ್. ಆದರೆ ಏನಾಗಿರಲಿಲ್ಲ, ಇಲ್ಲಿಯವರೆಗೆ. ಶಿಕಾರಿಗೆ ಹೋಗಿದ್ದ ಗಂಡಸರು ವಾಪಾಸು ಬಂದಿದ್ದರಷ್ಟೆ. ಸತ್ತ ಜಿಂಕೆಗಳಿಗೆ ಹೊದಿಸಿದ್ದ ಚೀಲಗಳನ್ನು ಜಿಮ್ ಎಳೆದು ತೆಗೆದ. ಹಾಗೆ ತೆಗೆಯುತ್ತಿರುವಾಗ ಲಿಜ್



ಪೌಲ್ ಗಾಗಿನ್ (1848-1903) ತೈಲವರ್ಣ ಚಿತ್ರ

ಅವುಗಳನ್ನು ನೋಡಿದಳು. ಒಂದು, ಬಲವಾದ ಮಿಕ. ಒಣಗಿ ಕಟ್ಟಿಗೆಯಾಗಿಬಿಟ್ಟಿದ್ದ ಅದನ್ನು ಗಾಡಿಯಿಂದ ಹೊರತೆಗೆಯುವುದು ಪ್ರಯಾಸವಾಗಿತ್ತು. ಹೇಗೋ ಆ ದೊಡ್ಡ ಜಿಂಕೆಯನ್ನು ಚೀಲದಿಂದ ಹೊರಗೆಳೆದು, ಬೆನ್ನಿಗೇರಿಸುತ್ತಿದ್ದವನನ್ನು 'ಇದನ್ನು ನೀನು ಹೊಡೆದೆಯಾ ಜಿಮ್?' ಅಂತ ಕೇಳಿದಳು. 'ಹ್ಞೂಂ, ಚೆನ್ನಾಗಿದೆ ಅಲ್ವಾ', ಹೊರೆಯೇರಿಸಿಕೊಂಡು ಹೇಳಿದ ಅವನು.

ದೂರದಿಂದ ಬಂದು ಬೇಟೆಗೆಂದು ಇವರ ಜೊತೆಗೂಡಿದ್ದ ಚಾರ್ಲಿ ವೈಮನ್ ಕೂಡ ಆ ರಾತ್ರಿ, ಅಲ್ಲಿಯೇ ಊಟಕ್ಕುಳಿದ. ಆತನಿಗೆ ವಾಪಸ್ಸಾಗಲು ತುಂಬಾ ತಡವಾಗಿತ್ತು. ಸ್ನಾನ ಮಾಡಿ ಮುಂದುಗಡೆ ರೂಮಿನಲ್ಲಿ ಜಿಂಕೆಮಾಂಸ ಚಪ್ಪರಿಸಲು ಕಾಯುತ್ತಾ ಕೂತರು, ಮೂರೂ ಜನ. ಜಿಮ್ಮೀ ನಾವು ಬೇಟೆಗೆಂದು ತೆಗೆದುಕೊಂಡು ಹೋದ ಮದ್ಯದ ಪಾತ್ರೆಯಲ್ಲಿ ಏನಾದ್ರೂ ಸ್ವಲ್ಪ ಉಳಿದಿದೆಯೇ ನೋಡು' ಎಂದು ಜ್ಞಾಪಿಸಿಕೊಂಡ, ಸ್ಮಿತ್. ಗಾಡಿ ಕಟ್ಟಿದ್ದ ಕಣಜದತ್ತ ನಡೆದ ಜಿಮ್, ಗಾಡಿಯಲ್ಲಿದ್ದ ವ್ಹಿಸ್ಕಿ ಜಗ್ ಎತ್ತಿಕೊಂಡು ಬಂದ. ನಾಲ್ಕು ಗ್ಯಾಲನ್

ಹಿಡಿಸುವ ಜಗ್‌ನಲ್ಲಿ ಎಲ್ಲೋ ತಳದಲ್ಲಿ ಸ್ವ
ಉಳಿದಿತ್ತು. ಮನೆಯ ಕಡೆ ಸಾಗುತ್ತ ಅದರಿಂದಲ
ಒಂದು ಗುಟುಕು ಕುಡಿದ. ಭಾರವಾದ ಜಗ್‌ನ್ನ
ಹಾಗೆ ಕುಡಿದಾಗ ಒಂದಷ್ಟು ವ್ಹಿಸ್ಕಿ ಅವನ ಶರಟ
ಕೊರಳಭಾಗದಲ್ಲಿ ಚೆಲ್ಲಿತು. ಜಗ್ ಹೊ
ಕೊಂಡು ಬಂದ ಜಿಮ್‌ನನ್ನು ನೋಡುತ್ತಲ
ಕಾದುಕೂತಿದ್ದ ಇಬ್ಬರ ಮುಖವೂ ಅರಳಿತ
'ಮೂರು ಗ್ಲಾಸುಗಳು' ಸ್ಮಿತ್ ಕೂಗಿದಾಗ ಲಿ
ಅಡಿಗೆ ಮನೆಯಿಂದ ಅವುಗಳನ್ನು ತಂದಿಟ್ಟಳ
ಅವನು ಅವುಗಳನ್ನು ತುಂಬಿಸಿದ.

'ನಿನ್ನ ಸಲುವಾಗಿ', 'ಆ 'ದರಿದ್ರ' ದೊ
ಜಿಂಕೆಗಾಗಿ', 'ನಾವು ನೆನಪಿಸಿಕೊಂಡ ಎಲ್ಲ
ಸಲುವಾಗಿ' ಎಂದೆಲ್ಲಾ ಪರಸ್ಪರರಿಗೆ ಹೇಳುತ
ಖುಷಿಯಾಗಿ ಅವರು ಮದ್ಯ ಸುರಿದುಕೊಂ
ಚಪ್ಪರಿಸಿದರು. 'ಇನ್ನೊಂದು ರೌಂ
ಹುಡುಗರೇ?' ಎಂದು ಕೇಳುತ್ತಾ ಡಿ.ಜೆ ವ
ಗ್ಲಾಸುಗಳನ್ನು ತುಂಬಿಸಿದ. ಈ ಬಾರಿ 'ಕೆಳಗ
ಹೊಳೆಗೆ' 'ಮುಂದಿನ ವರ್ಷಕ್ಕೆ' ಚಿಯ
ಎಂದೆಲ್ಲಾ ಹೇಳುತ್ತಾ ಅವರು ಕುಡಿದರ
ಜಿಮ್‌ಗೆ ಅದ್ಭುತ ಅನುಭವ. ವ್ಹಿಸ್ಕಿಯ ರು

ತಂಪು ನಾಲಗೆಗೆ ತಗಲಿದ್ದೇ ರೋಮಾಂಚಿತನಾದ. ಕಾಡುಮೇಡುಗಳಲ್ಲಿ ಅಲೆದು ಬಂದವನಿಗೆ ಇಲ್ಲಿಕಂಡ ತನ್ನ ಅಂಗಡಿ, ಬಿಸಿಊಟ ಮಾಡಿ, ಬೆಚ್ಚಗೆ ಮಲಗಿ ಸೊಂಪಾದ ನಿದ್ದೆ ಹೊಡೆಯುವ ಸುಖ ಬಹಳ ಚೆನ್ನ ಅನ್ನಿಸತೊಡಗಿತು. ಇನ್ನೊಂದು ರೌಂಡ್ ಮುಗಿಸಿಯೇ ರಾತ್ರಿಯೂಟಕ್ಕೆ ಸಿದ್ಧನಾದ.

ಮೈ, ಮನಸ್ಸುಗಳಲ್ಲಿ ಕಿಕ್ಕಿರಿಯುವ ಖುಷಿ ಮುಚ್ಚಿಟ್ಟುಕೊಂಡು ಗೌರವಯುತವಾಗಿ ಮೂವರೂ ಊಟದ ಟೇಬಲ್ಲಿಗೆ ಬಂದು ಕೂತರು. ಎಲ್ಲವನ್ನೂ ಬಡಿಸಿಟ್ಟು, ಅಣಮಾಡಿದ ಲಿಜ್ ಕೂಡ ಕುಟುಂಬದೊಂದಿಗೆ ಕೂತು ಉಂಡಳು. ಸೊಗಸಾದ ಊಟ. ತುಟಿಪಿಟಿಕೆನ್ನದೆ ಪಾತ್ರೆ ಖಾಲಿ ಮಾಡಿದರು, ಮೂರೂ ಜನ. ಊಟ ಮುಗಿಸಿ ಮತ್ತೆ ಹೊರಕೋಣೆಗೆ ಗಂಡಸರು ಹೋಗುತ್ತಿದ್ದಂತೆಯೇ ಲಿಜ್ ಮತ್ತು ಶ್ರೀಮತಿ ಸ್ಮಿತ್ ಸೇರಿ ಊಟದ ಮೇಜು ಸ್ವಚ್ಛಮಾಡಿ ಪಾತ್ರೆಗಳನ್ನು ತೊಳೆದಿಟ್ಟರು. ಆಮೇಲೆ ಶ್ರೀಮತಿ ಸ್ಮಿತ್ ಮಹಡಿಯೇರಿದಳು; ಸ್ವಲ್ಪ ಹೊತ್ತಿನಲ್ಲೇ ಡಿ.ಜೆ. ಕೂಡ ಮೇಲೆ ಹೋದ. ಜಿಮ್ ಮತ್ತು ಚಾರ್ಲಿ ಇನ್ನೂ ಕೂತೇ ಇದ್ದರು. ಲಿಜ್ ಕೂಡ ಅಡಿಗೆ ಮನೆಯಲ್ಲಿ, ಒಲೆಯ ಪಕ್ಕ, ಪುಸ್ತಕವೊಂದನ್ನು ಹಿಡಿದು, ಓದುತ್ತಿರುವಂತೆ ನಟಿಸುತ್ತಾ ಕೂತಿದ್ದಳು. ತಲೆಯ ತುಂಬಾ ಜಿಮ್. ಮುಂದಿನ ಕೋಣೆಯಲ್ಲಿ ಕೂತಿದ್ದ ಜಿಮ್ ಮಲಗಲು ಯಾವ ಕಡೆ ಹೋಗುತ್ತಾನೆಂದು ನೋಡಿ ಆಮೇಲೆ ಅವನಿಗೆ ಅನುಕೂಲವಾಗುವಂತೆ ಹೋಗುವ ಯೋಚನೆ ಅವಳದು. ಒಂದೊಮ್ಮೆ ಅವನು ತನ್ನೊಂದಿಗೆ ಮಲಗಲು ಬಯಸಿದರೆ?... ಅಂದುಕೊಂಡು ಹಾಸಿಗೆ ಸೇರದೆ ಕಾಯುತ್ತಿದ್ದಳು.

ಅವನನ್ನೇ ಮನಸ್ಸಿನಲ್ಲಿ ತುಂಬಿಕೊಂಡು ಅವಳು ಹಾಗೆ ಕೂತಿರುವಾಗ ಜಿಮ್ ಕೋಣೆಯಿಂದ ಹೊರಬಂದ. ಅವನ ಕಣ್ಣುಗಳು ಹೊಳೆಯುತ್ತಿದ್ದವು; ತಲೆಗೂದಲು ಸ್ವಲ್ಪ ಕೆದರಿತ್ತು. ಲಿಜ್ ದೃಷ್ಟಿ ತಗ್ಗಿಸಿ ಪುಸ್ತಕ ನೋಡಿದಳು. ಜಿಮ್ ಅವಳ ಕುರ್ಚಿಯ ಹಿಂದೆ ಬಂದು ನಿಂತುಕೊಂಡ. ಅವನ ಉಸಿರು ಅವಳಿಗೆ ತಾಗುತ್ತಿತ್ತು, ಆಮೇಲೆ ಅವಳ ಸುತ್ತಾ ತೋಳುಬಿಗಿದ. ಅವಳ ದೃಢವಾದ ಮೊಲೆಗಳು ಅವನ ಕೈಗಳಲ್ಲಿ ದುಂಡಗೆ, ತೊಟ್ಟು ಚಾಚಿಕೊಂಡು ಉಳಿದವು. ಲಿಜ್‌ಗೆ ಬಹಳ ಭಯವಾಯಿತು. ಈವರೆಗೆ ಯಾರೂ ಅವಳನ್ನು ಮುಟ್ಟಿರಲಿಲ್ಲ. ಆದರೂ 'ಕಡೆಗೂ ನನ್ನ ಬಳಿ ಬಂದಿದ್ದಾನೆ ಅವನು. ನಿಜವಾಗಿ ಬಂದಿದ್ದಾನೆ' ಎನ್ನುವ ವಿಚಿತ್ರ ಭಾಸ.

ಭಯ ಮತ್ತು ಇನ್ನೇನು ಮಾಡಲೂ ತೋಚದ ಕಾರಣ ಲಿಜ್ ಮರಗಟ್ಟಿದವಳಂತೆ ಉಳಿದಳು. ಇದ್ದಲ್ಲೆ ಕುರ್ಚಿಗೆ ಬಿಗಿಯಾಗಿ ಒತ್ತಿ ಹಿಡಿದು ಜಿಮ್ ಅವಳನ್ನು ಚುಂಬಿಸಿದ. ಆ ವಿಚಿತ್ರ, ತೀವ್ರ, ಹರಿತವಾದ, ಹಸಿ ಅನುಭವದಿಂದ ಅವಳು ತತ್ತರಿಸಿಹೋದಳು. ಬೇರ್ಪಡದೆ ಒತ್ತಿಕೊಂಡ ಜಿಮ್. ಇದನ್ನು ತಡಕೊಳ್ಳಲಾರೆ ಅಂತ ಅವಳಿಗೆ ಅನ್ನಿಸುತ್ತಿರುವಾಗಲೇ ಒಳಗೇನೋ ಸೆಳಕು ಎದ್ದು ಹಿಡಿತ, ಬೆಚ್ಚಗೆ, ಹಿತಕರ ಅನಿಸಲಾರಂಭಿಸಿತು. ಜಿಮ್ ಇನ್ನೊಮ್ಮೆ ಅವಳನ್ನು ಕುರ್ಚಿಗೆ ಬಿಗಿಯಾಗಿ ಒತ್ತಿಹಿಡಿದಾಗ ಅವಳದಕ್ಕೆ ಸಿದ್ಧವಾಗಿದ್ದಳು. ಅವನು ಮೆಲ್ಲಗೆ 'ಒಂದು ವಾಕ್ ಹೋಗೋಣ, ಬಾ' ಎಂದ.

ಗೋಡೆಯ ಗೂಟದಿಂದ ತನ್ನ ಕೋಟ್ ತೆಗೆದುಕೊಂಡು ಲಿಜ್ ಅವನೊಂದಿಗೆ ಬಾಗಿಲು ದಾಟಿದಳು. ತೋಳಿನಲ್ಲಿ ಅವಳನ್ನು ಬಳಸಿ ಹಿಡಿದಿದ್ದ ಜಿಮ್. ಸ್ವಲ್ಪ ಸ್ವಲ್ಪ ದೂರಕ್ಕೇ ನಿಂತು, ಒಬ್ಬರನ್ನೊಬ್ಬರು ತಬ್ಬಿಕೊಳ್ಳುತ್ತಿದ್ದರು ಮತ್ತು ಜಿಮ್ ಅವಳನ್ನು ಚುಂಬಿಸುತ್ತಿದ್ದ. ಚಂದ್ರನಿಲ್ಲದ ಆಕಾಶ, ಮೊಣಕಾಲತನಕ ಬರುತ್ತಿದ್ದ ಹೊಯಿಗೆಯ ರಾಶಿಯಲ್ಲಿ, ಮರಗಳ ಮಧ್ಯೆ ಹೆಜ್ಜೆಯಿಡುತ್ತಾ ಅವರು ಕೊಲ್ಲಿಯ ಬಳಿಯಿದ್ದ ಹಡಗು, ದೋಣಿಗಳಿರುವ ಧಕ್ಕೆಗೆ, ಅದರ ಪಕ್ಕದಲ್ಲಿದ್ದ

ಸಾಮಾನು ಸರಂಜಾಮುಗಳನ್ನು ಶೇಖರಿಸಿಟ್ಟಿದ್ದ ಕಟ್ಟಡದ ಬಳಿ ಬಂದುಬಿಟ್ಟಿದ್ದರು. ಕೊಲ್ಲಿಯಾಚೆ ಕಪ್ಪನೆ ಕತ್ತಲು. ತಳದಲ್ಲಿದ್ದ ಮರದ ತೊಲೆಗಳ ಬಳಿ ನೀರು ಒಳಗಿಳಿಯುತ್ತಿರುವ ಗುಳುಗುಳು ಸದ್ದು.

ತುಂಬಾ ಚಳಿಯಿದ್ದರೂ ಜಿಮ್‌ನೊಂದಿಗಿದ್ದ ಲಿಜ್ ಮೈಪೂರ ಬಿಸಿಯಾಗಿ ಬೆಚ್ಚಗಿದ್ದಳು. ಕಟ್ಟಡದ ಮರೆಯಾದ ಜಾಗದಲ್ಲಿ ಅವರು ಕುಳಿತುಕೊಂಡರು. ಜಿಮ್ ಲಿಜ್‌ಳನ್ನು ಹತ್ತಿರ ಕ್ಕೆಳೆದುಕೊಂಡ. ಅವಳಿಗೆ ಹೆದರಿಕೆಯಾಗ ತೊಡಗಿತು. ಜಿಮ್‌ನ ಒಂದು ಕೈ ಅವಳ ಮಡಿಲಲ್ಲಿತ್ತು, ಇನ್ನೊಂದು ಕೈ ಅವಳ ಡ್ರೆಸ್ ಒಳಗೆ ತೂರಿ ಮೊಲೆಗಳನ್ನು ನಿಲುಕುತ್ತಿತ್ತು. ಅವನು ಮುಂದೇನು ಮಾಡುತ್ತಾನೆ ಗೊತ್ತಾಗದೆ ತುಂಬಾ ಹೆದರಿಕೊಂಡರೂ ಅವಳು ಅವನ ಹತ್ತಿರ, ಹತ್ತಿರಕ್ಕೆ ಸರಿದು ಕೂತಳು. ಅವಳ ಮಡಿಲಲ್ಲಿ ಹೊಂಚಿಕೂತಿದ್ದ ಅವನ ಇನ್ನೊಂದು ಕೈ ಈಗ ಅವಳ ಕಾಲಿನ ಬಳಿಯಿಂದ ಮೇಲೇರ ತೊಡಗಿತು.

'ಬೇಡ, ಜಿಮ್', 'ಊಹ್ಞೂಂ' 'ಹಾಗೆ ಮಾಡಬೇಡ' ಲಿಜ್ ಹೇಳುತ್ತಿದ್ದ ಮಾತು ಅವಳಿಗಷ್ಟೇ ಕೇಳಿಸುತ್ತಿತ್ತು. ಅವರು ಕುಳಿತಿದ್ದ ಹಲಗೆಗಳು ಗಟ್ಟಿಯಾಗಿದ್ದವು. ಅವಳ ಉಡುಪನ್ನು ಪೂರ್ತಿ ಮೇಲೆತ್ತಿ ಜಿಮ್ ಏನೋ ಮಾಡಲು ಹವಣಿಸುತ್ತಿದ್ದ. ತುಂಬ ಹೆದರಿಕೆಯಾದರೂ ಅದು ಅವಳಿಗೆ ಬೇಕೆನಿಸುತ್ತಿತ್ತು.

'ಬೇಡ, ಜಿಮ್ ಹಾಗೆ ಮಾಡಬೇಡ'

''ಇಲ್ಲ ನಾನು ಮಾಡಲೇಬೇಕು; ನಿನಗ್ಗೊತ್ತು ನಾವದನ್ನು ಮಾಡಲೇಬೇಕು.''

''ಇಲ್ಲ, ಇದು ಸರಿಯಲ್ಲ; ಬೇಡ ನಾವಿದನ್ನು ಮಾಡಲೇಬೇಕಾಗಿಲ್ಲ. ಓಹ್ ನೋಯುತ್ತದೆ, ಬೇಡ ಜಿಮ್, ಆಗಲ್ಲ ಬೇಡ.''

ಚಕ್ಕೆಯೆದ್ದ, ಗಟ್ಟಿ, ಒರಟು ಮರದ ಹಲಗೆಗಳು ತಣ್ಣಗೆ ಕೊರೆಯುತ್ತಿದ್ದವು. ಆವರಿಸಿಕೊಂಡಿದ್ದ ಜಿಮ್ ಅವಳಿಗೆ ನೋವುಂಟು

ಮಾಡಿದ್ದ. ಲಿಜ್ ಅವನನ್ನು ತಳ್ಳಿದಳು. ಮಾಂ
ಖಂಡಗಳಲ್ಲೆಲ್ಲಾ ನೋವು; ಅವಳಿಗೆ ತುಂ
ಹಿಂಸೆ ಎನ್ನಿಸಿತು. ನಿದ್ದೆಗೆ ಜಾರಿದ್ದ ಜಿಮ್ ಅಲ
ಗಾಡುತ್ತಿರಲಿಲ್ಲ. ಅವನ ಕೆಳಗಿಂದ ತಾನೇ ಒದ್ದಾ
ಕೊಂಡು ಮೇಲೆದ್ದು ಅವಳು ಸ್ಕರ್ಟ್ ಸ
ಮಾಡಿಕೊಂಡಳು. ಕೋಟ್ ಸರಿಯಾಗಿ ತೊಟ್ಟು
ಕೆದರಿದ ಕೂದಲು ಸರಿಪಡಿಸಿಕೊಳ್ಳಲು ಪ್ರಯತ್ನಿ
ದಳು. ತುಸುವೇ ಬಾಯಿತೆರೆದುಕೊಂಡು ಜಿಮ
ನಿದ್ದೆ ಮಾಡುತ್ತಿದ್ದ. ಲಿಜ್ ಬಾಗಿ ಅವನ ಕೆನ್ನೆ
ಮೇಲೆ ಮುತ್ತಿಟ್ಟಳು. ಅವನಿಗೇನೂ ಎಚ್ಚರವಾ
ಲಿಲ್ಲ. ಅವಳು ಅವನ ತಲೆಯೆತ್ತಿ ಒಮ್ಮೆ ಮೆಲ್ಲ
ಅಲುಗಾಡಿಸಿದಳು. ಅವನು ತಲೆ ಹೊರಳ
ಉಗುಳು ನುಂಗಿದ. ಲಿಜ್‌ಗೆ ಅಳು ಬಂತು
ಧಕ್ಕೆಯ ಉದ್ದಕ್ಕೂ ನಡೆದುಕೊಂಡು ಹೋ
ತಳಕ್ಕಿದ್ದ ನೀರಿನತ್ತ ನೋಡಿದಳು. ಕೊಲ್ಲಿ
ಕಡೆಯಿಂದ ಹಬೆಯಂಥಾ ಮಂಜು ಏಳುತ್ತಿ
ದುಃಖಿತಳಾಗಿ, ತಣ್ಣಗೆ ನಿಂತಿದ್ದವಳಿಗೆ ಎ
ಕಳೆದು ಹೋದಂತೆ ಭಾಸವಾಯ್ತು. ಮ
ಜಿಮ್ ಮಲಗಿರುವ ಕಡೆ ನಡೆದು, ಇನ್ನೊಂ
ಬಾರಿ ಅವನನ್ನು ಅಲುಗಾಡಿಸಿ, ಅವನು ಏಳ
ಲಕ್ಷಣ ಇಲ್ಲದಿರುವುದನ್ನು ಖಚಿತಪ
ಕೊಂಡವಳು ಕಣ್ಣೀರು ಸುರಿಸುತ್ತ 'ಜಿಮ್', ಓ
ಜಿಮ್, ದಯವಿಟ್ಟು'... ಎಂದೆಲ್ಲಾ ಬಡಬ
ದಳು. ತುಸು ಕದಲಿದ ಹಾಗೆ ಕಂಡ ಜಿಮ್
ಇನ್ನಷ್ಟು ಬಿಗಿಯಾಗಿ ಮುದುರಿ ಮಲಗಿದ. ಲಿ
ತನ್ನ ಕೋಟು ತೆಗೆದು, ಅವನ ಮೇಲೆ ಬಾ
ಅದನ್ನವನಿಗೆ ಹೊದಿಸಿದಳು. ಎಲ್ಲ ಕಡೆ ಸುತ್ತಿಕೊ
ವಂತೆ ನೀಟಾಗಿ, ಹುಷಾರಾಗಿ, ಒಳಸೇರಿಸಿದ
ಅಲ್ಲಿಂದವಳು ಕೊರೆಯುವ ಮಂಜಿನ
ಯುದ್ದಕ್ಕೂ ಸಾಗಿ, ಕಡಿದಾದ ಮರಳ ರ
ಹೊರಳಿ, ಮನೆಯ ಕಡೆ ನಡೆಯತೊಡಗಿದಳ

ಕನ್ನಡಕ್ಕೆ: ವಿ.ಎನ್. ವೆಂಕಟ

# ಮುದುಕಿಯ ಗುಡಿಸಲು

**ಒಂದಾಣೆ ಮಾಲೆ**

1950ರ ದಶಕದಲ್ಲಿ ಮಂಗಳೂರಿನಿಂದ ಶ್ರೀ ಎಂ. ಆರ್. ಭಟ್ ಅವರು 'ಒಂದಾಣೆ ಮಾಲೆ' ಎಂಬ ಕಿರುಪುಸ್ತಿಕೆಗಳನ್ನು ಪ್ರಕಟಿಸುತ್ತಿದ್ದರು. "ಬಾಳುವೆಯನ್ನು ಪುನೀತಗೊಳಿಸುವ, ಸದ್ವಿಚಾರಗಳನ್ನು ಪ್ರಚೋದಿಸಲು ಸಹಾಯಕವಾಗುವ, ಉದ್ಬೋಧಕ ಕಥಾನಕಗಳು" ಎಂಬ ಪ್ರಣಾಳಿಕೆಯಲ್ಲಿ ಬಂದ 'ಒಂದಾಣೆ'ಯ ಈ ನೂರಕ್ಕೂ ಹೆಚ್ಚು ಪುಸ್ತಿಕೆಗಳು ಕರಾವಳಿಯಲ್ಲಿ ಮನೆಮಾತಾಗಿದ್ದವು. ವಾಚನಾಭಿರುಚಿಯನ್ನು ಉದ್ದೀಪಿಸುವ ಕೆಲಸವನ್ನು ನಿಸ್ವಾರ್ಥದಿಂದ ಅತ್ಯಂತ ಸರಳ ರೀತಿಯಲ್ಲಿ ಕೈಗೊಂಡ ಎಂ. ಆರ್. ಭಟ್ ಅವರ ಚಾರಿತ್ರಿಕ ಮಹತ್ವದ ಈ ಮಾಲಿಕೆಯ ಪುಸ್ತಕದಿಂದ ಆಯ್ದ ಕಿರುಗತೆ.

ದೇಶದ ಒಡೆಯ! ಮಹಾರಾಜ! ಅವನು ಬೆರಳೆತ್ತಿದರೆ ಲಕ್ಷ ಜನ ಏಳುವರು; ಬೆರಳೊತ್ತಿದರೆ ಲಕ್ಷ ಜನ ಕೆಳಗೆ ಬೀಳುವರು! ಮಹಾರಾಜನಿಗೆ ಒಮ್ಮೆ ಒಂದು ಹೊಸ ಅರಮನೆ ಕಟ್ಟಿಸುವ ಮನಸ್ಸಾಯಿತು. ಒಳ್ಳೆಯ ಸ್ಥಳವನ್ನಾರಿಸಿಕೊಂಡು, ಅರಮನೆಯ ಕೆಲಸ ಆರಂಭಿಸಲ್ಪಟ್ಟಿತು. ಅರಮನೆ ಕಟ್ಟಿ ಮುಗಿಯಿತು. ಈ ನೂತನ ಮಹಲಿನ ಸೊಬಗನ್ನು ಸಾವಿರಾರು ಜನರು ದೂರದಿಂದ ನೋಡಿ ಹೋಗುವರು.

ಅರಮನೆಯ ಮುಂದೆ, ಅನತಿ ದೂರದಲ್ಲಿ, ಓರ್ವಳು ಬಡ ಮುದುಕಿಯ ಗುಡಿಸಲು ಇತ್ತು. ಆ ಅರಮನೆಗಾಗಿ ರಾಜನು ಸ್ಥಳವನ್ನಾರಿಸಿಕೊಳ್ಳುವ ಎಷ್ಟೋ ವರ್ಷಗಳ ಹಿಂದಿನಿಂದ ಆ ಮುದುಕಿಯು ಆ ಹರಕು ಗುಡಿಸಿಲಿನಲ್ಲಿ ವಾಸವಾಗಿದ್ದಳು. ಒಮ್ಮೊಮ್ಮೆ, ಬಲವಾದ ಗಾಳಿ ಬೀಸಿತೆಂದರೆ, ಆ ಗುಡಿಸಿಲಿನಿಂದ ಹೊರಟ ಹೊಗೆಯು ಅರಮನೆಯ ಕಡೆಗೂ ಬೀಸುತ್ತಿತ್ತು. ಅರಮನೆಯವರು ಮೂಗು ಮುಚ್ಚುತ್ತಿದ್ದರು.

ರಾಜನು ನೋಡಿದನು. ರಮಣೀಯವಾಗಿ ಕಂಗೊಳಿಸುವ ಪ್ರದೇಶದಲ್ಲಿ ಶೃಂಗಾರಿಸಲ್ಪಟ್ಟ ಅರಮನೆಯ ಮುಂದೆ, ಆ ಹೊಲಸು ಗುಡಿಸಲು!

ಆ ಗುಡಿಸಲನ್ನು ಕಿತ್ತು ಒಯ್ಯಬೇಕೆಂದು ರಾಜಾಜ್ಞೆ ಹೊರಟಿತು! ರಾಜನ ಸಿಪಾಯಿಗಳು ಮುದುಕಿಯ ಬಳಿಗೆ ಹೋಗಿ, ರಾಜಾಜ್ಞೆ ತಿಳಿಸಿದರು. ಆದರೆ, ಮುದುಕಿಯು ಬೆದರಲಿಲ್ಲ. 'ಇಲ್ಲಿಂದ ಏಳಲಾರೆ' ಎಂದಳು. ರಾಜನು ಇದನ್ನು ಕೇಳುತ್ತಲೇ ಕೋಪದಿಂದ ಕಿಡಿಕಿಡಿಯಾದನು. ಏನಿದು, ಈ ಕೃಶ-ವೃದ್ಧ-ಜಂತುವಿನ ದರ್ಪ! "ಅವಳನ್ನು ಎಳೆದು ಕರೆತನ್ನಿರಿ!" ರಾಜನು ಗುಡುಗುಡಿಸಿದನು.

ದೂತರು, ಮುದುಕಿಯನ್ನು ರಾಜನ ಮುಂದೆ ಒಯ್ದು ಒಪ್ಪಿಸಿದರು. ರಾಜನು ಕೇಳಿದನು: "ಮುದುಕಿಯೇ, ನೀನು ನಿನ್ನ ಹೊಲಸು ಗುಡಿಸಲನ್ನು ಕಿತ್ತು ತೆಗೆಯಲಾರೆಯಾ! ನಾನೇ ತೆಗೆಸಬೇಕೇ? ನಿತ್ಯವೂ ನಾನು ಅದನ್ನು ನೋಡಿ ನೋಡಿ ಮೂಗುಮುರಿದುಕೊಳ್ಳುತ್ತಿರುವೆನಲ್ಲ!"

ಮುದುಕಿಯು ಶಾಂತಳಾಗಿ ಉತ್ತರವಿತ್ತಳು: "ಪ್ರಭೋ! ಕೋಪಿಸಿಕೊಳ್ಳಬೇಡ. ನೀನು ಸರ್ವಶಕ್ತನು. ಆದರೆ, ಒಂದು ವಿಷಯವನ್ನು ಹೇಳುತ್ತೇನೆ, ದರಿದ್ರೆಯಾದ ನಾನು, ಕೊಳಕಿನಲ್ಲೇ ವಾಸಿಸುತ್ತಿರುವ ನಾನು, ನಿತ್ಯವೂ ನಿನ್ನ ಸುಂದರ- ವೈಭವಯುಕ್ತ-ಸಿರಿವಂತ ಮಹಲನ್ನು ನೋಡಿ ಸಹಿಸುತ್ತಿರುವೆನಲ್ಲ! ನನ್ನ ಬಡ ಗುಡಿಸಲನ್ನು ನೋಡಿ ನೀನೂ ಸೈರಿಸಲೊಲ್ಲೆಯೇಕೆ?"

ಮಹಾರಾಜನು ಆ ಮಾತಿನಿಂದ ಸ್ತಂಭೀಭೂತನಾದನು. ಅವನು ಇಂದು ಒಂದು ಹೊಸ ತತ್ತ್ವವನ್ನು ಕಂಡುಕೊಂಡನು! ಲಜ್ಜಿತನಾಗಿ, ತಲೆಬಾಗಿ, ಮುದುಕಿಗೆ ಯಥೇಚ್ಛ ಧನವನ್ನು ಕೊಟ್ಟು ಸನ್ಮಾನಿಸಿ, ಮರ್ಯಾದಾಪೂರ್ವಕವಾಗಿ ಬೀಳ್ಕೊಟ್ಟನು.









# ಪುಟ್ಟ ಪಾದ

ಮೋಡ ಮುಸುಕಿದ ಈ ಸಂಜೆಗಾಳಿ ಒಂದು ಕಡೆ ಸೊಂಪಾದ ನಿದ್ರೆ ತರುವಂತಿದೆ. ಆದರೆ ಕೆಲವು ಕ್ಷಣಗಳ ಮೊದಲು ಸುರಿದ ಅಬ್ಬರದ ಮಳೆ ನಿಂತು ಅಂಗಳದ ಮರಗಳಿಂದ ತೊಟ್ಟಿಕ್ಕುತ್ತಿರುವ ಹನಿಯ ಶಬ್ದ ಮನ ನೀರವತೆಯನ್ನು ಕಾಡುವಂತೆ, ಏನೋ ನೆನಪು. ಆಗಷ್ಟೆ ನನ್ನವಳು ತನ್ನ ಅಡಿಗೆ ಕೆಲಸ ಮುಗಿಸಿ, ದಿವಾ ಮೇಲೆ ಒರಗಿರುವ ನನ್ನನ್ನು ನೋಡಿ ಯಾವುದೋ ಅವ್ಯಕ್ತ ಪ್ರೀತಿ ಆವರಿಸಿದಂತೆ ನನ್ನ ಕಾಲ ಬಳಿ ಕು ಕಾಲನ್ನು ಒತ್ತುತ್ತಿದ್ದಾಳೆ. ಅವಳ ಕೈ ಹಾಗೆ ನನ್ನ ಪಾದಗಳನ್ನು ಮೆದುವಾಗಿ ಒತ್ತಿ ನೇವರಿಸುತ್ತಿದೆ.

ಹೊರಗಿನ ತಣ್ಣನೆಯ ಗಾಳಿ, ಮಳೆ ನಿಂತ ಮೇಲಿನ ನೀರಿನ ಸದ್ದು, ನನ್ನೆದೆಗೆ ಇದ್ದಕ್ಕಿ ಲಗ್ಗೆಯಿಟ್ಟು, ದೂರ ತೀರಕ್ಕೆ ಒಯ್ಯುವಂತೆ.

ಆ ದಿನವೂ ಹೀಗೆ, ಬಹುಶಃ ಅವಳ ಕೈಗಳೂ ಹೀಗೆ, ಆದರೂ ಅವಳ ಮುಖ ನನಗೆ ಎಂದಿ ಸ್ಪಷ್ಟವಾಗಿ ಕಾಣುವುದೇ ಇಲ್ಲ. ನಾನು ಯಾವಾಗಲೂ ಕಂಡಿದ್ದು ಅವಳ ಆ ಪುಟ್ಟ ಪಾದಗಳನ್ನು ಮಾ

ನಾನು ಆಗ ತಾನೆ ಪೇಟೆಯಲ್ಲಿ ಪಿಯುಸಿ ಓದಿ ಮನೆಗೆ ಬಂದಿದ್ದೆ. ಹಳ್ಳಿಯ ತೋಟ ಗದ್ದೆಗಳ ಅಪ್ಪನದೇ ಕಾರುಬಾರು, ಅವನಿಗೆ ನಾನು ಹೆಚ್ಚು ಓದುವುದು ಇಷ್ಟವಿರಲಿಲ್ಲ. ಅಂದು ರಾತ್ರಿ, ಎಲ್ಲ

ಒಟ್ಟಿಗೆ ಕುಳಿತಾಗ ಅಪ್ಪ ''ನೋಡು ಮಗ ಇನ್ನು ನೀನು ದೊಡ್ಡವನಾಗಿದ್ದೀಯ, ಇಷ್ಟೆಲ್ಲಾ ಆಸ್ತಿ ನೋಡಿಕೊಳ್ಳಲು ನನಗೊಬ್ಬನಿಗೆ ಸಾಧ್ಯವಿಲ್ಲ. ಅದಕ್ಕೆ, ಆದಷ್ಟು ಬೇಗ ಒಂದು ಮದುವೆ ಮಾಡಿಕೊಂಡು ನೀನು ಇಲ್ಲೇ ಇದ್ದು ಮನೆಯ ಜವಾಬ್ದಾರಿ ನೋಡಿಕೊ'' ಎಂದ.

ಅಪ್ಪ, ಅಪ್ಪಟ ಜಮೀನ್ದಾರನ ಗುಣವಿದ್ದವನು. ನಾನು ಚಿಕ್ಕಂದಿನಲ್ಲಿ ಒಮ್ಮೆ ಅಪ್ಪನಿಗೆ ಎದುರಾಗಿ ವಾದಿಸಿ ಸಾಯುವ ಹಾಗೆ ಹೊಡೆತ ತಿಂದಿದ್ದೆ. ಅದು ಇನ್ನೂ ನನ್ನಲ್ಲಿ ಹಚ್ಚಹಸಿರಾಗಿ ಮನಸ್ಸಿನ ಮೂಲೆಯಲ್ಲಿ ಎಂದೂ ಮರೆಯದ, ಮಾಸದ, ಗಾಯವಾಗಿಯೆ ಉಳಿದಿತ್ತು. ಹೀಗಾಗಿ ನಾನು ಏನನ್ನೂ ಹೇಳದೆ ಸುಮ್ಮನಿದ್ದೆ. ಆ ರಾತ್ರಿ ಕಣ್ಣಿಗೆ ನಿದ್ರೆ ಹತ್ತಲಿಲ್ಲ. ಮಾರನೆ ಬೆಳಿಗ್ಗೆ ಅಪ್ಪ ನಸುಕಿನಲ್ಲಿ ಎದ್ದು ಹೋಗಿದ್ದ. ಅಮ್ಮ ಮನೆಯಲ್ಲಿ ಒಂದು ಹೆಣ್ಣಾಳಿನ ಹಾಗೆ ಇದ್ದವಳು. ಅವಳ ಹತ್ತಿರ ನಾನು ಏನು ಹೇಳಿದರೂ ಅದರ ಪರಿಣಾಮ ಸೊನ್ನೆ.

ಅಪ್ಪ ಸಂಜೆ ಬಂದವನೆ ಅಂಗಳದಲ್ಲಿ ಕಾಲು ತೊಳೆಯುತ್ತಾ ಜೋರಾಗಿ ಮನೆಯವರಿಗೆಲ್ಲ ಕೇಳುವಂತೆ ''ನಾಳೆ ಪಕ್ಕದ ಹಳ್ಳಿಯ ರಾಮೇಗೌಡರ ಮಗಳನ್ನು ನೋಡ್ಲಿಕ್ಕೆ ಹೋಗಬೇಕು, ಎಲ್ಲಾ ತಯಾರಾಗಿ'' ಎಂದ.

ಹೆಣ್ಣು ನೋಡಿದ ಶಾಸ್ತ್ರ ಮುಗಿಯಿತು. ಆದರೆ ಆ ಹೆಣ್ಣನ್ನು ನಾನು ನೋಡೇ ಇರಲಿಲ್ಲ, ಅದಾಗಿ ಒಂದು ವಾರದಲ್ಲಿ ನನ್ನ ಮದುವೆಯೂ ಆಯಿತು. ಪ್ರಸ್ತದ ರಾತ್ರಿ ಆಕೆ ನನ್ನ ಕೋಣೆಗೆ ಬಂದಾಗ ನಾನು ಅಲ್ಲಿಂದ ಓಡಿ ಬಿಡಲೇ ಅನ್ನಿಸಿತ್ತು. ಆದರೂ ಆ ಕತ್ತಲ ಕೋಣೆಯ ಮಂದ ಬೆಳಕಿನಲ್ಲಿ ಆಕೆಯ ಮುಖ ನೋಡಿದೆ. ಪಾಪ ಅನ್ನಿಸಿದರೂ ಆಕೆ ನನ್ನ ಹೆಂಡತಿಯೆಂದು ಮನಸ್ಸಿಗೆ ತಟ್ಟಲೇ ಇಲ್ಲ. ಆದರೂ ಅಪ್ಪ ನನ್ನ ಹತ್ತಿರ ಮಾತನಾಡುವ ಹಾಗೆ ''ನೋಡು, ಇನ್ಮೇಲೆ ನಾವಿಬ್ರು ಒಂದೇ ಹಾಸಿಗೇಲಿ ಮಲಗಿದ್ರು ನೀನು ಆ ಕಡೆ ತಲೆ ಹಾಕು. ನಾನು ಈ ಕಡೆ ತಲೆ ಹಾಕ್ತೀನಿ. ನೀನು ನನ್ನನ್ನ ಯಾವ ಕಾರಣಕ್ಕೂ ಮುಟ್ಟಲೇಬಾರದು''ಅಂದೆ. ಪಾಪದ ಹುಡುಗಿ ಹೂಂ ಎಂದು ತಲೆ ಆಡಿಸಿದ್ದು ಯಾಕೋ ಇಂದು ಮತ್ತೆ ಮತ್ತೆ ನನ್ನನ್ನು ಕಾಡುತ್ತಿದೆ.

ಹೇಗೋ ಮದುವೆಯಾಗಿ ಆರು ತಿಂಗಳಾಯಿತು, ಮನೆಯವರಿಗೆಲ್ಲ ಸೊಸೆ ಏನಾದರೂ ಸಿಹಿ ಸುದ್ದಿ ಹೇಳಬಹುದೇನೋ ಎನ್ನುವ ಕುತೂಹಲ. ನನ್ನ ಹತ್ತಿರ ಅಷ್ಟಾದ ಸಲಿಗೆಯಿಂದ ಮಾತಾಡುವವರೆ ಇರಲಿಲ್ಲ.

ಅದೊಂದು ದಿನ ಊರಹಬ್ಬ. ಮನೆಯವರೆಲ್ಲಾ ಊರಾಚೆಯಿದ್ದ ಮಾರಿಗುಡಿಗೆ ರಾತ್ರಿ ನಡೆಯುವ ಪೂಜೆಗೆ ಹೋಗಿದ್ದೆವು. ರಾತ್ರಿ ಅಲ್ಲಿ ನಡೆದ ಪೂಜೆ ಮುಗಿದು ಸುಮಾರು ಹನ್ನೊಂದು ಗಂಟೆ. ಹಳ್ಳಿಯ ಕೆರೆ ಏರಿಯ ಮೇಲಿಂದ ಹೊರಟು ಬರುತ್ತಿದ್ದ ಹಾಗೆ ಭೋರೆಂದು ಬೀಸಿದ ಗಾಳಿಯ ಹಿಂದೆ ಎಂದಿಗೂ ಬಾರದ ಮಳೆ, ಜೊತೆ ಜೊತೆಗೆ ಕರುಳು ಕೀಳುವಂಥಾ ತಣ್ಣನೆ ಗಾಳಿ, ಹಾಗೂ ಹೀಗೂ ಮನೆಸೇರಿ, ಬಟ್ಟೆ ಬದಲಾಯಿಸಿ, ತಲೆ, ಮೈ ಒರೆಸಿಕೊಂಡು ಅಮ್ಮ ಊಟಕ್ಕೆ ಕರೆದರೂ ಬೇಡವೆಂದು ಹೇಳಿ ಮಲಗುವ ಕೋಣೆಗೆ ಬಂದೆ. ನನ್ನ ಹೆಂಡತಿ ಎನಿಸಿಕೊಂಡವಳು ಪುಟ್ಟ ಮಗುವಿನಂತೆ ಮುದುಡಿ ಮಲಗಿದ್ದಳು. ಅವಳ ಮುಖ ಕಾಣದಿದ್ದರೂ ಆ ಮಂದ ಬೆಳಕಲ್ಲಿ ಅವಳ ಆ ಪುಟ್ಟ ಪಾದ ಮಾತ್ರ ನನ್ನ ಕಣ್ಣಿಗೆ ಸ್ಪಷ್ಟವಾಗಿ ಗೋಚರಿಸಿತ್ತು.

ಯಾಕೋ ಮೈಕೈ ನೋವು ತಡೆಯಲಾಗದೆ ಹಾಗೇ ಒರಗಿದ್ದೆ. ಇದ್ದಕ್ಕಿದ್ದಂತೆ ನನ್ನ ನರನಾಡಿಗಳಲ್ಲಿ ನಡುಗುವಂಥಾ ಚಳಿ. ಪಕ್ಕದಲ್ಲಿದ್ದವಳನ್ನು ಸೋಕದೆ ಆದಷ್ಟು ಹೊತ್ತು ಹಲ್ಲುಕಡಿದೆ. ಆದರೆ ಕೊನೆಗಳಿಗೆಯಲ್ಲಿ ತಡೆಯಲಾಗದೆ ಅವಳ ಪುಟ್ಟ ಪಾದಗಳ ಮೇಲೆ ನನ್ನ ತಲೆಯನ್ನಿಟ್ಟು ತಬ್ಬಿಕೊಂಡೆ, ಆ ಕ್ಷಣದಲ್ಲಿ ಗಪ್ಪನೆ ಎದ್ದ ಆಕೆ, ಏನು ಮಾಡಲೂ ಅರಿಯದೆ ಗಾಬರಿಯಾಗಿ ನನ್ನ ಕೈ ನೇವರಿಸಿದ್ದು, ನನ್ನ ತಲೆಯನ್ನು ಆಕೆಯ ಎದೆಗೆ ಆನಿಸಿದ್ದು ಮತ್ತೆ ಮುಂದೇನಾಯಿತೋ ಎಲ್ಲಾ ಕನಸಿನಲ್ಲಿ ನಡೆದ ಕ್ಷಣ.

ಮಾರನೆಯ ದಿನ ಎಂದಿನಂತೆ ದಿನಚರಿ, ರಾತ್ರಿ ಮಾತ್ರ ಮತ್ತೆ ಆ ಘಟನೆ ನಡೆಯದಂತೆ ದೂರದಲ್ಲಿದ್ದೆ. ನನ್ನ ಮನಸ್ಸಿನಾಳದಲ್ಲಿದ್ದ ನಿರ್ಧಾರ ಬಲವಾಯಿತು. ಇದ್ದಕ್ಕಿದ್ದಂತೆ ಮಾರನೆಯ ದಿನ ಬೆಂಗಳೂರಿಗೆ ಹೋಗಿ ಬರುತ್ತೇನೆ ಎಂದು ಹೇಳಿ, ಅಪ್ಪನ ಅಪ್ಪಣೆಗೆ ಬೇರೇನೋ ಕಾರಣ ನೀಡಿ ಹಳ್ಳಿಯ ನಂಟಿನ ಕೊಂಡಿಯನ್ನೇ ಕಿತ್ತುಕೊಂಡು ಬಂದೆ.

ಯಾವುದೋ ಒಂದು ಡಿಪಾರ್ಟ್‌ಮೆಂಟಲ್ ಸ್ಟೋರಿನ ಮ್ಯಾನೇಜರ್ ಆದೆ. ಸುಮಾರು ಹತ್ತು ವರ್ಷಗಳ ಕಾಲ ಕೆಲಸ ಮಾಡಿದ್ದೆ. ನನ್ನ ಯಜಮಾನ ಮಕ್ಕಳಿಲ್ಲದ್ದರಿಂದ ನನ್ನನ್ನೇ ಮಗನಂತೆ ಕಾಣುತ್ತಿದ್ದ. ಆಗಲೇ ನಾನು ಬೆಂಗಳೂರಿನ ಜೀವನಕ್ಕೆ ಸಂಪೂರ್ಣವಾಗಿ ಹೊಂದಿಕೊಂಡುಬಿಟ್ಟಿದ್ದೆ. ಹಳ್ಳಿ, ನನ್ನ ಸ್ಮೃತಿ ಪಟಲದಿಂದ ಎಂದೋ ದೂರಾಗಿತ್ತು. ನಗರದ ಸಂಜೆಗಳಲ್ಲಿ ಏಕಾಂಗಿತನ ನನ್ನನ್ನು ಒಮ್ಮೊಮ್ಮೆ ಕಿತ್ತು ತಿನ್ನುತ್ತಿತ್ತು. ಆ ಸಮಯದಲ್ಲಿ ಇವಳು ನನ್ನ ಸ್ನೇಹಿತೆಯಾದಳು, ನನ್ನ ಕತೆಯನ್ನೆಲ್ಲಾ ಕೇಳಿಯೂ ನನ್ನನ್ನು ಬಹಳವಾಗಿ ಪ್ರೀತಿಸಿ ಮದುವೆಯಾದಳು. ನನ್ನ ಅದೃಷ್ಟ ಚೆನ್ನಾಗಿತ್ತು. ನನ್ನನ್ನು ಮಗನಂತೆ ನೋಡಿಕೊಂಡ ನನ್ನ ಯಜಮಾನ, ತಾನು ಸಾಯುವಾಗ ತನ್ನೆಲ್ಲಾ ಆಸ್ತಿಗೆ ನನ್ನನ್ನೇ ಬಾಧ್ಯಸ್ಥನನ್ನಾಗಿಸಿದ.

ಜೀವನ ಚೆನ್ನಾಗಿದೆ, ಆಸ್ತಿಯಿದೆ, ಸಮಾಜದಲ್ಲಿ ಸ್ಥಾನವಿದೆ. ನನ್ನನ್ನು ಕಾಡುವಂತೆ, ಪರಿತಪಿಸುವಂತೆ ಮಾಡುವ ಯಾವ ವಿಚಾರಗಳೂ ಇಲ್ಲ. ಆದರೂ ಇಂದೇಕೋ ಈ ದಟ್ಟ ಮೋಡ, ಮೈ ಕೊರೆಯುವ ಚಳಿ, ಮಳೆಯ ಹನಿ ಮತ್ತೆ ಇವಳ ಬೆರಳು ನನ್ನ ಪಾದದ ಮೇಲೆ ಹರಿದಾಡುತ್ತಿದ್ದ ಹಾಗೆ ಅವಳೂ, ಅವಳ ಆ ಪುಟ್ಟ ಪಾದ ಮತ್ತೆ ಮತ್ತೆ ನನ್ನನ್ನು ಕಾಡುತ್ತಿಥೆ.

ನನ್ನನ್ನು ಮಗುವಿನಂತೆ ಪ್ರೀತಿಸುವ ಇವಳಿಗೆ ನಾನು ಏನನ್ನೂ ಹೇಳುವಂತಿಲ್ಲ. ಆದರೆ ಮಗುವಿನಂತಿದ್ದ ಅವಳನ್ನು ಅಂದು ಹಾಗೆ ಬಿಟ್ಟು ಬಂದ ಗಳಿಗೆ ನಾನು ಮನುಷ್ಯನಾಗಿದ್ದನೇ ಎಂದು ನನ್ನೊಡಲು ಪರಿತಪಿಸುತ್ತಿದೆ.

ಆದರೂ ಬರುವ ಮಾರಿಹಬ್ಬಕ್ಕೊಮ್ಮೆ ಊರಿಗೆ ಹೋಗಲೇಬೇಕೆಂದು ಗಟ್ಟಿ ನಿರ್ಧಾರ ಮಾಡಿದ್ದೇನೆ. ಅದನ್ನು ಇವಳಿಗೆ ಹೇಳದೆ ತೀರ್ಮಾನವನ್ನು ನನ್ನೊಡಲೊಳಗೆ ಹುದುಗಿಸಿ ಗಟ್ಟಿ ಕಣ್ಣು ಮುಚ್ಚುತ್ತೇನೆ. ಆದರೂ ಮತ್ತೆ ಮತ್ತೆ ಆ ಪುಟ್ಟ ಪಾದಗಳು ನನ್ನೆದೆ ಸೋಕಿದಂತಾಗಿ, ನಿಂತ ಮಳೆಯ ನಂತರ ತೊಟ್ಟಿಕ್ಕುವ ಮಳೆಹನಿಯಂತೆ ನನಗರಿಯದಂತೆ ಕಣ್ಣಹನಿ ದಿವಾನದ ಮೇಲೆ ಹಾಸಿದ ಹೊಸ ಹಾಸಿನಲ್ಲಿ ಒಂದಾಗುತ್ತದೆ.

■

(ಚೀನಿ ಸಣ್ಣ ಕಥೆಯೊಂದರ ನೆನಪು)

**ಸುಜಾತ ಕುಮಟಾ**



# ಹಂಚಿಕೆ

ಒಮ್ಮೆ ಇಬ್ಬರು ಮಾರ್ವಾಡಿಗಳು ಮುಂಬಯಿಗೆ ಪ್ರಯಾಣ ಮಾಡುತ್ತಿದ್ದರು. ರೈಲಿನಲ್ಲಿ ಅವರಿದ್ದ ಕಂಪಾರ್ಟ್‌ಮೆಂಟಿಗೆ ಅಪರೂಪದ ತರುಣಿಯೊಬ್ಬಳು ಸಾಲಂಕೃತಳಾಗಿ, ಆಭರಣ ಧರಿಸಿಕೊಂಡು, ಒಂದು ದೊಡ್ಡ ಸೂಟ್‌ಕೇಸ್ ಹಿಡಿದುಕೊಂಡು ಏರಿ ಬಂದಳು.

ಅವಳು ತಾವಿದ್ದಲ್ಲಿಗೆ ಬಂದ ತಕ್ಷಣವೇ ಮಾರ್ವಾಡಿಗಳಿಗೆ ತಬ್ಬಿಬ್ಬಾಯಿತು. ಅವಳು ಹಾಕಿಕೊಂಡ ಆಭರಣ, ಹಿಡಿದ ಸೂಟ್‌ಕೇಸ್ ಎಲ್ಲ ನೋಡಿ ಅವಳೊಬ್ಬ ಶ್ರೀಮಂತಳೆಂದು ಸಹಜವಾಗಿ ಗುರ್ತಿಸಿದರು. ಆಕೆ ಹತ್ತಾರು ಸ್ಟೇಷನ್ನು ದಾಟಿದ ಬಳಿಕ ಮುಂಬಯಿಯ ಉಪನಗರದ ನಿಲ್ದಾಣವೊಂದರಲ್ಲಿ ಸರಸರನೇ ಇಳಿದು ಹೋಗಿಬಿಟ್ಟಿದ್ದಳು. ಆದರೆ ಆಕೆ ಇಳಿವಾಗ ತಂದಿದ್ದ ದೊಡ್ಡ ಸೂಟ್‌ಕೇಸ್‌ನ್ನು ಬಿಟ್ಟೇ ನಡೆದಿದ್ದಳು. ಪರಪಾಟಾಗಿ ಇಳಿದು ಹೋಗಿರಬಹುದೆಂದು ಇಬ್ಬರೂ ಮಾರ್ವಾಡಿಗಳು ಅಂದುಕೊಂಡರು. ಆ ಸೂಟ್‌ಕೇಸನ್ನು ತಾವಿಳಿವಾಗ ಹೇಗಾದರೂ ಮಾಡಿ ತೆಗೆದುಕೊಂಡು ಹೋಗಬೇಕೆಂದು ಸಂಚು ಮಾಡಿಕೊಂಡರು ತಮ್ಮ ತಮ್ಮಲ್ಲೇ.



ತಮ್ಮ ತಮ್ಮ ಸೂಟ್‌ಕೇಸ್ ಜೊತೆ ಇಬ್ಬರೂ ಮಾರ್ವಾಡಿಗಳು ಯುವತಿ ಬಿಟ್ಟುಹೋದ ಸೂಟ್‌ಕೇಸಿಗೆ ಕೈ ಹಾಕಿ ಇಳಿದು 'ಇದು ನನ್ನದು' ಎಂದು ಪ್ಲಾಟ್‌ಫಾರ್ಮನಲ್ಲಿಯೇ ಜಗಳವಾಡತೊಡಗಿದರು. ಜನ ಘೇರಾಯಿಸಿದರು. ಇಬ್ಬರೂ ಪರಸ್ಪರ ಸೂಟ್‌ಕೇಸ್ ಜಗ್ಗಾಡುತ್ತಿರುವುದನ್ನು ಕಂಡ ರೈಲ್ವೆ ಪೋಲಿಸರು ಬಂದು ಅವರನ್ನು ಪೊಲೀಸ್ ಸ್ಟೇಷನ್ನಿಗೆ ಎಳೆದೊಯ್ದರು.

ಅಲ್ಲಿದ್ದ ಪೊಲೀಸ್ ಇನ್ಸ್‌ಪೆಕ್ಟರ್ ಇಬ್ಬರನ್ನೂ ಕೂಲಂಕಷವಾಗಿ ವಿಚಾರಿಸಿಕೊಂಡು, ಸೂಟ್‌ಕೇಸ್ ತನ್ನದೇ ಎಂದು ವಾದ ಮಾಡುತ್ತಿದ್ದವರನ್ನು ಕೊನೆಗೆ ಒಂದು ತೀರ್ಮಾನಕ್ಕೆ ಬರುವಂತೆ ಮಾಡುವಲ್ಲಿ ಯಶಸ್ವಿಯಾದರು. ಸೂಟ್‌ಕೇಸ್‌ನಲ್ಲಿ ಏನಿದೆಯೋ ಅದರ ಅರ್ಧಭಾಗವನ್ನು ಇಬ್ಬರೂ ಹಂಚಿಕೊಳ್ಳಬೇಕೆಂದು ಹೇಳಿದಾಗ ಇಬ್ಬರೂ ಅರ್ಧಭಾಗ ಆಭರಣ ತಮಗೇ ಸಿಗುತ್ತವಲ್ಲ ಎಂದು ಒಳಗೊಳಗೇ ಸಂತಸಪಟ್ಟರು.

ಇನ್ಸ್‌ಪೆಕ್ಟರ್ ಸಮ್ಮುಖದಲ್ಲಿ ಸೂಟ್‌ಕೇಸನ್ನು ತೆರೆದಾಗ ಮಾರ್ವಾಡಿಗಳು ಅಂದುಕೊಂಡಂತೆ ಆಭರಣಗಳಿರಲೇ ಇಲ್ಲ. ಬದಲಾಗಿ ಅಂದೇ ಹುಟ್ಟಿ ಸತ್ತು ಹೋದ ಶಿಶುವೊಂದಿತ್ತು. ಶಿಶು ಹತ್ಯೆ ಮಾಡಿದ ಆಪಾದನೆಗಾಗಿ ಇಬ್ಬರಿಗೂ ಸಜೆಯಾಯಿತು.

■

(ಕೇಳಿದ ಕತೆ)

ಮಹಾಬಲೇಶ್ವರ ಕಾಟ್ರಹಳ್ಳಿ



■ ಜಯಂತ

ಕಳೆದ ಮೂರು ದಶಕಗಳಿಂದ, ತಮ್ಮ ಸಾವಿರಾರು ಅದ್ಭುತರಮ್ಯ, ಪ್ರಯೋಗಶೀಲ ರೇಖಾಚಿತ್ರ, ಜಲ ವರ್ಣ ಚಿತ್ರಗಳಿಂದ ಕನ್ನಡ ಓದುಗರ ಕಲಾಭಿರುಚಿ





ಯನ್ನು ರೂಪಿಸುತ್ತಾ ಬಂದಿರುವ ಚಂದ್ರನಾಥ ಆಚಾರ್ಯ, ನಿಸ್ಸಂದೇಹವಾಗಿ ಕನ್ನಡ ಪತ್ರಿಕೋದ್ಯಮಕ್ಕೆ ಭಾಗ್ಯವಾಗಿ ಒದಗಿಬಂದ ಶ್ರೇಷ್ಠ ಕಲಾವಿದ.




ಗ್ರಾಫಿಕ್ಸ್


ವ್ಯಂಗ್ಯಚಿತ್ರ

'ಶಬ್ದಗಳು', 'ಹೂವುಹಾವು', 'ವಚನ ಭಾರತ' ಇಂಥ ನೂರಾರು ಧಾರಾವಾಹಿ ಕಾದಂಬರಿಗಳ ಓದುಗರು ಅವುಗಳ ವಿವರಗಳನ್ನು ಮರೆತಿರ ಬಹುದು, ಆದರೆ ಕಣ್ಣಲ್ಲಿ ಸ್ಥಿರವಾಗಿ ಉಳಿದ ಚಂದ್ರನಾಥರ ಮುಗ್ಧಮನೋಹರ ಚಿತ್ರಗಳ ನ್ನಲ್ಲ. ತಮ್ಮ ವಾರಿಗೆಯ ಇತರ ಎಲ್ಲ ಕಲೆಗಾರರಿ ಗಿಂತ ಭಿನ್ನವಾದ ಶೈಲಿಯನ್ನು ಮುಂಚಿನಿಂದಲೇ ರೂಢಿಸಿಕೊಂಡ ಚಂದ್ರನಾಥ, ನೋಟದ ರಮ್ಯ ತೆಗೆ ಚಿಂತನೆಯ ಬೆಳಕು ಬೆಸೆದ ಅಪ್ರತಿಮ ಪ್ರತಿ ಭಾವಂತ.

ಪೂರ್ವನಿಯೋಜಿತ ಆಕೃತಿಗಳಲ್ಲಿ ಕಸೂತಿ ತುಂಬುವುದಕ್ಕಿಂತ, ಕಥನವೊಂದರ ನಿಮಿತ್ತದಿಂದ ಉದ್ದೀಪನಗೊಂಡ ಪ್ರತಿಮೆಗಳಿಗೆ ಶರಣಾಗಿ, ಅನಿರೀಕ್ಷಿತ ತಿರುವುಗಳನ್ನು ಪಡೆಯುವುದು ಇವರ ವಿಧಾನ. ಹೀಗಾಗಿ ಚಂದ್ರನಾಥರ ಚಿತ್ರಿಕೆಗಳು ಕಥೆಯನ್ನು ವಿವರಿಸುವುದರ ಬದಲಿಗೆ, ಕಥನ ಕ್ಕೊಂದು ಹೊಸ ಅನುಭವವನ್ನು ಜೋಡಿಸುತ್ತವೆ. ರೂಹುಗಳನ್ನು ಸರಳಗೊಳಿಸದೆ, ಕಥೆಯನ್ನು ಬೇರೊಂದು ಮಜಲಿಗೆ ಹಿಗ್ಗಿಸುತ್ತವೆ.

ಪಾತ್ರವನ್ನು ಬರೆ ಕಣ್ಣು, ಮೂಗು, ಕಿವಿಗಳ ಒಂದು ಚಹರೆಯನ್ನಾಗಿ ನೋಡದೆ, ಒಂದು ಮಾನವೀಯ ಸಂದರ್ಭದಲ್ಲಿ ಮಿಡಿಯುವ ಆತ್ಮ ವಾಗಿ ಗ್ರಹಿಸುವ ಚಂದ್ರನಾಥ, ಪ್ರತಿ ಸಂಯೋಜನೆ ಯಲ್ಲಿ ತಮ್ಮ ಸರ್ವಸ್ವವನ್ನು ಧಾರೆಯೆರೆಯುತ್ತಾರೆ. ಬಗೆಬಗೆ ಹೂಕುಂಡಗಳು, ಚಿತ್ತಾರದ ಬೆಡ್‌ಲ್ಯಾಂಪ್ ಗಳು, ಮಳೆಯಲ್ಲಿ ನೆನೆಯುತ್ತಿರುವಂತಿರುವ ಎಲೆ, ಮರ, ಗಿಡ ಬಳ್ಳಿಗಳು-ಇಂಥ ಪೂರಕ ಪ್ರತಿಮೆ ಗಳಿಂದ ಪಾತ್ರಗಳಿಗೊಂದು ತೀವ್ರವಾದ ಅವಕಾಶ ವನ್ನು ಕಲ್ಪಿಸಿಕೊಡುತ್ತಾರೆ.

ಅದಕ್ಕೇ ಮತ್ತೆ, ಹೊಳೆವ ಮೂಗುಬೊಟ್ಟಿನ, ಚೂಪುಮೂಗಿನ, ಚಂದ್ರನಾಥರ ಕೋಮಲೆ ಯರು ಮುಟ್ಟಿದರೆ ಮಾಸುವಷ್ಟು ನವಿರಾಗಿರು ತ್ತಾರೆ, ಕಿರುಗಡ್ಡದ ಗಂಡಸರು ತಮ್ಮ ದಣಿವನ್ನು ಅಡಗಿಸುತ್ತಿರುವಂತೆ ಗೋಚರಿಸುತ್ತಾರೆ. ಸ್ವಪ್ನ ವಾಸ್ತವಗಳ ಬೆರಕೆಯಂತಿರುವ ಜಲವರ್ಣದ ಬೀಸುಗಳು ರಾಗದ ಸೊಲ್ಲುಗಳಂತೆ ಕಾಡುತ್ತವೆ.

1949, ಫೆಬ್ರುವರಿ 28ರಂದು ದಕ್ಷಿಣ ಕನ್ನಡದ ಪುತ್ತೂರಿನಲ್ಲಿ ಜನಿಸಿದ ಚಂದ್ರನಾಥ ಆಚಾರ್ಯರ ಪ್ರಥಮ ಗುರು ಅಜ್ಜ ಮಧೂರು ಮಹಾಲಿಂಗ ಆಚಾರ್ಯರು. ಶ್ರೇಷ್ಠಶಿಲ್ಪಿ ಗಳಾಗಿದ್ದ ಅವರು ಧರ್ಮಸ್ಥಳದ ಬೆಳ್ಳಿರಥವನ್ನು



ಇಲ್ಲಸ್ಟ್ರೇಷನ್

ಮಾಡಿದವರು, ಮಂಜಯ್ಯ ಹೆಗಡೆಯವರ ಬೃಹತ್ ತೈಲವರ್ಣ ಚಿತ್ರ ಬಿಡಿಸಿದವರು. ಇಂಥ ಅಜ್ಜನ ಸಮ್ಮುಖದಲ್ಲಿ ಬೆಳೆದ ಮಿತಭಾಷಿ ಹುಡುಗ ಚಂದ್ರನಾಥ, ಮೊದಲಿಗೆ ಶುರುಮಾಡಿದ್ದು ಶ್ರೀಗಂಧದ ಕೆತ್ತನೆ ಕೆಲಸ. ಕಲ್ಲಿನಲ್ಲೂ ಪುಟ್ಟ ಮೂರ್ತಿಗಳನ್ನು ಮಾಡಿದ್ದ ಈ ಹುಡುಗ ಸಾಬೂನು, ಚಾಕ್‌ಪೀಸುಗಳಲ್ಲೂ ಶಿಲ್ಪಾಕೃತಿ ಕೊರೆಯುವಷ್ಟು ಪ್ರಯೋಗಶೀಲ. ಅವನಿಗೆ ಶಿವರಾಮ ಕಾರಂತರ ಮನೆ ಸದಭಿರುಚಿಯ ಆಡುಂಬೊಲವಾಗಿತ್ತು.

ಹದಿಹರೆಯದಲ್ಲಿ ಚಂದ್ರನಾಥರನ್ನು ಅಪಾರವಾಗಿ ಸೆಳೆದದ್ದು ಕೆ.ಕೆ. ಹೆಬ್ಬಾರರು ಬಿಡಿಸಿದ ಕಾರಂತರ ತೈಲಚಿತ್ರ. ಕಾರಂತರ ಮನೆಗೆ ಆಗಾಗ ಧಾರವಾಡದಿಂದ ಬರುತ್ತಿದ್ದ ಗೀತಾಕುಲಕರ್ಣಿ (ಕಾರಂತರ ನಾದಿನಿ) ಮತ್ತವರ ಮಕ್ಕಳು, ಚಂದ್ರನಾಥ ಗೀಚಿದ ಚಿತ್ರಗಳನ್ನು ನೋಡಿ, ಖುಷಿಪಟ್ಟು ಕಾರಂತರಿಗೆ ತೋರಿಸಿದರು. ನೋಡಿ, ಹುಬ್ಬು ಹಾರಿಸಿ, ವಿಚಿತ್ರ ಮೆಚ್ಚುಗೆಯಿಂದ ತಲೆಯಲ್ಲಾಡಿಸಿದ ಕಾರಂತರು, ''ಇದೇನಿದು, ಸಲೂನಿನಲ್ಲಿ ಹಾಕಿದ ಫೋಟೋಗಳನ್ನು ನೋಡಿ ಸೂರ್ಯೋದಯ, ತೆಂಗಿನ ಮರ ಬರೆದಿದ್ದೀ. ಪ್ರಕೃತಿ ಚಿತ್ರ ಮಾಡಬೇಕೋ-ತೋಟಕ್ಕೆ ಹೋಗಿ ಕೂರು. ನಿಜವಾದ ಗಿಡಮರಗಳನ್ನು, ಸೂರ್ಯೋದಯವನ್ನು ನೋಡು, ಬದುಕನ್ನು ನೋಡಿ ಚಿತ್ರ ಬರಿ. ಚಿತ್ರ ನೋಡಿ ಅಲ್ಲ'' ಎಂದಿದ್ದು ಚಂದ್ರನಾಥರ ಕಲಾಜೀವನದ ಮೊದಲ take off point. ಗೀತಾ ಕುಲಕರ್ಣಿಯವರ ಹೆಣ್ಣುಮಕ್ಕಳಂತೂ ''ಏನೋ, ನೀನು ಬಿಡಿಸಿದ ಹುಡುಗಿಯರೆಲ್ಲ ಕ್ಷಮಾಳಂತೆ (ಕಾರಂತರ ಮಗಳು) ತೋರುತ್ತಾರಲ್ಲೋ'' ಎಂದು ಅಕ್ಕರೆಯಿಂದ ಛೇಡಿಸಿದಾಗಂತು, ಮೊದಲೆ ಶಹರದ ಅತಿಥಿಗಳನ್ನು ಕಂಡು ಕಂಪಿಸಿದ ಚಂದ್ರನಾಥರ ಕಾಲಡಿಯ ನೆಲವೇ ಬಾಯಿಬಿಡುತ್ತಿತ್ತು. ಆಗಲೇ ಅವರಿಗೆ ಸಾಹಿತ್ಯದಲ್ಲಿ, ಸುತ್ತಣ ಬದುಕಿನಲ್ಲಿ ತೀವ್ರವಾದ ತಾದಾತ್ಮ್ಯ ಆರಂಭವಾಯಿತು.



ಕಥೆಗಾಗಿ ಮಾಡಿದ ಚಿತ್ರ





ಜಲವರ್ಣ ಚಿತ್ರಗಳು

1967ರಲ್ಲಿ ಹನ್ನೆಸಾಡಿ ರಾಮಕೃಷ್ಣಭಟ್ಟರು (ಇವರು ಸಿಂಗಣ್ಣ ಹೆಸರಿನಲ್ಲಿ ಖ್ಯಾತ ವ್ಯಂಗ್ಯ ಚಿತ್ರಕಾರರಾಗಿದ್ದರು) ಚಂದ್ರನಾಥರ ಚಿತ್ರಗಳನ್ನು ನೋಡಿ, ಮೆಚ್ಚಿ, ಮಂಗಳೂರಿನ 'ನವಭಾರತ' ಪತ್ರಿಕೆಗೆ ಚಿತ್ರ ಬಿಡಿಸಲು ಪ್ರೋತ್ಸಾಹಿಸಿದರು. ಆಗ ಬೆಂಗಳೂರಿನಿಂದ ಬರುತ್ತಿದ್ದ 'ಮಲ್ಲಿಗೆ' ಮಾಸಪತ್ರಿಕೆಯ ನಾಡಿಗೇರ ಕೃಷ್ಣರಾಯರಿಂದ ಕರೆ ಬಂತು. ಹೀಗೆ ಮೀಸೆ ಚಿಗುರುವಾಗಲೇ ಬ್ರಶ್ಶನ್ನೂ ಚಿಗುರಿಸಿಕೊಂಡು ಚಂದ್ರನಾಥ ಬೆಂಗಳೂರಿಗೆ ಬಂದರು.

"ಎಷ್ಟು ಸಂಬಳ ಕೊಡಲಿ ಎಂದು ನಾಡಿಗೇರ ಕೃಷ್ಣರಾಯರು ಕೇಳಿದಾಗ, ಏನು ಹೇಳಲೂ ತೋಚದೇ 150/- ಎಂದೆ. ಪರವಾಯಿಲ್ಲ ಎಂದು ಸೇರಿಸಿಕೊಂಡರು. ಸಿಂಗಣ್ಣನವರು ನನಗೆ ಆಶೀರ್ವಾದದಂತೆ ಕೊಟ್ಟಿದ್ದ ಒಂದು ಬ್ರಶ್ಶು ಮತ್ತು ಇಂಡಿಯನ್ ಇಂಕ್‌ನ ಸೀಸೆ-ನನ್ನ ಪರಮ ಆಸ್ತಿಯಾಗಿತ್ತು. ಅವನ್ನು ಜೀವಕ್ಕಿಂತ ಹೆಚ್ಚಾಗಿ ಪ್ರೀತಿಸುತ್ತ 'ಮಲ್ಲಿಗೆ'ಯ ಎಲ್ಲಾ ಪುಟಗಳಿಗೆ ಚಿತ್ರಬರೆದೆ" ಎನ್ನುವ ಚಂದ್ರನಾಥ ಆಗ ತಮಗೇ ಗೊತ್ತಾಗದ ಹಾಗೆ 'ರೇಖಾಟನೆ'ಯಲ್ಲಿ ಒಂದು ಹೊಸ ಅಲೆಯನ್ನೇ ಆರಂಭಿಸಿದ್ದರು.



ಕಾದಂಬರಿಯ ಮುಖಪುಟ

'ಮಲ್ಲಿಗೆ'ಗೆ ರೇಖಕನಾಗಿ ಕೆಲಸ ಮಾಡು ತ್ತಿರುವಾಗಲೇ ಅವರು ಹಡಪದ್ ಅವರ ಕಲಾ ಶಾಲೆಗೆ ಸೇರಿದರು. ಆಗ ಗಾಂಧಿನಗರದಲ್ಲಿದ್ದ ಆ ಶಾಲೆಗೆ, ಪ್ರತಿದಿನ, ಭಾರತ ಟಾಕೀಸಿನ ಬಳಿ ಇರುವ 'ಮಲ್ಲಿಗೆ'ಯ ಕಾರ್ಯಾಲಯ ದಿಂದ ಸಿಟಿಮಾರ್ಕೆಟ್ ಮಾರ್ಗವಾಗಿ ನಡೆದೇ ಹೋಗಿಬರುತ್ತಿದ್ದರು. "ಅಲ್ಲಿಯ ತನಕ ಕೇವಲ ಆಂತರಿಕ ಪ್ರತಿಭೆ ಪ್ರೇರಣೆಗಳನ್ನು ನಂಬಿಕೊಂಡಿದ್ದ ನನಗೆ, ಕಲಾಶಾಲೆಯ ತರಬೇತಿ ತುಂಬಾ ನೆರವು ನೀಡಿತು. ಕಲೆಯ ವ್ಯಾಪ್ತಿ ಎಷ್ಟು ಶೈಲಿಯ ಸಾಧ್ಯತೆಗಳೆಷ್ಟು ಇವೆಲ್ಲ ನನಗೆ ತಿಳಿದದ್ದು ಅಲ್ಲೇ. ಕಣ್ಣಿಗೆ ಕಾಣದ ಸಂಗತಿಗ ಪ್ರಭಾವವನ್ನು ನಾನು ತಿಳಿದದ್ದೇ ಅಲ್ಲಿ."

ಸ್ವತಂತ್ರ, ಚೇತೋಹಾರಿ ಚಿತ್ರಗಳಿಂ ಎಲ್ಲರ ಗಮನ ಸೆಳೆದ ಚಂದ್ರನಾಥ ಪ್ರತಿಷ್ಠಿ ನಿಯತಕಾಲಿಕಗಳನ್ನು ಹೊಂದಿದ್ದ 'ಪ್ರಜಾವಾಣಿ' ಬಳಗವನ್ನು ಸೇರಿಕೊಂಡರು. ಅಲ್ಲಿ ಎಸ್.ರಮೇಶ್



ಎನ್ನುವ ಚಂದ್ರನಾಥ, ಇಂಗ್ಲಿಷ್ ಅಕ್ಷರಗಳಲ್ಲಿರುವ ನೇರ ಮತ್ತು ಗೋಲ ಆಕಾರಗಳ ಸಾಂಗತ್ಯವನ್ನು ಗಮನಿಸಿ ಕನ್ನಡ ಗೋಲ ಅಕ್ಷರಗಳಲ್ಲೂ ನೇರ ರೇಖೆಗಳನ್ನು ಅಳವಡಿಸಿ ತಮ್ಮದೇ ಆದ ಹೊಸ ಶೈಲಿಯನ್ನು ರೂಢಿಸಿದರು. ಶಬ್ದದ ತಲೆಗಟ್ಟುಗಳ ಬದಲಾವಣೆಗೆ ಮೊದಮೊದಲು ಸಂಪಾದಕ ವೈಎನ್ಕೆ ಗುಮಾನಿ ವ್ಯಕ್ತಪಡಿಸಿದರೂ, ಒಂದು ತಿಂಗಳಲ್ಲೇ ಅಕ್ಷರಗಳು ಜನಪ್ರಿಯವಾದವು. ನಾಡಿನಾದ್ಯಂತ ಬೋರ್ಡುಗಳ ಮೇಲೆ, ಆಟೋಗಳ ಹಿಂದೆ, ವಿದ್ಯಾರ್ಥಿಗಳ ನೋಟ್ ಪುಸ್ತಕಗಳಲ್ಲಿ, ಸಿನಿಮಾ ಸ್ಲೈಡುಗಳಲ್ಲಿ ಚಂದ್ರನಾಥರ ಶೈಲಿಯ ಅಕ್ಷರಗಳು ಕಂಡುಬರತೊಡಗಿದವು.

ಜಿ.ಕೆ. ಸತ್ಯರಂಥ ನುರಿತ ಕಲಾವಿದರ ಸಹಯೋಗ ದೊರಕಿತು. ''ಎಸ್. ರಮೇಶ್‌ರ ಮನುಜಾಕೃತಿಗಳು ಅಪ್ರತಿಮವಾದವು. ಕನ್ನಡ ಲಿಪಿಗಾರಿಕೆ (ಅಕ್ಷರ ಶೈಲಿ)ಯಲ್ಲಂತೂ ರಮೇಶರದು ಎತ್ತಿದ ಕೈ. ಜಿ.ಕೆ. ಸತ್ಯರ ಚಂದದ ಚಿತ್ರಗಳು ಅದಾಗಲೇ ಅಪಾರ ಜನಪ್ರಿಯತೆಯನ್ನು ಗಳಿಸಿದ್ದವು. ಇಂಥ ಕಲಾವಿದರ ಸಹವಾಸ ನನಗೊಂದು ಸ್ಫೂರ್ತಿಕೊಟ್ಟಿತು. ಹೊಸ ಪ್ರಯೋಗಗಳಿಗೆ ಕುಮ್ಮಕ್ಕು ನೀಡಿತು''

ಎನ್. ನರಸಿಂಹಯ್ಯ ಮತ್ತು ಜಿಂದೆ ನಂಜುಂಡಸ್ವಾಮಿಯವರ ಕಾದಂಬರಿಗಳಿಂದ ಪುಸ್ತಕಗಳ ರಕ್ಷಾಪುಟದ ಚಿತ್ರಗಾರಿಕೆಗೆ ಆರಂಭವಾಯಿತು. ಎಂಭತ್ತರ ದಶಕದಲ್ಲಿ 'ಸುಧಾ'ದ ಮುಖಪುಟ ವಿನ್ಯಾಸದ ಶೈಲಿಯಲ್ಲಿ ವಿಶಿಷ್ಟ ಪ್ರಯೋಗಗಳನ್ನು ಕೈಗೊಂಡರು. ಓದುಗರ ಕಲಾಭಿರುಚಿಯನ್ನು ಮೆಲ್ಲಗೆ, ಬದಲಾಯಿಸುವಂತೆ, ಮೂರ್ತ ಚಿತ್ರಗಳ ಜತೆ ಸರಳ

ವಿಭಿನ್ನ ಶೈಲಿಯಲ್ಲಿ ಮಾಡಿದ 'ಇಲ್ಲಸ್ಟ್ರೇಷನ್ಸ್'








ಸುಧಾ ಮುಖಚಿತ್ರ - 'ವುಡ್‌ಕಟ್'



'ಬುಲೆಟಿನ್ ಆಫ್ ಸೈನ್ಸ್' ಮುಖಚಿತ್ರ

ಅಮೂರ್ತ ಚಿತ್ರಗಳನ್ನೂ ಬರೆಯತೊಡಗಿದರು. 'ಚಂದ್ರನಾಥ್ ಶೈಲಿ' ಎಷ್ಟೊಂದು ಜನಪ್ರಿಯವಾಯಿತೆಂದರೆ, ಸಹಜವಾಗೇ ಹೊಸ ಕಲಾವಿದರ ಮೇಲೆ ಅದರ ಪ್ರಭಾವ ಗಾಢವಾಗತೊಡಗಿತು. ಪತ್ರಿಕೆಗಳಿಗೆ ಬರೆಯುವ ಸಾಹಿತಿಗಳು "ನಮ್ಮ ಕತೆ, ಕಾದಂಬರಿಗಳಿಗೆ ಚಂದ್ರನಾಥ ಚಿತ್ರಬರೆಯಲಿ" ಎಂದು ಗುಟ್ಟಾಗಿ ಆಶಿಸುವಂತಾಯಿತು. ಕೆಲವರಂತೂ ಸಂಪಾದಕರಲ್ಲಿ ಬರೆದು ವಿನಂತಿಸಲೂತೊಡಗಿದರು.

ಸತತವಾಗಿ ಐವತ್ತು ವರುಷ ಅಮೆರಿಕೆಯ 'ಸ್ಯಾಟರ್‌ಡೇ ಈವನಿಂಗ್ ಪೋಸ್ಟ್'ನ ಮುಖ ಪುಟವನ್ನು ಬಿಡಿಸಿದ ನಾರ್ಮನ್ ರಾಕ್ವೆಲ್ ಚಂದ್ರನಾಥರ ಅಚ್ಚು ಮೆಚ್ಚಿನ ರೇಖಕ. "ಅವನ ಪ್ರತಿ ಮುಖಪುಟದ ಹಿಂದೆ ಇರುವ ಚಿಂತನೆ, ವಿವರ ಮತ್ತು ಪ್ರಯೋಗ ಶೀಲತೆ ಎಲ್ಲ ಪತ್ರಿಕಾ ಕಲಾವಿದರಿಗೆ ಆದರ್ಶವಾಗಬೇಕು" ಎನ್ನುತ್ತಾ ರವರು.

1979ರಲ್ಲಿ ಕೆ.ಕೆ. ಹೆಬ್ಬಾರರ ಒತ್ತಾಯಕ್ಕೆ ಮಣಿದು ಚಂದ್ರನಾಥ ಕಲಕತ್ತಾದ 'ಶಾಂತಿ
ಕೇತನ'ಕ್ಕೆ ಮೂರು ವರುಷಗಳ ವಿಶೇ
ಅಧ್ಯಯನಕ್ಕಾಗಿ ಹೋದರು. ಅಲ್ಲಿ ಸೋವ
ನಾಥ ಹೋರ್, ಕೆ.ಜಿ. ಸುಬ್ರಮಣ್ಯನ್, ಸನತ
ಕರ್ ಮುಂತಾದ ಹಿರಿಯ ಕಲಾವಿದರಿಂದ ನ
ಗೊಂದು ಹೊಸ ದರ್ಶನ ಸಿಕ್ಕಿತು. ವ್ಯಕ್ತಿಯಾ
ಬೆಳೆಯದೆ, ಕಲೆಗಾರನಾಗಿ ಬೆಳೆಯುವ
ಸಾಧ್ಯವಿಲ್ಲ ಎಂಬ ಅರಿವು ಮೂಡಿತು. ಚಿತ್ರ
ವೊಂದನ್ನು ಬರೆಯುತ್ತ ಹೋಗುತ್ತೇವೆ. ಆದ
ಅದನ್ನು ಯಾವ ಘಟ್ಟದಲ್ಲಿ ನಿಲ್ಲಿಸಬೇಕ
ಎನ್ನುವುದೇ ಮಹತ್ವದ್ದು. ಚಿತ್ರಗಾರನಿಗೆ ಸಂಯಮ
economy ಬ
ಮುಖ್ಯ. ಶಾಂತಿನಿ ಕೇತ
ದಿಂದ ಬಂದ ನಂತ
ಚಂದ್ರನಾಥರ ಶೈಲಿ
ಉದ್ವಾಸ್ತವ'
(Surrealism)ಯ
ದೀಕ್ಷೆ ಆಯಿತು. ಬಂಗ
ಲದ ಸುಮೀರ್ ಮೊಂಡ
ಮತ್ತು ಮಹಾರಾಷ್ಟ್ರ
ರವಿ ಪರಾಂಜ
ಚಂದ್ರನಾಥರ ಇಷ್ಟ
ಕಲಾವಿದರು.

ತೈಲವರ್ಣಚಿತ್ರ





ಛಾಯಾಚಿತ್ರ



ತೈಲವರ್ಣ ಚಿತ್ರ

ಸಾವಿರಾರು ಪುಸ್ತಕ ಗಳಿಗೆ ಉತ್ಕೃಷ್ಟ ರಕ್ಷಾಪುಟ ವಿನ್ಯಾಸ ಮಾಡಿರುವ ಚಂದ್ರನಾಥ, ಮನಸ್ಸು ಮಾಡಿದ್ದರೆ, ಅದೇ ಕಲೆಗಾರಿಕೆಯನ್ನು ಕ್ಯಾನ್‌ವಾಸಿನ ಮೇಲೆ ತೋರಿಸಿ ಪೇಂಟಿಂಗ್ ಮಾಡಿದ್ದರೆ ಆ ಮಾರ್ಗದಲ್ಲಿ ಏನೆಲ್ಲ ಸಾಧಿಸಬಹುದಾಗಿತ್ತು. "ಆ ಮಾರ್ಗದಲ್ಲಿ, ಕೆಲವೇ ಪೇಂಟಿಂಗ್ ಮಾಡಿ, ತುಂಬಾ ದುಡ್ಡು ಮಾಡುತ್ತಿದ್ದೇನೋ ನಿಜ. ಆದರೆ, ಆಗ ಹಣವುಳ್ಳ, (ಎಷ್ಟೋ ಸಲ ಕಲಾಭಿರುಚಿ ಇಲ್ಲದ) ಕೆಲವೇ ಕಲಾವರ್ತಕರಿಗಷ್ಟೇ ನನ್ನ ಕಲೆ ಸೀಮಿತವಾಗುತ್ತಿತ್ತು. ಈಗ ಹಾಗಲ್ಲ, ಕಳೆದ ಮೂವತ್ತು ವರುಷಗಳಿಂದ ಪ್ರತಿವಾರ, ಪ್ರತಿ ಸಂಚಿಕೆಯಲ್ಲೂ ಲಕ್ಷೋಪಲಕ್ಷ ಜನರನ್ನು ತಲುಪುತ್ತಿದ್ದೇನೆ. ಒಳ್ಳೆಯ ಸಾಹಿತ್ಯ, ಹೇಗೆ ಪತ್ರಿಕೆಗಳ ಮೂಲಕ ಜನರಿಗೆ ತಟ್ಟುತ್ತೋ ಅದೇ ರೀತಿ ಕಲೆಯೂ ತಲುಪುತ್ತದೆ, ಕಲಾಭಿರುಚಿಯನ್ನು ಪೋಷಿಸುತ್ತದೆ. ಇದೇ ನನ್ನ ಸಮಾಧಾನ." ಎನ್ನುವ ಚಂದ್ರನಾಥ್ ಫೋಟೋಗ್ರಫಿಯಲ್ಲೂ ಆಸಕ್ತರು.

"ಚಂದಮಾಮದ ಚಿತ್ರಾ, ಶಂಕರ್, ಎಂ.ಟಿ.ವಿ. ಆಚಾರ್ಯ, ವಪಾ ಇವರುಗಳ ಚಿತ್ರಗಳೇ ನನ್ನ basic imagery ಯನ್ನು ರೂಪಿಸಿದವು. ಕೇವಲ ಮೂರ್‍ನಾಲ್ಕು ಬಣ್ಣಗಳನ್ನು ಬಳಸಿ ಬ್ಲಾಕ್‌ವಿಧಾನದಲ್ಲಿ ಅವರು ಸಾಧಿಸಿದ ಪರಿಣಾಮ ಅದ್ಭುತವಾದದ್ದು. ಈಗ ಕಂಪ್ಯೂಟರ್ ಗ್ರಾಫಿಕ್‌ಗಳು ಬಂದಮೇಲೆ ಕಲೆ ಅನ್ನೋದು ಸಲೀಸು ಎನ್ನುವ ಭ್ರಮೆ ಬಂದುಬಿಟ್ಟಿದೆ. ಬಿಡಿಸುವ ಕೈಗೂ, ಮನಸ್ಸಿಗೂ ನಡುವೆ ಅಭೇದ್ಯವಾದ ಸಂವೇದನಾಶೀಲವಾದ ತಂತು ಇರಬೇಕು. ಈಗ ಅದೇ ಇಲ್ಲವಾಗಿದೆ ಅನಿಸುತ್ತಿದೆ. ಕಲಾಶಾಲೆಗಳ ಪಠ್ಯಕ್ರಮಗಳಲ್ಲೂ ವಿಚಿತ್ರ ಪಲ್ಲಟಗಳಾಗಿವೆ. ಮುಖ್ಯವಾಗಿ ಕಲಾ ವಿದನಿಗಿರಬೇಕಾದ Restlessness, ವ್ಯಾಮೋಹ, ಕಾಣದ್ದನ್ನು ಹಿಡಿಯುವ ತುಡಿತ.... ಇವು ಕಡಿಮೆ ಆಗತೊಡಗಿವೆ."

ಮಗಳು ಆಕಾಂಕ್ಷಾ, ಮಗ ಅನನ್ಯ, ಮಡದಿ ರೋಹಿಣಿ ಇವರ ಜತೆ, 'ಪ್ರತೀಕ'ದಲ್ಲಿ ತಮ್ಮ ಅಗಣಿತ ಕಲಾಕೃತಿಗಳು ಮತ್ತು ನೆಚ್ಚಿನ ನಾಯಿ 'ಕ್ಯಾಂಡಿ'ಯೊಂದಿಗೆ ನೆಲೆಸಿರುವ ಚಂದ್ರನಾಥ ಆಚಾರ್ಯ ಕೆಲ ತೈಲವರ್ಣ ಚಿತ್ರಗಳ ಪ್ರದರ್ಶನಗಳನ್ನು ಮಾಡಿದ್ದಾರೆ. ಈಗ ಮಹಾಭಾರತದ ಬೃಹತ್ತಾದ ತೈಲವರ್ಣಚಿತ್ರವೊಂದನ್ನು ರಚಿಸುತ್ತಿದ್ದಾರೆ.

ಹೊಸ ತಲೆಮಾರಿನ ಎಲ್ಲ ಕಲಾವಿದರಿಗೆ ಹಿರಿಯಣ್ಣನಂತೆ ಪ್ರೇರಕ ಶಕ್ತಿಯಾಗಿರುವ ಚಂದ್ರನಾಥರ ಚಿತ್ರಗಳು ಎಂದಿಗೂ ತಮ್ಮ ಹೊಳಪು, ಸತ್ವ, ಚೈತನ್ಯವನ್ನು ಕಳೆದುಕೊಳ್ಳಲಾರವು. ಏಕೆಂದರೆ ಬದುಕಿನಲ್ಲಿ ತೀವ್ರ ಆಸಕ್ತಿ, ಸೂಕ್ಷ್ಮಗ್ರಹಿಕೆ, ಅತ್ಯಾಧುನಿಕ ಸಂವೇದನೆ ಅವರ ಸಹಜಗುಣಗಳಾಗಿವೆ. ಅವರ ಚಿತ್ರಗಳು ಕ್ಯಾನ್‌ವಾಸಿನಿಂದಲ್ಲ, ಬದುಕಿನಿಂದ ಮೂಡಿಬರುತ್ತವೆ.

■

ಶಬ್ದತೀರ



# ಒಂದು ಒಲೆಯ ಸುತ್ತ

ಮಿಂಚು, ಮಳೆ, ಗುಡುಗು, ಕೇವಲ ಶಬ್ದಗಳಲ್ಲ. ಪ್ರತಿಸಲವೂ ಇವುಗಳ ಜತೆಗೊಂದು ಅಸ್ಪಷ್ಟ
ಅನಿರ್ವಚನೀಯ ಅನುಭವ. ಕಾಣದ ಕಂಪಿನ ಕರೆ. ಗುಡುಗು ಮಳೆ ಅಂದರೆ ಸಾಕು, ಎಂಥ ದಾರುಣ
ಬಾಲ್ಯದ ನೆನಪಿಗೂ ಹಿತದ ಭಾಸ. ತೊಯ್ದು ತೊಪ್ಪಡಿಯಾಗಿ ತೊಟ್ಟಿಕ್ಕುವ ಪಿಸ್ತದಲ್ಲಿ ಬೆಚ್ಚಗಿದ್ದದು ಒಲೆ ಮಾತ್ರ.

ಹೊರಗೆ ಒಳಗೆ ಸುರಿಯುವ ಧಾರೆ. ಪೋಸ್ಟರು, ಗಾಳಿಪಟ, ಕಡ್ಡಿಪೆಟ್ಟಿಗೆ ಎಲ್ಲ ಒಟ್ಟಿಗೇ ಒದ್ದೆ.
ಬೆಚ್ಚಗಿದ್ದದ್ದು ಒಲೆ ಮಾತ್ರ. ಪಿಳಿ ಪಿಳಿ ಕಣ್ಣಲ್ಲಿ ಗಂಜಿಗೆ ಕಾದು ಕೂತ ಪುಟಾಣಿ ಮೂರ್ತಿಗಳು. ಯಾವ
ಗಳಿಗೆಯಲ್ಲಿ ಇವು ಭಗ್ನಗೊಂಡವು? ಊರ ಹೊರಗೂ ಇದ್ದಾವೆ. ಗುಳೆ ಕಿತ್ತವರು ಬಿಟ್ಟುಹೋದ ಕಪ್ಪ
ಮುರುಕು ಒಲೆಗಳು, ಮಳೆಗೆ ತೊಯ್ಯುತ್ತ.

ಒಂದು ಒಲೆ ಸಾಕು - ಇಡೀ ಕುಟುಂಬವನ್ನು ಸನಿಹಕ್ಕೆ ಸೆಳೆದು ಕೂರಿಸಲು. ಅದಕ್ಕೆ ತಾಗಿ ಒಂದು ಕೈ
ಒಂದು ಸಪುಟು, ಒಂದು ಬಳೆ, ಒಂದು ಹೂವು. ಎಲ್ಲರಿಗೆ ಸಾಕು ಒಂದು ತಾಟು. ಕುಕ್ಕರುಗಾಲಲ್ಲಿ ಕೂತ
ಕತ್ತಲು ಕಣ್ಣುಗಳಲ್ಲಿ ಫಳಫಳ ಹೊಳೆವ ಒಲೆ.

ಎಲ್ಲ ಋಣಗಳ ಮೂಲಗಂಗೋತ್ರಿ. ಒಟ್ಟಿಗೆ ಕೂತು ಹಂಚಿಕೊಂಡ ತುತ್ತು, ರೊಟ್ಟಿಚೂರು, ಎತ್ತಿ
ಗಂಟಲಲ್ಲಿಳಿಸಿದ ಗಟಗಟ ತಿಳಿ, ರುಚಿಗಟ್ಟಾದ ಒಂಟಿ ಅಗುಳು. ಮೊದಲು ಉಣ್ಣಲಿ ಮಕ್ಕಳು.

ನಾಗಾಲೋಟದ ಸರಭರದಲ್ಲಿ ಆರಿಹೋಯಿತೆ ಒಲೆ, ಅದರ ಸುತ್ತಣ ಕಾವು? ಮನೆಯಲ್ಲೀಗ ಎಷ್ಟ
ಮಂದಿ. ಯಾರು ಯಾವಾಗ ಬರುತ್ತಾರೆ, ಪ್ಲೇಟು ಹಿಡಿದು ಮತ್ತೆಲ್ಲಿ ಮರೆಯಾಗುತ್ತಾರೆ? ಒಟ್ಟಿಗೇ ಕೂತು
ಉಂಡಿದ್ದು ಎಂದು, ಒಟ್ಟಿಗೇ ಕೂತರೂ ತಿಂದದ್ದು ಏನು? ಟೀವಿಯಲ್ಲಿದ್ದ ಪಾತ್ರಗಳನ್ನೆ
ಸಂಭಾಷಣೆಗಳನ್ನೇ? ತೊಡೆಯಮೇಲೆ ಉಣಿಸುವ ತಾಯಿಯೂ-ತುರುಕುತ್ತಾಳೆ ತುತ್ತನ್ನು ಮಗುವಿನ
ಕಣ್ಣಗೆ, ಟೀವಿ ನೋಡುತ್ತ.

ನಮ್ಮ ಪ್ರಕಾಶನಿಗೆ ಬೆಂಡೇಕಾಯಿ ಇಷ್ಟ. ನಿಮ್ಮ ನಿಮ್ಮಿಗೆ ಹುರಿದ ಮೀನು ಇಷ್ಟ. ದೊಡ್ಡಪ್ಪನಂತೂ
ಊಟದ ಜತೆ ಕೊಡಗಟ್ಟಲೆ ನೀರು ಕುಡಿಯುವನು. ಮಳೆಗಾಲದ ಗಂಜಿಗೆ ನೆಂಜಿಕೊಳ್ಳಲು ರಾತ್ರಿಯ
ತಂಗಳು ಬಸಳೆ ಬಿರಕಿಯ ಹುಳಗವೇ ಬೇಕು. ಒಲೆಯ ಬದಿ ಬೆಕ್ಕಿನ ಕಣ್ಣು ತಪ್ಪಿಸಿಯೂ ಬೆಚ್ಚಗಿದೆ ಅದು
ಬೋಗುಣಿಯಲ್ಲಿ. ಪೋರ ಪ್ಲೇಟಿನಲ್ಲಿ ಬಿಟ್ಟ ಚೂರು ಪಲ್ಯವನ್ನು ಅಪ್ಪನೇ ಹಕ್ಕಿನಿಂದ ಚಪ್ಪರಿಸಿ
ಮೆಲ್ಲಬೇಕು.

ಈಗ ಯಾರ ಇಷ್ಟಾನಿಷ್ಟ ಯಾರಿಗೂ ಗೊತ್ತಾಗುತ್ತಿಲ್ಲ. ಮೆನ್ಯೂಕಾರ್ಡು ಹಿಡಿದು, ಮಂಕು ದೀಪಗಳ
ಸೈಟ್‌ಬಸ್ಲಿನಂಥ ಹೋಟಲಿನಲ್ಲಿ ಕೂತವರ ಮುಖಗಳೇ ಸರಿಯಾಗಿ ಕಾಣುತ್ತಿಲ್ಲ. ನಮ್ಮ ನವ
ಆಯ್ಕೆಯನ್ನು ಆರ್ಡರು ಮಾಡಿ ಕಾಲ್ಚಾಚಿ ಕೂತ ನಂತರ - ಅದೆಂಥ ವಿಚಿತ್ರ ಮೌನ. ಎಷ್ಟು ಯುಗಗಳ
ನಂತರ ಬರುತ್ತದೆ ತಿನಿಸುಗಳ ಟ್ರೇ.

ಆಗ ಎಲ್ಲರ ಮೊಗದ ಮೇಲೆ ಅದೆಂಥ ಹುಂಬ ನಗೆ. ಕಣ್ಣು, ಬಾಯಿ, ಮನಸುಗಳ ಲಯ ತಪ್ಪಿದ ಊಟದ ಆಟ. ''ಚೆನ್ನಾಗಿದೆಯಲ್ಲವೆ?'' ''ಚೆನ್ನಾಗಿದೆಯಲ್ಲವೆ?'' ಮತ್ತೆ ಮತ್ತೆ ಬಾಯ್ಬಿಟ್ಟು ಹೇಳಿ, ತೆತ್ತ ಹಣದ ವಸೂಲಿಯನ್ನು ಸುಳ್ಳೇ ಖಾತರಿಪಡಿಸಿಕೊಳ್ಳುವ ತೊದಲು. ಪ್ರತಿಯೊಬ್ಬನಿಗೂ, ಇನ್ನೊಬ್ಬನ ಪ್ಲೇಟಿನ ತಿಂಡಿ ಹೆಚ್ಚು ಆಕರ್ಷಕ. ಒಟ್ಟಾರೆ ಈ ಜಿಹ್ವಾಕಾಳಗ ಮುಗಿದು, ಎಲ್ಲರೂ ಬಡೇಸೋಪನ್ನು ರಣವೀಳ್ಯದಂತೆ ಜಗಿಯುವಾಗ, ಚಿತ್ರಗುಪ್ತನ ಹಾಗೆ ಕನ್ನಡಕ ಧರಿಸಿ ಬಿಲ್ಲು ಪರಿಶೀಲಿಸುವ ಮನೆಯೊಡೆಯ. ಅವನನ್ನು ಪೆದ್ದು ಅಭಿಮಾನದಿಂದ ನೋಡುವ ಒಡತಿ.

'ಪಲ್ಲವಿಗೆ ಟೀಚಿಂಗ್ ಜಾಬ್ ಬೇಡಾಂತೆ, ಯಾಕೆ ಅಂತ ಹೇಳ್ತಾ ಇಲ್ಲ. ನಿಮಗೆ ಭಾರ ಆದ್ರೆ ಮನೆಬಿಟ್ಟು ಹೋಗ್ತೀನಿ ಅಂತ ಬೆದರ್‌ಸ್ತಾ ಇದ್ದಾಳೆ. ನೀನಾದ್ರೂ ಹೇಳೇ.'

'ಕುಡಿಯದೇ ಸೋಬರ್ ಆಗಿ ಅಪ್ಪ ಮನೆಗೆ ಬಂದ್ರೇ ತಾನೆ, ಅವರ ಜತೆ ಮಾತಾಡಬಹುದು.'

ಯಾಕೆ ಎಲ್ಲ ಮನೆಗಳಲ್ಲಿ ತೆಪ್ಪಗೆ ಭಯ ಹುಟ್ಟಿಸುವಂತೆ ಪರದೆಗಳು ತೂಗುತ್ತವೆ. ದೀಪಗಳು ಮಂಕಾಗಿವೆ. ಅಕಾಲದಲ್ಲಿ ನಿದ್ರೆಹೋದ ಜೀವಕ್ಕೆ, ಎಲ್ಲೋ ದೂರ, ಯಾವುದೋ ಆಟದಲ್ಲಿ ಕೇಕೆ ಹಾಕುವ ಮಕ್ಕಳ ಚಿಲಿಪಿಲಿ - ಬೇರೆ ಲೋಕದಿಂದ ಬಂದಂತೆ ಯಾಕೆ ಕೇಳಿಸುತ್ತದೆ.

ಭೋರೆಂದು ಸುರಿಯುತ್ತಿದೆ ಮಳೆ. ತೊಯ್ಯುವ ಮನಸ್ಸಿಲ್ಲ. ಒಳಗೇ ಬರುತ್ತಿದೆ ಝುಡಿ. ಕಿಟಕಿ ಮುಚ್ಚಿ. ಬೀದಿ ದೀಪದ ಬೆಳಕು ಗೆರೆಗೆರೆಯಾಗಿ ಶುಭ್ರಗೊಳ್ಳುತ್ತಿದೆ. ತೊಯ್ದು ತೊಪ್ಪಡಿಯಾಗಿ ನಿಂತವರು, ನಮ್ಮವರೇ. ಕತ್ತಲಲ್ಲಿ ಮುಖತೋರುತ್ತಿಲ್ಲ. ಬಾಗಿಲು ತೆರೆಯಿರಿ. ಯಾಕೆ ತೊರೆದು ಹೋದಿರಿ, ಇಷ್ಟು ಕಾಲ ಎಲ್ಲಿದ್ದಿರಿ- ಎಂದೆಲ್ಲ ಕೇಳುವುದು ಬೇಡ.

ಆ ಹಳೆ ಒಲೆಯ ಬಳಿ ಸಾಗುವಾ. ಅದರೊಳಗೆ ಕಸಕಡ್ಡಿ, ಪುರುಗು ಸೇರಿಸಿ ಮೆಲ್ಲಗೆ ಕಡ್ಡಿಗೀರುವಾ. ಭಗ್ಗೆಂದ ಈ ಅಗ್ನಿಕುಂಡಕ್ಕೆ ಎಷ್ಟೊಂದು ಮೊಗಗಳು ಬೆಳಗಿವೆ. ಮಾತಿಲ್ಲದೆಯೂ ಎಲ್ಲ ತಿಳಿಯುತ್ತಿದೆ. ಎದೆಯಲ್ಲೇನೋ ಬಿಸಿ ಬಿಸಿ ಕರಗುತ್ತಿದೆ.

ಚೀನಾದ ಶಿಕಾನ್ ಹಳ್ಳಿಯಲ್ಲೊಬ್ಬ ಬಡ ಮಾಸ್ತರನಿದ್ದ. ಅವನಿಗೆ ಅವನೂರಿನ ನದಿಯ ಅಳಿವೆಯಲ್ಲಿ ಸಿಗುವ ಚಿನ್ ಎಂಬ ಸೋವಿ ಕಿರುಮೀನು ತುಂಬಾ ಇಷ್ಟ. ಅದಿಲ್ಲದೆ ಅವನ ಊಟವಿಲ್ಲ. ಬುದ್ಧಿವಂತನಾಗಿದ್ದ ಅವನಿಗೆ ದೇಶದ ರಾಜಧಾನಿ ದೂರದ ಪೀಕಿಂಗಿನಲ್ಲಿ ಅತಿದೊಡ್ಡ ಕೆಲಸ ಸಿಕ್ಕಿತು. ದೊಡ್ಡ ಬಂಗಲೆ, ಕಾರು, ಆಳುಕಾಳುಗಳ ಆ ಹುದ್ದೆಯಲ್ಲಿದ್ದವ - ತನ್ನ ಊರಿನ ಸೋವಿ ಕಿರುಮೀನು ಸಿಗದೇ ಮಂಕಾದ. ತನ್ನ ಕಾರ್ಯಕಲಾಪಗಳಲ್ಲಿ ಆಸ್ಥೆ ಕಳಕೊಂಡ. ಒಂದು ದಿನ ಎಲ್ಲಾ ಬಿಟ್ಟು ಮರಳಿ ಊರಿಗೆ ಬಂದು, ತನ್ನ ಮೀನು ತಿನ್ನುತ್ತ, ಮಾಸ್ತರಿಕೆಯನ್ನು ಮುಂದುವರೆಸಿ ಸುಖದಿಂದ ಬಾಳಿದ.

ಒಲೆಯ ಕಾವಿನ ಪ್ರಭಾವಳಿ, ಎಲ್ಲ ಮನೆಗಳ ಕಾಯಲಿ. ಋಣಾನುಬಂಧಗಳ ಉಳಿಸಲಿ.

**ಜಯಂತ ಕಾಯ್ಕಿಣಿ**



# ತೆರೆದ ಅಂಚೆ

ನಿಸರ್ಗಮಂಡಲದೊಡಲಲಿ ಅಡಗಿಹೆ
ಹುಡುಕುವೆ ಭಾವನಾ ಶಬ್ದ ಮುಖಿ॥
ನಿನ್ನ ಕತೆಗಳ ಶೋಧಿಸಿ ಬರೆಸಿಹೆ
ನನ್ನಯ ಭಾವನಾ ನಾನೇ ಸುಖಿ॥

**ಹಾವೇರಿ** **ಬಸವರಾಜ ಅಂಗಡಿ**

ಎರಡನೆ ಸಂಚಿಕೆ ನಿಜಕ್ಕೂ ಅದ್ಭುತವಾಗಿದೆ. ಪ್ರತಿಯೊಂದೂ ಮನಮಿಡಿಯವ ಕತೆಗಳು.

**ಮಹಾಲಿಂಗಪುರ** **ಮಹೇಶ**

'ಭಾವನಾ'ದ ವಿನ್ಯಾಸ ಹಾಗೂ ಸಂಯೋಜನೆ ಚೆನ್ನಾಗಿವೆ. ಪ್ರತಿ ಸಂಚಿಕೆಯಲ್ಲಿ ಒಂದೆರಡು ವಿಮರ್ಶಾತ್ಮಕ ಲೇಖನಗಳಿದ್ದರೆ ಚೆನ್ನಾಗಿರುತ್ತದೆ. ಬಿಡಿ ಕವಿತೆ ಪ್ರಕಟಿಸದೆ ಕವಿತಾಗುಚ್ಛ ಪ್ರಕಟಿಸುತ್ತಿದ್ದೀರಿ. ಇದು ಒಳ್ಳೆಯದೇ. ಮೊದಲೆರಡು ಸಂಚಿಕೆಗಳೂ ಮುದ್ರಣ ದೋಷಗಳಿಲ್ಲದೆ ಬಂದಿವೆ.

**ಹೈದರಬಾದ್** **ಕೆ.ವಿ. ತಿರುಮಲೇಶ್**

ಬದುಕೇ ಒಂದು ಸ್ಪರ್ಧೆಯಾದಾಗ ಭಾವನೆಗಳೆಲ್ಲಿ? ಇಪ್ಪತ್ತೊಂದನೆಯ ಶತಮಾನದ ಈ ಗಣಕಯುಗದಲ್ಲಿ ಕೈಯಿಂದ ಬರೆಯುವುದೂ ಮರೆಯಾಗುತ್ತಿರುವಾಗ ಮತ್ತೆ ಭಾವನೆ ಹಾಗೂ ಲೆಕ್ಕಣಿಗೆಯ ಮಹತ್ವವನ್ನು ನೆನಪಿಸುತ್ತಿದ್ದೀರಿ. ಬರವಣಿಗೆಯ ವಿಸ್ಮಯದಲ್ಲಿ ನಂಬಿಕೆ ಇರುವ ನಮ್ಮಂಥವರಿಗೆ ನಿಮ್ಮ 'ಭಾವನಾ' ಅಪ್ಯಾಯಮಾನ.

**ಮುಂಬಯಿ** **ಮುಕುಂದ ಜೋಷಿ**

'ಭಾವನಾ'ದ ಎರಡೂ ಸಂಚಿಕೆ ನೋಡಿದ
ಮೊದಲನೇದಕ್ಕಿಂತ ಎರಡನೆಯದು ಪ
ಪೂರ್ಣ ಅನ್ನಿಸಿತು. ವಿವೇಕ ಶಾನಭಾಗ
'ಜಪಾನೀ ಪ್ರೇಮಕಾವ್ಯದ ಅರಸಿಯರು' ಹೃ
ವಾಗಿದೆ. ಹಾಗೇ ಗುಲ್ವಾಡಿಯವರ 'ಖಯಾಲ
ಖಯಾಲಿ,' ಒಂದು ಶಬ್ದದ ವಿವಿಧ ಸಾಂಸ್ಕೃತಿ
ಆಯಾಮಗಳನ್ನು ತೊಳೆ ತೊಳೆಯಾಗಿ ಬಿಡಿ
ಟ್ಟದೆ ಎನಿಸಿತು.

**ಧಾರವಾಡ** **ಕಮಲ ಹೆಮ್ಮ**

ಎರಡನೇ ಸಂಚಿಕೆ ತುಂಬಾ dilute ಆ
ಬಿಟ್ಟಿದೆ.

**ಗುಡದೂರು** **ಕಲಿಗಣನಾ**

ಪತ್ತೇದಾರರ ಪತ್ತೇದಾರ ಶ್ರೀ ಎನ
ನರಸಿಂಹಯ್ಯನವರ ಬಗ್ಗೆ ಓದಿ ತುಂಬಾ
ಸಂತೋಷವಾಯಿತು. ಅವರ ಪತ್ತೇದಾರಿಗಳ
ಓದಿ ಖ್ಯಾತ ಕತೆಗಾರರು, ಕಾದಂಬರಿಗಾರ
ಆಗಿರುವವರು ಹೇರಳ. ಅವರನ್ನು ನೆನೆಯುತ್ತಿ
ವವರು ವಿರಳ. ಅಂತಹವರನ್ನು ಪತ್ತೆಹ
ಪರಿಚಯಿಸಿ ಭಾವಚಿತ್ರ ಹಾಕಿದ್ದು ನಿಜಕ
ಸಂತೋಷದ ಸಂಗತಿ.

**ಬೆಂಗಳೂರು** **ಕೆ.ಕೆ. ಗಂಗಾಧರ**

ಎನ್. ನರಸಿಂಹಯ್ಯನವರ 'ಸಹವಾಸ'ದ
20 ವರ್ಷಗಳ ಹಿಂದೆ ಓದಿದ ಪುರುಷೋತ್ತಮ
ಮಧುಸೂದನ, ಗಾಳಿರಾಯನ ನೆನಪಾ

ಹೃದಯ ಬೆಚ್ಚಗಾಯಿತು. ಅವರ ಸಾಹಸಮಯ ಆತ್ಮಚರಿತ್ರೆ ಅನೇಕರಿಗೆ ಮಾರ್ಗದರ್ಶನ ವಾಗಬಹುದು. ಆದಷ್ಟು ಬೇಗ ಯಾರಾದರೂ ಪ್ರಕಾಶಕರು ಮುಂದೆ ಬರಲಿ.

**ಭದ್ರಾವತಿ** **ಜಿ. ನಾಗರಾಜ**

'ಭಾಸ್ಕರ ಹೆಗಡೆ' ಬರೆದ ಕಥೆ ''ಸುನೀತಾಗೆ ಮಲ್ಲಿಗೆ ಎಂದರೆ ಇಷ್ಟ'' ಎಂಬ ಕಥೆ ಮನಮಿಡಿ ಯುವಂತಿದೆ.

**ಶಂಕರ ಎಸ್. ಹೂಗಾರ** **ಶಿರೂರ**

ನಾಗರಾಜ ಕಡೆಗೂ ಮುಗ್ಧ ಪ್ರೀತಿಯ ಕತ್ತನ್ನು ನವಿರಾಗಿ ಕತ್ತರಿಸಿದ ಪರಿ ನೋವುಂಟು ಮಾಡಿತು.

**ಉತ್ತರ ಕನ್ನಡ** **ಗಣಪತಿ ಬಾಳೆಗದ್ದೆ**

'ಆಯಿ ಬರೆದ ಭಾಷ್ಯ' ಕತೆಯ ಕುರಿತು-ಅಭಿನಂದನೆ ಯನ್ನು ಯಾರಿಗೆ ಸಲ್ಲಿಸೋದು? ಕತೆ ಬರೆದ ಕತೆಗಾರ್ತಿಯವರಿಗೋ ಇಲ್ಲ ಸಂಪಾದಕರಿಗೋ ಅಥವಾ ಮತ್ತೆ ಮತ್ತೆ ಸುರಿಯುತ್ತ, ನೆನಪುಗಳ ಕೆದಕುತ್ತ, ಇಡೀ ಕತೆಗೆ ಒಂದು ಅರ್ಥಪೂರ್ಣ ಹಿನ್ನೆಲೆ ಒದಗಿಸಿದ ಮಳೆಗೋ? ಒಂದು ಸುಂದರ ಕತೆ, ಅಭಿನಂದನೆಗಳು. 'ಕಾಗದದ ದೋಣಿ' ಪರಿಕಲ್ಪನೆಯೇ Wonderful ತುಂಬಾ ಖುಷಿ ಕೊಡುವ ಕಾಲಮ್ಮು.

**ಬೆಂಗಳೂರು** **ಎಂ. ಎಚ್. ನಾಯಕ ಬಾಡ**

'ಗರಿ'ಯಲ್ಲಿ ಸಂಗ್ಯಾ-ಬಾಳ್ಯಾ ಕತೆ ಕುರಿತು ಬರೆಯುವ ಕೆ.ವಿ. ಅಕ್ಷರ ಅವರು, ''ಪತ್ತಾರ ಮಾಸ್ತರ ಇದನ್ನು ಬರೆದು ನಾಟಕ ಮಾಡಿಸಿದರು ಅಂತಾರೆ.'' ಅದನ್ನು ಡಾ|| ಚಂದ್ರಶೇಖರ ಕಂಬಾರರು ಪರಿಷ್ಕರಿಸಿ ಬರೆದ ಬಗ್ಗೆ ಪ್ರಸ್ತಾಪ ಮಾಡದೆ ಇರುವುದು ಅಚ್ಚರಿ ಮೂಡಿಸಿತು.

**ಬೆಂಗಳೂರು** **ಗುಡಿಹಳ್ಳಿ ನಾಗರಾಜ**




'ಕಾಗದದ ದೋಣಿ'ಗೆ ಎರಡು ದಡಗಳಿವೆ. ಎರಡು ಗುರಿಗಳಿವೆ. ಈ ಎರಡರ ನಡುವೆ ಅಸಂಖ್ಯಾತ ಬಿಂದುಗಳಿವೆ. ಈ ಬಿಂದುಗಳು ಗುರಿಯಾಗಬಹುದಾದ ಸಾಧ್ಯತೆಗಳಿವೆ.

ಯಾರೋ ಒಬ್ಬರನ್ನು ಹುಡುಕಲು ಹೊರಗೆ ಬಂದಾಗ, ಬಂದವರನ್ನು ಹುಡುಕುತ್ತಿರುವವರ ಕಣ್ಣಿಗೆ ಹುಡುಕಲು ಬಂದವರು ಸಿಕ್ಕಿಬೀಳುತ್ತಾರೆ.

'ಸ. ಉಷಾ' ಅವರ ಕಾಗದದ ದೋಣಿ ನನ್ನ 'ಭಾವನೆ'ಗಳನ್ನು ಎಬ್ಬಿಸಿದೆ.

**ಕೋಲಾರ** **ಕೆ.ಜಿ. ರುಕ್ಮಿಣಿ**

ಸಾಹಿತಿಗೂ ಕಲಾವಿದನಿಗೂ ಎಷ್ಟೊಂದು ಮಹತ್ವದ ಸಂಬಂಧ ಇದೆ ಎನ್ನುವುದು ಕಥೆಗೆ ತಕ್ಕಂತೆ ರಚಿಸಿರುವ ಚಿತ್ರವನ್ನು ನೋಡಿದರೆ ಅರ್ಥವಾಗುತ್ತದೆ.

**ಗುಲಬರ್ಗಾ** **ಸಂಗಮೇಶ**

ಶ್ರೀಶಂಕರ ಪಾಟೀಲ ಅವರು ಬಿಡಿಸಿದ ರೇಖಾ ಚಿತ್ರಗಳು ತುಂಬ ಅರ್ಥಪೂರ್ಣ.

**ಧಾರವಾಡ** **ಬಸವರಾಜ ಚ. ಕರಕರಡ್ಡಿ**

'ಭಾವನಾ' ಎಲ್ಲರ ಮನಮುಟ್ಟಿದೆ. ಆದರೆ ನೀವು ಕೊಡುವ 160 ಪುಟಗಳು ತಿಂಗಳಪೂರ್ತಿ ಆಹಾರವಾಗಲಾರದು ಎಂಬ ವ್ಯಥೆಯೂ ನಮ ಗಿದೆ. ಇದಕ್ಕೆ ಒಂದು ಪುಟ್ಟ ಸಲಹೆ: ''300 ಪುಟ ಕೊಡಿ. ಬೆಲೆ 10 ರೂ. ಮಾಡಿ.

**ಬೆಂಗಳೂರು** **ಕೆ. ಮೈಥಿಲಿ**





# ಕೊನೇ-ಸಿಪ್

**ಚಂದಮಾಮ**

- ಅಜ್ಜ ತೀರಿಕೊಂಡಾಗ ಮೂರು ವರುಷದ ಮಗುವಿಗೆ "ಅಜ್ಜ ಸ್ವರ್ಗಕ್ಕೆ ದೇವರ ಬಳಿ ಹೋಗಿದ್ದಾ ಮರೀ" ಎಂದು ಹೇಳಿದರು. ಮರುವರ್ಷ ಅಜ್ಜನ ಪುಣ್ಯತಿಥಿಯ ದಿನ ಗೋರಿಯ ಮೇ ಹೂವಿಡಲು ಸ್ಮಶಾನಕ್ಕೆ ಹೋದರು. ಮಗು ಕೇಳಿತು "ಓಹೋ, ಹಾಗಾದರೆ ಇದೇನಾ ಸ್ವರ್ಗ?
- ಹಿಂದುಸ್ತಾನ್ ಲಿವರ್ (lever) ಕಂಪನಿಯಲ್ಲಿದ್ದ ವಿವೇಕ ಶಾನಭಾಗ್ ಕೊನೆಗೂ ಹಿಂದುಸ್ತಾನ 'ಲೀವರ್' (leaver) ಆಗಿ ಲಂಡನ್‌ಗೆ ಹೋದರು ಎಂದು ಕೆಲವರ ಅಂಬೋಣ. ಆದರೆ ಆ 'ಲೀವರ್ ಲಿಮಿಟೆಡ್' ಆದರೆ ವಾಪಸ್ಸು ಬೇಗ ಬರಬಹುದು ಎಂದು ನಮ್ಮೆಲ್ಲರ ಆಸ ಇಲ್ಲಿದ್ದಾಗಲೂ ಆತನ ಬೆಂಗಳೂರಿನ ವಿಳಾಸ ನೋಡಿದ್ರೆ (ವಿಕ್ಟೋರಿಯನ್ ವಿಲ್ಲಾ, ಅಲೆಕ್ಸಾಂಡ ಸ್ಟ್ರೀಟ್, ರಿಚ್‌ಮಂಡ್ ಟೌನ್) ಅದೂ ಥೇಮ್ಸ್ ನದಿಯ ಎಡಬಲದಲ್ಲಿದೆಯೋ ಅನಿಸುವಂಥದ್ದೇ! ನೀಂಗಳೆ ಸೊಲ್ಲುಂಗೋ... ವಾಟಾಳ್... ಎಲ್ಲಿದ್ದೀರಿ ಸ್ವಾಮೀ?
- ಹೃತಿಕ್ ರೋಷನ್ ಈಚೆಗೆ ರಾಬರಿ ದೇವಿಯನ್ನು ಭೇಟಿಯಾಗಿ ಕೈಕುಲುಕಿದಾಗ, ದಿನಾ ಸಾವಿರಾರು ಕಡ್ತಗಳಿಗೆ ಹೆಬ್ಬೆರಳೊತ್ತುವ ಆಕೆ, ಆತನ extra ಹೆಬ್ಬೆರಳು ನೋಡಿ ಪೇಚಾಡು "ಓದು ಬರಹ ಬಲ್ಲ ಈ ಹೀರೋಗೆ ಯಾಕೆ ಈ ಸ್ಪೆಷ್ಲಿ ಥಂಬ್?" ಎಂದು ಗೊಣಗಿದಳಂತೆ.
- ಮುಖ್ಯಮಂತ್ರಿಯ ಹೆಸರು ರಾಬರಿದೇವಿ ಅಂದಮಾತ್ರಕ್ಕೆ ಬಿಹಾರದಲ್ಲಿ ಡೇ ಲೈಟ್ 'ರಾಬ ಆಗುತ್ತದೆ ಎಂದೆಲ್ಲ ಹೇಳುವುದು ತರವಲ್ಲ. ಹಾಂ.... ಬೇಕಿದ್ದರೆ 'ಡೇ ನೈಟ್ ರಾಬ ಅನ್ನಬಹುದೇನೋ ('ಡೇ ನೈಟ್ ಮೆಡಿಕಲ್'ನಂತೆ).
- ಹೆಸರಿಗೆ ಸಂಬಂಧಿಸಿದಂತೆ ಮತ್ತೊಂದು ವಿಚಿತ್ರ. Starry nights, Socialite evening ಗಳಂಥ ಕಾದಂಬರಿ ಬರೆದವರು ಶೋಭಾ 'ಡೇ' ಯಾಕಾಗಬೇಕಿತ್ತು?... ಎನ್ನಡಿಡೇ? ಅ ತಮಿಳಿನಲ್ಲಿ ಕೇಳಬಹುದು.
- ಗುಜರಾತಿನ ಅಮುಲ್ ಕಂಪನಿಯವರು ಈಗ ಹದಿನಾಲ್ಕು ರೂಪಾಯಿಗೆ ಒಂದು ಬಾಟಲಿ ನೀ ಮಾರಬೇಕಂತ ನಿರ್ಧಾರ ಮಾಡಿದ್ದಾರಂತೆ. ಆದರೆ ಒಂದು ಬಾಟಲಿ ಹಾಲಿಗೆ 12 ರೂಪಾಯ ಹೀಗಿರುವಾಗ ಹಾಲಿಗೆ ನೀರು ಬೆರೆಸುವ ಅಗತ್ಯವಾದರು ಏನು? ಹಂಸಕ್ಷೀರ ನ್ಯಾಯ ಎಂದ ಇದೇ ತಾನೆ?!
- **ಕಚಗುಳಿ:** ಮೇಲಧಿಕಾರಿಯ ಜೊತೆ ಮಾತಾಡುವಾಗ ಯಾವಾಗಲೂ "ಸ್ವಲ್ಪ.... ರಜೆ ಬೇಕಿತ್ತು "ಸ್ವಲ್ಪ... ಬೇಗ ಹೋಗಬೇಕಿತ್ತು", "ಸ್ವಲ್ಪ.... ಜ್ವರ ಬಂದಿತ್ತು" - ಎಂದು ಭಯ ಹಿಂಜರಿಕೆಯಿಂದ ಎಲ್ಲವನ್ನೂ 'ಸ್ವಲ್ಪ'ಗೊಳಿಸಿ ಮಾತನಾಡುವ ಮುಗುದೆ ಒಂದು ದಿನ "ಸರ್.. ನಾನು ಸ್ವಲ್ಪ... ಪ್ರೆಗ್ನೆಂಟ್ ಆಗಿದೀನಿ," ಅಂತ ಶುರುಮಾಡಿದಳು.

Printed, published and owned by **Vijay Sankeshwar**, Published at 1st Floor, "Giriraj Annexe', P.W.D. Circuit House Road, HUBLI - 580 029 Karnataka Ph: 253656, 253657, 253658. Fax: 0836-253
Printed at Anand Printers & Publishers, 6/127, 5th Cross, KPN Extn., Bangalore - 560 022
Editor-in-Chief: **Santoshkumar Gulvady** Editor: **Jayant Kaikini**

